# ಸ್ಪಂದನ

ಡಾ|| ವಿಜಯಾ ಸುಬ್ಬರಾಜ್

ಸಿವಿಜಿ ಪಬ್ಲಿಕೇಷನ್ಸ್
ಬೆಂಗಳೂರು



# SPANDANA

by
**Dr. Vijaya Subbaraj**
No.51, 'Hamsi'
Hathimabbe Road
Ist 'A' Cross, 30th Main
Banagiri Nagar
Banashankari 3rd State
Bangalore -560 085
Ph : 26793219

**CVG Publications**
No.70, 2nd Main Road
Jabbar Block, Vyalikaval
Bangalore - 560 003
Phone: 2331 3400



Pages : xiv+158 = 172 Price : Rs. **140/-**
First Impression : 2005

**D.T.P. by**
**Chandragiri Graphics**
Bangalore

**Printed at**
**Shakthi Printers & Publishers**
No. 277, 5th Cross
Vidhana Soudha Extn.
Kavidhama Nagar, Laggere
Bangalore-560 058
Phone: 080-22712299, 55306043

# ಅರ್ಪಣೆ

ನನ್ನ ಸಾಹಿತ್ಯಾಸಕ್ತಿಯನ್ನು ಜೀವಂತವಾಗಿ ಉಳಿಸಿದ,
ಬೆನ್ನು ತಟ್ಟಿ ಪ್ರೋತ್ಸಾಹಿಸಿದ ಹಿರಿಯ ಕಿರಿಯ ಸಾಹಿತ್ಯ

**ಮಿತ್ರರೆಲ್ಲರಿಗೆ**

# ನನ್ನ ಮಾತು

'ಸ್ಪಂದನ', ನನ್ನ ಎರಡನೆ ವಿಮರ್ಶಾ ಸಂಕಲನ. ವಿಮರ್ಶೆಯ ಕ್ಷೇತ್ರದಿಂದ ದೂರವಿದ್ದ ನಾನು ಕೆಲವು ಕಾರಣಗಳಿಗಾಗಿ ವಿಮರ್ಶಾಲೇಖನಗಳನ್ನು ಬರೆಯಬೇಕಾದ ಅನಿವಾರ್ಯತೆ ಒದಗಿತು. ವಿಮರ್ಶೆಯನ್ನು ಒಂದು ಸವಾಲಿನಂತೆ ಸ್ವೀಕರಿಸಿ ಪ್ರಜಾವಾಣಿಯಲ್ಲಿ ಸಾಪ್ತಾಹಿಕ ಪುರವಣಿ' ವಿಭಾಗದಲ್ಲಿ ಅಂಕಣ ವಿಮರ್ಶೆಗಳನ್ನು ಬರೆಯ ತೊಡಗಿದೆ. ಒಳ್ಳೆಯ ಪ್ರೋತ್ಸಾಹ, ಮೆಚ್ಚುಗೆಗಳಿಂದ ಉತ್ಸಾಹಗೊಂಡು ಲೇಖನಗಳನ್ನು ಬರೆಯ ತೊಡಗಿದೆ. ಪ್ರಸ್ತುತ ಸಂಕಲನದಲ್ಲಿ 'ವಿಚಾರಸಂಕಿರಣ' ಅಭಿನಂದನಾಗ್ರಂಥಗಳಿಗೆ ಸಿದ್ಧಪಡಿಸಿದ ಹದಿಮೂರು ಲೇಖನಗಳಿವೆ. ಈ ಲೇಖನಗಳ ಸಂಕಲನಕ್ಕೆ ಆತ್ಮೀಯ ಗೆಳೆಯರಾದ ಡಾ. ಎಚ್. ಎಸ್. ರಾಘವೇಂದ್ರ ಅವರು ನನ್ನ ಒತ್ತಾಯಕ್ಕೆ ಕಟ್ಟು ಬಿದ್ದು ಆತ್ಮೀಯವೂ ಮತ್ತು ಆತ್ಮೀಯ ಮಾತುಗಳ ಒಡಲೊಳಗೆ ಕೆಲವು ಸಲಹೆ, ಸೂಚನೆಗಳನ್ನು ಅಡಗಿಸಿ, ವಿಮರ್ಶೆಯಲ್ಲಿ, ವಿಮರ್ಶೆಯ ದೃಷ್ಟಿಯಲ್ಲಿ ಸುಧಾರಣೆಯಾಗಬೇಕಾದ ದಿಕ್ಕನ್ನು ಸೂಚಿಸುವ ಮುನ್ನುಡಿಯನ್ನು ಬರೆದು ಕೊಟ್ಟು, ಸಹಕರಿಸಿದ್ದಾರೆ. ಈ ನನ್ನ ಕಿರಿಯಗೆಳೆಯನಿಗೆ ನನ್ನ ಹೃದಯ ಪೂರ್ವಕ ಕೃತಜ್ಞತೆಗಳು. ಹಾಗೆಯೇ ಹಿರಿಯರೂ, ವಿದ್ವಾಂಸರೂ ಆದ ಡಾ. ಸಿ. ಎನ್. ರಾಮಚಂದ್ರನ್ ಅವರು ನಾನು ಕೇಳಿದ ಕೂಡಲೇ ಪ್ರೀತಿ, ವಿಶ್ವಾಸಗಳಿಂದ ಬೆನ್ನುಡಿ ಬರೆದು ಬೆನ್ನು ತಟ್ಟಿದ್ದಾರೆ. ಇವರಿಗೆ ನನ್ನ ಗೌರವ ಪೂರ್ವಕ ಕೃತಜ್ಞತೆಗಳು. ವಿಶೇಷವಾಗಿ ಸಿವಿಜಿ ಪ್ರಕಾಶನದ ಚಂದ್ರು ಅವರು ನನ್ನ ಈ ಎರಡನೆ ವಿಮರ್ಶಾ ಸಂಕಲನವನ್ನೂ ಪ್ರಕಟಿಸಲು ಮುಂದಾಗಿರುವುದು ನನ್ನ ಹೆಚ್ಚಿನ ಸಂತೋಷಕ್ಕೆ ಕಾರಣವಾಗಿದೆ. ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು

**ಡಾ. ವಿಜಯಾಸುಬ್ಬರಾಜ್**

# ಆರದಿರಲಿ ಬೆಳಕು

ಈ ಬರೆಹವು ಹಳೆಯ ನೆನಪುಗಳಿಂದ ಮೊದಲಾಗುವುದು ಕೇವಲ ಸಹಜ. ಮೂವತ್ತೆಂಟು ವರ್ಷಗಳ ಹಿಂದೆ. ನನ್ನ ಜೊತೆಗೆ ಕನ್ನಡ ಎಂ. ಎ. ತರಗತಿಯಲ್ಲಿ, ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದ ಡಾ. ವಿಜಯಾ ಸುಬ್ಬರಾಜ್ ಅಲಿಯಾಸ್ ಸಿ. ಎಸ್. ವಿಜಯಲಕ್ಷ್ಮಿ ಅಲಿಯಾಸ್ ವಿಜು ಅವರು, ಇಂದಿನಂತೆ ಅಂದೂ ಉತ್ಸಾಹದ ಚಿಲುಮೆಯೇ ಆಗಿದ್ದರು. ಸಂಗೀತದಿಂದ ಸಾಹಿತ್ಯದವರೆಗೆ, ನೃತ್ಯದಿಂದ ನಾಟಕದವರೆಗೆ, ಕನ್ನಡದಿಂದ ಗುಜರಾತಿಯವರೆಗೆ ಹತ್ತು ಹಲವು ಆಸಕ್ತಿಗಳ ತವರುಮನೆಯಾಗಿದ್ದ ವಿಜು, ಸಾವು ಗೆಳೆಯರ ಗುಂಪನ್ನು ಇನ್ನಷ್ಟು ಜೀವಂತವಾಗಿ, ಇನ್ನಷ್ಟು ಆಸಕ್ತವಾಗಿ ಮಾಡಿದ್ದರು. ಇವರ ಹಾಗೆಯೇ, ಇವರ ಜೀವದ ಜೊತೆಗಾತಿಯಾದ ಶ್ರೀಮತಿ ಪುಷ್ಪಕುಮಾರಿ ಉರುಫ್ ಪುಷ್ಪಾಸ್ವಾಮಿ ಉರುಫ್ ಮೇಡಂ ಕೂಡ. ನ್ಯಾಷನಲ್ ಕಾಲೇಜಿನ ಕುಡುಮಿ ಬಳಗದಿಂದ ಬಂದ ನಾಚಗುಳಿ ನನಗೆ, ಇವರೆಲ್ಲರೂ ಜೀವನದ ಅನೇಕ ಆಯಾಮಗಳನ್ನು ವಾತ್ಸಲ್ಯದೊಂದಿಗೆ ಪರಿಚಯಿಸಿದವರು. ಇವರುಗಳ ಪ್ರಸ್ತಾಪ, ನೆನಪು ಬಂದಾಗ ನನ್ನ ಮನಸ್ಸು-ವಯಸ್ಸುಗಳು ಒಂದಷ್ಟು ಹಿಂದೆ ಸರಿಯುತ್ತವೆ. ಕನಸು ನನಸುಗಳ ಅಂತರವನ್ನು ಅಳೆದು ನೋಡುತ್ತವೆ. ಒಂದು ಬಗೆಯ ನಿರ್ಮಮತೆಯಿಂದ, ಇನ್ನೊಂದು ಬಗೆಯ ಭಾವುಕತೆಯಿಂದ. ಇವೆರಡೂ ಒಟ್ಟಿಗೆ ಇರಬಾರದ ವಿರೋಧಿಗಳೇನೂ ಅಲ್ಲ.

ಅಂದಿನಿಂದ ಇಂದಿನವರೆಗೆ, ವಿಜಯಾ ಅವರಿಗೆ ಕಲಿಯುವ, ಕಲಿಸುವ, ಅಭಿವ್ಯಕ್ತಿಸುವ ಆಸಕ್ತಿ ಕರಗಿಲ್ಲ, ಅದೃಷ್ಟವಶಾತ್ ಕರಗುವುದೂ ಇಲ್ಲ. ನನ್ನ ಕಾಲದ ಲೇಖಕಿಯರು ಎದುರಿಸಿದ ಸವಾಲುಗಳನ್ನು ಕಂಡು ಕೊಂಡ ಹೊರದಾರಿ-ಒಳದಾರಿಗಳನ್ನು, ನೋಡುತ್ತಾ ಬಂದ ನನಗೆ ಈ ಎಲ್ಲ ದಾರಿಗಳ ಬಗ್ಗೆಯೂ ಗೌರವವಿದೆ. ಕುತೂಹಲವಿದೆ. ಏಕೆಂದರೆ, ಇವರೆಲ್ಲರೂ ಹೆಜ್ಜೆಮೂಡದ ಹಾದಿಯ ಪಯಣಿಗರು. ಅಷ್ಟೇ ಅಲ್ಲ, ಪುರುಷನಿರ್ಮಿತ ಅಭಿವ್ಯಕ್ತಿಯೆಂಬ ಕಲ್ಲುಕೋಟೆಯ ಒಳಗೆ, ಅನನ್ಯತೆ- ಸಮಾನತೆಗಳೆಂಬ ಪರಸ್ಪರ ವಿರುದ್ಧವೆನಿಸುವ, ಆದರೆ ಹಾಗೆ ಅಲ್ಲದಿರಬಹುದಾದ ಜೋಡಿ ಬೇಡಿಕೆಗಳ ಸಹಿತ ಪ್ರವೇಶಿಸಲು ಇವರುಗಳು ಪ್ರಯತ್ನಿಸುತ್ತಿದ್ದಾರೆ. ಪ್ರಸ್ತುತ ಲೇಖಕಿಯೂ ಈ ಮಾತಿಗೆ ಅಪವಾದವಲ್ಲ.

ವಿಜಯಾ ಅವರು, ಹಲವು ಮಾಧ್ಯಮಗಳಲ್ಲಿ ತಮ್ಮ ಪ್ರಯೋಗಶೀಲತೆಯನ್ನು ದುಡಿಸಿಕೊಂಡವರು, ಕಥೆ, ಕವಿತೆ, ನಾಟಕ, ಕಾದಂಬರಿ, ಪ್ರವಾಸ ಕಥನ, ವೈಚಾರಿಕ ಬರೆಹ ಮುಂತಾದ ವಿಭಿನ್ನ ಪ್ರಕಾರಗಳಲ್ಲಿ ಅವರ ಶಕ್ತಿ, ಪ್ರತಿಭೆಗಳು ವಿನಿಯೋಗವಾಗಿವೆ. ಇಂಥ ಹುಡುಕಾಟವೂ ಅಂತಿಮವಾಗಿ, ವಿಫಲವಲ್ಲ. ಅವರು ವಿಮರ್ಶೆಯ ಕೆಲಸವನ್ನು ಹಲವು ಕಾಲದಿಂದ ಮಾಡುತ್ತಿದ್ದರೂ ಸಂಕಲನಗಳನ್ನು ಹೊರತರುತ್ತಿರುವುದು ಇದೇ ಮೊದಲೆಂದು ತೋರುತ್ತದೆ. ಕನ್ನಡದ ಗೀತನಾಟಕಗಳನ್ನು ಕುರಿತ ಅವರ ಸಂಶೋಧನಪ್ರಬಂಧವು ಬಹಳ ಹಿಂದೆಯೇ ಪ್ರಕಟವಾಗಿದೆ. 'ಸ್ಪಂದನ' ಎಂಬ ಈ ಕೃತಿಯಲ್ಲಿ ಹದಿಮೂರು ಲೇಖನಗಳಿವೆ. 'ಸ್ಪಂದನೆಗಳ ಸಹಯೋಗ' ಎಂಬ ಮಾತಿನಿಂದಲೇ ಸ್ಪಷ್ಟವಾಗುವಂತೆ, ಪ್ರತಿಯೊಂದು ಕೃತಿಯ ಓದಿಗೆ ಅಗತ್ಯವಾದ ಭಾವಸ್ಥಿತಿಯನ್ನು ಪಡೆದುಕೊಳ್ಳಲು ಲೇಖಕಿ ಪ್ರಯತ್ನಿಸಿದ್ದಾರೆ. ಅಥವಾ ಆ ಕೃತಿಯು ತಮ್ಮಲ್ಲಿ ಮೂಡಿಸಿದ ಭಾವನೆಗಳನ್ನು ವಿಚಾರಗಳ, ಭಾಷೆಯ ಬಲೆಯಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಆದರೆ ಸಹಜವಾಗಿಯೇ ಕೃತಿಯು ಕಟ್ಟಿಕೊಡುವ ಭಾವಸ್ಥಿತಿಗೂ ಲೇಖಕಿಗೆ ಸಹಜವಾದ ಅವರು ಅನುಭವ ಆಕೃತಿಗಳನ್ನು ಸ್ವೀಕರಿಸುವ ಭಾವಸ್ಥಿತಿಗೂ ಕೆಲವು ಸಲ ಸಂಘರ್ಷವು ಏರ್ಪಡುತ್ತದೆ. ವಿಮರ್ಶೆಯು ಹುಟ್ಟುವ ಸಂಧಿಸ್ಥಾನವು ಇದೇ ಆಗಿದೆ. ಇತರರಂತೆ ಇವರೂ ಕೂಡ ತಮ್ಮ ಭಾವನೆಗಳು ಹೇಳಿದ್ದಕ್ಕೆ ಬೌದ್ಧಿಕವಾದ ಸಮರ್ಥನೆಗಳನ್ನು ನೀಡಬೇಕಾಗುತ್ತದೆ. ನೀಡಿದ್ದಾರೆ.

ಇಲ್ಲಿನ ಹದಿಮೂರು ಲೇಖನಗಳು ಪುರುಷರಿಂದ ರಚಿತವಾದ ಕೃತಿಗಳನ್ನು ಕುರಿತಂತೆ ಮಾತ್ರವೇ ಇದೆಯೆನ್ನುವುದು ಆಕಸ್ಮಿಕವೆಂದು ನನಗೆ ತೋರುವುದಿಲ್ಲ. (ಉಳಿದ ಎರಡು ಲೇಖನಗಳೂ ತಾತ್ವಿಕ ಚರ್ಚೆಗಳೇ ವಿನಾ ಮಹಿಳೆಯರ ಕೃತಿಗಳನ್ನು ಕುರಿತವಲ್ಲ) ಮಹಿಳೆಯರ ಬರೆಹಗಳ ಸಮರ್ಥನೆ, ವೈಭವೀಕರಣ, ಟೀಕೆ ಮುಂತಾದ ಕೆಲಸಗಳಲ್ಲಿ ಇವರು ತೊಡಗುವುದಿಲ್ಲ. ಸ್ತ್ರೀವಾದವನ್ನು ಕುರಿತ ಇಲ್ಲಿನ ಲೇಖನವು ಅದರ ನಿಲುವುಗಳ ಬಗ್ಗೆ ಅಷ್ಟೊಂದು ಉತ್ಸಾಹವನ್ನು ತೋರಿಸುವುದಿಲ್ಲ. ಮಹಿಳೆಯರಿಗೆ ಆಗುತ್ತಿರುವ ಅನ್ಯಾಯ, ಶೋಷಣೆಗಳ ಬಗ್ಗೆ ಆತಂಕ, ಕೋಪಗಳನ್ನು ತೋರಿಸುವುದಕ್ಕೂ ಸ್ತ್ರೀವಾದೀ ಸಾಹಿತ್ಯ ವಿಮರ್ಶೆಯ ತಾತ್ವಿಕತೆ ಮತ್ತು ವಿಧಾನಗಳನ್ನು ಸಾರಾಸಗಟಾಗಿ ಒಪ್ಪಿಕೊಂಡು ಬರೆಯುವುದಕ್ಕೂ ಸಾಕಷ್ಟು ವ್ಯತ್ಯಾಸವಿದೆ. ಅವುಗಳ ನಡುವೆ ಖಂಡಿತವಾಗಿಯೂ ಅವಿನಾ ಸಂಬಂಧವಿಲ್ಲ. ಏಕೆಂದರೆ ಮಹಿಳೆಯರ ಶೋಷಣೆ ಮತ್ತು ಹಕ್ಕುಗಳ ಬಗೆಗಿನ ಆಲೋಚನೆಯು ಸಾರ್ವತ್ರಿಕವಾದರೆ, ಸ್ತ್ರೀವಾದೀ ಚಿಂತನೆಯು ಬಹುಮುಖಿಯಾದುದು. ಹಾಗೆಂದು, ವಿಜಯಾ ಅವರ ಬರವಣಿಗೆಯು, ಪುರುಷರಿಂದ ದತ್ತವಾದ ವಿಮರ್ಶೆಯ ಆಶಯ-ಆಕೃತಿಗಳನ್ನು ಸಾರಾಸಗಟಾಗಿ ಸ್ವೀಕರಿಸುವುದಿಲ್ಲ. ಹಾಗೆ ನೋಡಿದರೆ, ಕುವೆಂಪು, ಅನಂತಮೂರ್ತಿ, ಬೈರಪ್ಪನವರಂಥ ಬಹುಚರ್ಚಿತ ಲೇಖಕರ ಬಗ್ಗೆ ಬರೆಯುವಾಗಲೂ ವಿಜಯಾ, ಇದುವರೆಗೆ ನಡೆದಿರುವ ವಿಮರ್ಶೆಯ ಬಗೆಗೆ, ಸಾಮಾನ್ಯವಾಗಿ ಒಂದು ಬಗೆಯ ದಿವ್ಯನಿರ್ಲಕ್ಷ್ಯವನ್ನು ತೋರಿಸಿದ್ದಾರೆ. ಜಗಳವಾಡಲೆಂದೂ ಅವುಗಳನ್ನು ಹೆಸರಿಸುವುದಿಲ್ಲ. ಹಾಗೆಂದು ಅವರು ಅವುಗಳನ್ನು ಓದದೆ ಇಲ್ಲ. ನನಗೆ "ನನ್ನ ಓದು" ಮುಖ್ಯವೇ ಹೊರತು "ನಿಮ್ಮೆಲ್ಲರ ಓದು" ಅಲ್ಲವೆಂದು

ಹೇಳುವ ಬಗೆಯೂ ಇದಾಗಿರಬಹುದು. ಪರಿಣಾಮವಾಗಿ ಕನ್ನಡ ವಿಮರ್ಶೆಯ ಒಟ್ಟು ಚೌಕಟ್ಟಿನಲ್ಲಿ ಪುನರುಕ್ತಿಯೆನಿಸಬಹುದಾದ ಮಾತುಗಳೂ ಇಲ್ಲಿ "ಕಂಡು ಕೊಂಡ ಸತ್ಯ"ವಾಗಿದೆಯೇ ವಿನಾ "ಓದಿಕೊಂಡ ಸತ್ಯ" ವಾಗಿಲ್ಲ.

ಸ್ತ್ರೀವಾದವು. ಸಾಮಾಜಿಕ ನೆಲೆಯಲ್ಲಿ ಪಡೆಯುತ್ತಿರುವ ಪ್ರಸ್ತುತತೆ ಮತ್ತು ಪ್ರಚಾರಗಳನ್ನು ಸಾಹಿತ್ಯ ಸಿದ್ಧಾಂತಗಳ ನೆಲೆಯಲ್ಲಿ ಏಕೆ ಪಡೆಯುತ್ತಿಲ್ಲವೆನ್ನುವುದು ಕುತೂಹಲದ ಸಂಗತಿ. ಮಾನವಿಕಗಳು ಮತ್ತು ಸಮಾಜಶಾಸ್ತ್ರಗಳೂ ಸೇರಿದಂತೆ, ಅದು ನಮ್ಮ ಅಕಾಡೆಮಿಕ್ ಅಧ್ಯಯನಗಳ ಅಂತೆಯೇ ನಮ್ಮ ಶಾಲೆ ಕಾಲೇಜುಗಳ ಪಠ್ಯಕ್ರಮದ ಭಾಗವಾಗಿಲ್ಲದಿರುವುದು ಒಂದು ಮುಖ್ಯ ಕಾರಣ. ಹಾಗೆಯೇ ಪ್ರಮುಖ ಸ್ತ್ರೀವಾದೀ ಚಿಂತಕರ ಬರವಣಿಗೆಯು ಇಂಗ್ಲಿಷಿನಲ್ಲಿ ಮಾತ್ರ ದೊರೆಯುತ್ತಿದ್ದು, ಕನ್ನಡವು ಅದನ್ನು ತನ್ನೊಳಗೆ ತೆಗೆದುಕಳ್ಳಲು ಹಿಂಜರಿಯುತ್ತಿರುವುದರಿಂದ ಅದು ಪಾಶ್ಚಾತ್ಯ ಹಾಗೂ ಪರಕೀಯ ಎಂಬ ಭಾವನೆಯು ಪ್ರಚಲಿತವಾದಂತಿದೆ. ಭಾರತೀಯ ಸಮಾಜಗಳು ಹೆಣ್ಣಿಗೆ ಸಾಕಷ್ಟು ಸ್ವಾತಂತ್ರ್ಯ ಮತ್ತು ಗೌರವಗಳನ್ನು ಕೊಟ್ಟಿತ್ತು ಎನ್ನುವ ನಿಲುವು ಒಂದು ಕಡೆಯಾದರೆ, ಕೆಳವರ್ಗಗಳ ಹೆಣ್ಣುಮಕ್ಕಳಿಗೆ ಮೇಲುವರ್ಗ/ಜಾತಿಯವರಿಗಿಲ್ಲದ ಸಮಾನತೆ - ಸ್ವಾತಂತ್ರ್ಯಗಳಿವೆಯೆನ್ನುವುದು ಇನ್ನೊಂದು ನಿಲುವು. ಇಂಥ ವಿಚಾರಗಳನ್ನು ಡಾ. ವಿಜಯಾ ಅವರೂ ತಮ್ಮ ಲೇಖನಗಳಲ್ಲಿ ಮಂಡಿಸಿದ್ದಾರೆ. ಈ ನಿಲುವುಗಳನ್ನು ಸ್ವಂತ ಅನುಭವ- ಅಧ್ಯಯನಗಳ ನೆಲೆಯಲ್ಲಿ ಮರು ಪರಿಶೀಲನೆ ಮಾಡುವುದು ಈ ಸಂದರ್ಭದಲ್ಲಿ ಕೆಲಸ ಮಾಡುತ್ತಿರುವ ಎಲ್ಲರ ಹೊಣೆಯಾಗಿದೆ. ಹಾಗೆ ನೋಡಿದರೆ, ಯಾವುದೇ ಭಯೋತ್ಪಾದನೆ ಅಥವಾ ಹಿಂಸೆಗಳಿಲ್ಲದ ಮಿಲಿಟಂಟ್ ಸ್ತ್ರೀವಾದವೂ ಕೂಡ ಸಾಕಷ್ಟು ಪ್ರಮಾಣದ ಸಮರ್ಥಕರನ್ನು ಪಡೆಯದಿರುವುದು ಆಳದ ರಾಜಕೀಯಗಳ ಪರಿಣಾಮವೇ ಆಗಿರಬಹುದು. ವಿಜಯಾ ಅವರ ಬರೆಹಗಳು ಹೆಣ್ಣಿನ ಅನುಭವದ ಮೂಸೆಯಲ್ಲಿ ಪುರುಷನಿರ್ಮಿತ ಪಠ್ಯಗಳನ್ನು ನೋಡುವ ಪ್ರಯತ್ನವನ್ನು ಮಾಡಿವೆ. ಕುವೆಂಪು, ಅನಂತಮೂರ್ತಿ ಹಾಗೂ ಭೈರಪ್ಪನವರು ಸೃಷ್ಟಿಸಿರುವ ಹೆಣ್ಣು ಪಾತ್ರಗಳ ಬಗ್ಗೆ ಇವರು ನೀಡಿರುವ ಒಳನೋಟಗಳನ್ನು ಹೋಲಿಸಿದಾಗ ಕೆಲವು ಕುತೂಹಲಕಾರಿಯಾದ ಸಂಗತಿಗಳು ಗೊತ್ತಾಗುತ್ತವೆ. ಪೀಂಚಲು, ಗೌರಿ ಮತ್ತು ನಂಜಮ್ಮ ಎಂಬ ಮೂರು ಮಾದರಿಗಳಲ್ಲಿ ನಮ್ಮ ಆಯ್ಕೆಯು ಯಾವುದೂ ಆಗಬೇಕಾಗಿಲ್ಲ. ಅವೆಲ್ಲವೂ"ದತ್ತವಾದ" ಮಾದರಿಗಳೇ ಹೊರತು "ವಾಸ್ತವದ" ಪ್ರತಿನಿಧೀಕರಣಗಳಲ್ಲ. ಪರೋಕ್ಷವಾಗಿ ವಿಜಯಾ ಅವರೂ ಅದನ್ನೇ ಹೇಳುತ್ತಿದ್ದಾರೆ.

ಡಾ. ವಿಜಯಾ ಸುಬ್ಬರಾಜ್ ಅವರು ಆರಿಸಿಕೊಂಡಿರುವ ವಿಮರ್ಶೆಯ ಶೈಲಿಯೂ ವಿವರಣೆ ವಿಶ್ಲೇಷಣೆಗಳ ನೆಲೆಯದು. ಇಂಥ ಕಡೆ, ತಾತ್ವಿಕತೆಯು ಒಳಗೆ ಅಡಗಿಕೊಂಡಿರುತ್ತವೆ. ಕೃತಿ ಮತ್ತು ಕೃತಿಗಾರರ ಬಗೆಗಿನ ಪ್ರೀತಿ- ಗೌರವಗಳು ಬರವಣಿಗೆಯ ಶೈಲಿಯನ್ನು ನಿರ್ಧರಿಸುತ್ತವೆ. ಭಿನ್ನಮತಗಳಿಗೆಸಿಗುವ, ವಿನಯಶೀಲವಾದ ಭಾಷಿಕರೂಪವು ದಪ್ಪಚರ್ಮದ ಓದುಗರಿಗೆ ತಲುಪದಿರಬಹುದು. ಇಲ್ಲಿನ ಪ್ರತಿಯೊಂದು ಲೇಖನವೂ ಗೌರವಸಹಿತವಾದ ಭಿನ್ನಮತವನ್ನು ವ್ಯಕ್ತಪಡಿಸುತ್ತವೆ. "ಭವ" ಮತ್ತು "ದಿವ್ಯ" ಗಳ ಆಶಯಗಳನ್ನು ವಿಮರ್ಶಿಸುವಾಗ ಸಾಕಷ್ಟು

ಪ್ರತ್ಯಕ್ಷವಾಗುವ ಈ ಭಿನ್ನಮತವು, “ಮಲೆಗಳಲ್ಲಿ ಮದುಮಗಳು” ಕಾದಂಬರಿಯ ಅ- ಲೌಕಿಕ ನೆಲೆಗಳನ್ನು ವಿವರಿಸುವಾಗ ಕೊಂಚ ಕೆಳದನಿಯಲ್ಲಿರುತ್ತವೆ. ತನಗಿಂತ ಭಿನ್ನವಾದುದನ್ನು ಗ್ರಹಿಸುವ, ಅವಕ್ಕೆ ಸ್ಪೇಸ್ ಅನ್ನು ಒದಗಿಸಿಕೊಡುವ, ಅದಕ್ಕೆ ಸಮರ್ಥನೆ ವಿವರಣೆಗಳನ್ನು ಕೊಡುವ ಈ “ಲಿಂಗನಿರ್ದಿಷ್ಟ ಗುಣ”ವು ತನ್ನದು ಮಾತ್ರವೇ ಸತ್ಯವೆಂದು ಆಗ್ರಹಿಸುವ “ಗಂಡು ಗರ್ವ”ಕ್ಕಿಂತ ಹೆಚ್ಚು ಆರೋಗ್ಯಕರವೇ ಇರಬಹುದು. ನೋಡಬೇಕು. ವಿಮರ್ಶೆಯಲ್ಲಿ ಸ್ವಂತಿಕೆ, ಖಚಿತತೆ, ನಿರ್ದಿಷ್ಟ ನಿಲುವು ಮುಂತಾದವನ್ನು ನಿರೀಕ್ಷಿಸುವುದರ ಹಿಂದೆ ಇರುವ “ರಾಜಕೀಯ”ದ ಒತ್ತಡಗಳು ಗಮನೀಯವಾದವು. ವಿವರಣಾತ್ಮಕವಾದ ಶೈಲಿಯ ಇನ್ನೊಂದು ಲಕ್ಷಣವೆಂದರೆ, ಅದು ಮಹತ್ವದ ಒಳನೋಟಗಳನ್ನು ವಿವರಗಳ ನಡುವೆ ಬಚ್ಚಿಟ್ಟುಬಿಡುತ್ತದೆ. “ಊರ್ವಶಿ”, “ಮಲೆಗಳಲ್ಲಿ ಮದುಮಗಳು” ಮುಂತಾದ ಲೇಖನಗಳಲ್ಲಿ ವಿಜು ಅವರು ಇಂಥ ಸಮಸ್ಯೆಯನ್ನು ಎದುರಿಸಿದ್ದಾರೆ. ವೈಯಕ್ತಿಕವಾಗಿ ಬಹಳ ಸುಂದರವಾದ ಮುಖವು, ಗ್ರೂಪ್ ಫೋಟೋಗಳಲ್ಲಿ ಕಳೆದುಹೋಗುವಂತೆ ಈ ಪುಸ್ತಕದಲ್ಲಿರುವ ಹೊಳಹುಗಳು ಅಡಗಿಕುಳಿತಿವೆ. ಜಿ.ವಿ. ಅಯ್ಯರ್ ಅವರ ರಾಮಾಯಣದ ಚಿತ್ರಕಥೆಯ ಬಗ್ಗೆ ಬರೆಯುವಾಗ, “ಕತೆಯ ಬೆಳವಣಿಗೆ ಶಬ್ದಗಳಲ್ಲಿ ವಿವರಣೆಗೊಳ್ಳುವುದಕ್ಕಿಂತಲೂ ಕ್ಯಾಮೆರಾ ಫೋಕಸ್ ಮೂಲಕ ವಿವರಗಳು ಬಿಚ್ಚಿಕೊಳ್ಳುತ್ತವೆ”, “ಬಂಡಾಯ, ಸ್ತ್ರೀವಾದಿ ಇತ್ಯಾದಿ ಸೋಗುಗಳು ಇಲ್ಲದೆಯೂ ಎಂಬತ್ತರ ದಶಕದಲ್ಲಿ ಹೆಚ್ಚಾಗಿ ಕೇಳಿಬಂದ ಸ್ತ್ರೀವಾದದ ತಾತ್ವಿಕನೆಲೆಗಳಿಂದಲೂ ಮತ್ತು ಸ್ತ್ರೀವಾದೀ ಚಿಂತನೆಯ ಹಿನ್ನೆಲೆಯಲ್ಲಿಯೂ ಈ ಪಾತ್ರಗಳು ಅಧ್ಯಯನಯೋಗ್ಯವಾಗಿವೆ,”(ಗೃಹಭಂಗ) “ಕಾಮ, ರತಿಸುಖ, ಸಂಭೋಗಗಳ ಉತ್ಕಟ ಸ್ಥಿತಿಯಲ್ಲಿ ಮಾತ್ರ ‘ಬಿಡುಗಡೆ’ಅಥವಾ ದೈವೀ ಸಾಕ್ಷಾತ್ಕಾರಗಳು ಸಾಧ್ಯವೆಂಬ ತಾತ್ವಿಕ ನಂಬಿಕೆಯಲ್ಲಿ ಇಂತಹ ವಿವರಗಳು ಬಂದಿರಬೇಕೆನಿಸುತ್ತದೆ. ಆಶ್ರಮ ಸಮುದಾಯಗಳಿಗೆ ಹೊಂದುವ ‘ಧರ್ಮ ಸಂಯಮಿತ ದಾಂಪತ್ಯ’ ಸಾಧ್ಯವೇ ಇಲ್ಲವೆನ್ನುವ ನೆಲೆಯ ತಾತ್ವಿಕ ಬದ್ಧತೆ ಬಹುಶಃ ಇಂತಹ ವಸ್ತು, ಪಾತ್ರಗಳ ಸೃಷ್ಟಿಗೆ ಕಾರಣವಾಗಿರೇಕು”. (ಭವ ಮತ್ತು ದಿವ್ಯ) “ವಿಸ್ತೃತವಾದ ವಾಸ್ತವ ಸಂಗತಿಗಳ ನಡುನಡುವೆ ಅವಾಸ್ತವ ಸಂಗತಿಗಳು ಸುಳಿಯುವುದಕ್ಕೆ ಸರಿಯಾದ ಸಮರ್ಥನೆ ಈ ಕಾದಂಬರಿಯಲ್ಲಿ ಸಾಧ್ಯವಾಗದೆ ಹೋಗಿದೆ”. (ಮಲೆಗಳಲ್ಲಿ ಮದುಮಗಳು) “ಭರತೇಶನಿಗೆ ಅರಸನೆಂಬ ಅಹಂಕಾರವಿಲ್ಲ, ಗಂಡೆಂಬ ಗರ್ವವಿಲ್ಲ, ಅವನ ಕೌಟುಂಬಿಕ ಯಶಸ್ಸಿಗೆ ಇದೇ ಕಾರಣ”, (ಭರತೇಶ ವೈಭವ) ಆರ್ಯ ವೈಶ್ಯ ಜನಾಂಗ, ಕನ್ಯಕಾಪರಮೇಶ್ವರಿ ಇತ್ಯಾದಿ ಪ್ರಯೋಗಗಳು ಈ ಕಾವ್ಯದ ಚೌಕಟ್ಟಿನಲ್ಲಿ, ಕಥಾ ಸಂದರ್ಭದಲ್ಲಿ ಅನಗತ್ಯವಾಗಿ ತೋರುತ್ತವೆ..... ಇಂತಹ ಒಂದು (ಜೈನ)ವಾತಾವರಣದಲ್ಲಿ, ಆ ಕುಟುಂಬದವರು ಅನ್ಯದೇವ ಆರಾಧನೆ, ಹೋಮಗಳಿಗೆ ಮನಸ್ಸು ತೆರುವುದು ವಿಸಂಗತಿಯಾಗಿ ಗೋಚರಿಸುತ್ತದೆ”,(ಚಾರುವಸಂತ) “ಸಾಹಿತ್ಯವಲ್ಲಿ ಅದರ (ಸ್ತ್ರೀವಾದದ) ಚರ್ಚೆ ಅಗತ್ಯಕ್ಕಿಂತಲೂ ಹೆಚ್ಚಾಗಿ ನಡೆದಿದೆ. ಲೇಖಕಿಯರು ಸ್ತ್ರೀವಾದೀ ನೆಲೆಯಿಂದಲೇ ಸಾಹಿತ್ಯಕ್ಕೆ ಸ್ಪಂದಿಸುವುದನ್ನು ಸ್ಥಗಿತವಾಗಿಸಿ ಬದುಕಿನ ಇತರೆ ಆಯಾಮಗಳತ್ತ ಚಿಂತಿಸುವಂತಾಗಬೇಕು. ಯಾವುದೇ ಒಂದು ವಾದಕ್ಕೆ ಬದ್ಧವಾಗಿ ಬರೆಯುವುದು ಕ್ರಮೇಣ ಕ್ಲೀಷೆಗೆ ದಾರಿಯಾಗುತ್ತದೆ”ಇಂತಹ ಒಳನೋಟಗಳು/ ಅಭಿಪ್ರಾಯಗಳು/ ಭಿನ್ನಮತಗಳು ಈ ಕೃತಿಯೊಳಗೆ ಅಡಗಿಕೊಂಡಿದ್ದು ಮೆಚ್ಚಿಗೆ, ಪರಿಶೀಲನೆ

ಮತ್ತು ಕೆಲವೊಮ್ಮೆ ಚರ್ಚೆಗೆ ಅರ್ಹವಾಗಿವೆ. ಅಂತಹ ಚರ್ಚೆಯನ್ನು ಸ್ವತಃ ಲೇಖಕಿಯೇ ಮುಂದುವರಿಸಬಹುದು. ಚರ್ಚೆಯ ಮಾತಿಗೆ ಬಂದರೆ, "ಚಾರುವಸಂತ",ದ ಅವರು ಹೇಳುವ ಬಗೆಯ ವಿಸಂಗತಿಯು ಜನ್ನನ "ಯಶೋಧರ ಚರಿತೆ"ಯಲ್ಲಿಯೂ ಇದೆಯಲ್ಲವೇ? ಮತಾಂತರ, ಮತಸಂಕರಗಳ ಸಂಕೀರ್ಣವಾಸ್ತವವು ನಿಜವಾಗಿಯೂ ಯಾವ ಬಗೆಯದು ಎನ್ನುವುದು ಕುತೂಹಲದ ಪ್ರಶ್ನೆಯಲ್ಲವೇ. ಸಾಹಿತ್ಯವಿಮರ್ಶೆಯು ಕೇವಲ "ಸಾಹಿತ್ಯ" ವಿಮರ್ಶೆಯಾಗದೆ ಸಂಸ್ಕೃತಿಯ ಹಲವು ಆಯಾಮಗಳನ್ನು ಒಳಗೊಳ್ಳುತ್ತಿರುವ ಈ ದಿನಗಳಲ್ಲಿ, ವಿಜಯಾ ಅವರ ಕೃತಿಯೂ ಆ ದಿಕ್ಕಿನಲ್ಲಿ ಚಲಿಸುತ್ತಿರುವುದನ್ನು ಗಮನಿಸಬಹುದು. ಒಂದು ಕೃತಿಯ ಬಗ್ಗೆ ಬರೆಯುವಾಗ ಸಮಗ್ರ ಸನ್ನಿವೇಶವನ್ನು ವ್ಯಾಪಕವಾಗಿ ಗಮನದಲ್ಲಿಡುವುದರಿಂದ ಈ ಪ್ರಯತ್ನವು ಇನ್ನಷ್ಟು ಯಶಸ್ವಿಯಾಗಬಹುದೆಂದು ನನಗೆ ತೋರುತ್ತದೆ. ಉದಾಹರಣೆಗೆ ಸಾ. ಶಿ. ಮರುಳಯ್ಯನವರ ಎರಡು ನಾಟಕಗಳ ಬಗ್ಗೆ ಬರೆಯುವುದು ಅನಿವಾರ್ಯವಾದಾಗಲೂ, ನಾಟಕ ಮತ್ತು ರಂಗಭೂಮಿಗಳನ್ನು ಕುರಿತ ವಿಜಯಾ ಅವರ ತಿಳಿವಳಿಕೆಯು ಕೆಲಸ ಮಾಡುತ್ತಿರಬೇಕು. ಕೃತಿನಿಷ್ಠ ವಿಮರ್ಶೆಯೂ ಅಂತಿಮವಾಗಿ ತೌಲನಿಕವೇ ಆಗಿರುತ್ತೆ. ಇಲ್ಲವಾದರೆ, ವಿಮರ್ಶೆಯು ಅನೇಕ ಬಾರಿ ಗುಣವಾಚಕಗಳ ಸುರಿಮಳೆಯಲ್ಲಿ ಕರಗಿಹೋಗುತ್ತದೆ. ಅಭಿನಂದನ ಗ್ರಂಥಗಳಿಗೆಂದು ಬರೆಯುವಾಗಲಂತೂ ಈ ರಿಸ್ಕ್ ಇನ್ನಷ್ಟು ಜಾಸ್ತಿ. ವಿಮರ್ಶಕರಲ್ಲಿ ಸೌಜನ್ಯಕ್ಕೂ ಹಿಂಜರಿಕೆಗೂ ಇರುವ ಗಡಿಗೆರೆಗಳು ಬಹಳ ತೆಳು. ಆದ್ದರಿಂದಲೇ ಡಾ. ವಿಜಯಾ ಅವರ ವಿಮರ್ಶೆಯು, ಹೊಗಳಿಕೆಯಲ್ಲಿ ಇನ್ನಷ್ಟು ಹಿಡಿತ ಮತ್ತು ಟೀಕೆಯಲ್ಲಿ ಇನ್ನಷ್ಟು ಹರಿತಗಳನ್ನು ಪಡೆದುಕೊಳ್ಳಬಹುದೆಂದು ನನಗೆ ತೋರುತ್ತದೆ. ವಯಸ್ಸು ಕಳೆದಂತೆ ಇದು ಕಷ್ಟವಾಗುವುದೆಂಬ ಸಂಗತಿಯು ನನಗೂ ಗೊತ್ತಾಗುತ್ತಿದೆ. ಆದರೂ ತಾರುಣ್ಯದ ಬಿರುಸು, ಬಿಸುಪುಗಳನ್ನು ಉಳಿಸಿಕೊಂಡು ಬರೆಯುವುದು ನಮ್ಮ ಗುರಿಯಾಗಬೇಕು.

ಈ ಪುಸ್ತಕದಲ್ಲಿರುವ ಕೆಲವು ಪ್ರಾಸಂಗಿಕವಾದ ಲೇಖನಗಳು ಇನ್ನಷ್ಟು ವಿಸ್ತಾರವಾಗಬಹುದಿತ್ತು. ದೃಷ್ಟಿಕೋನ ಯಾವುದೇ ಇರಲಿ, ಲೇಖಕಿಯರಿಂದ ನಿರ್ಮಿತವಾದ ಬರವಣಿಗೆಯನ್ನು ಪರಿಶೀಲಿಸುವ ಕೆಲಸದಲ್ಲಿ ವಿಜಯಾ ಅವರು ಸ್ವಲ್ಪವಾದರೂ ತೊಡಗಿಕೊಳ್ಳಬಹುದು ಎನ್ನಿಸುತ್ತದೆ, ನನಗೆ ತಿಳಿದಿರುವಂತೆ ತೆಲುಗು, ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳನ್ನು ಚೆನ್ನಾಗಿಬಲ್ಲ ಅವರು ಆ ಭಾಷೆಗಳ ತಿಳಿವಳಿಕೆಯನ್ನು ಕನ್ನಡದಲ್ಲಿ ಬೆಳಕಿಗೆ ತರುವ ಮತ್ತು ಬಳಸಿಕೊಳ್ಳುವ ಕೆಲಸವನ್ನು ಇನ್ನಷ್ಟು ವ್ಯಾಪಕವಾಗಿ ಮಾಡಬಹುದು. ವಿಮರ್ಶೆಯೂ ಕತೆ, ಕಾದಂಬರಿಗಳಷ್ಟೇ 'ಸೃಜನಶೀಲವಾದ' ಕೆಲಸವೆಂಬ ಅರಿವು ಅವರನ್ನು ಅರಿವು ಅವರನ್ನು ಇನ್ನಷ್ಟು ಕೃತಿಗಳ ರಚನೆಗೆ ಪ್ರಚೋದಿಸಲೆಂಬ ಆಶಯದೊಂದಿಗೆ ಮಿತ್ರ ಸಮ್ಮಿಥದ ಈ ಕೆಲವು ಮಾತುಗಳನ್ನು ಮುಗಿಸುತ್ತೇನೆ. ಏಕೆಂದರೆ, ಇಂಥ ಹತ್ತು ಹಲವು ಬೆಳಕುಗಳ ಸಮುಚ್ಚಯವೇ ನಮ್ಮ ಈ ಜಗತ್ತಿನ ತುಂಬ ಆವರಿಸುತ್ತಿರುವ ಹಿಂಸೆ-ದ್ವೇಷ-ಭಯಗಳನ್ನು ಕಡಿಮೆ ಮಾಡಬಹುದೆಂಬ ನಂಬಿಕೆ ನನ್ನದು.

೧೧-೧೨-೨೦೦೫

ಎಚ್. ಎಸ್. ರಾಘವೇಂದ್ರ

# ಪರಿವಿಡಿ

# ಡಾ|| ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರ 'ಊರ್ವಶಿ' ಗೀತರೂಪಕ

ಗೀತನಾಟಕ ಪ್ರಪಂಚದ ಮಹತ್ವದ ಹೆಸರುಗಳು ಕವಿ ಪು.ತಿ.ನ ಮತ್ತು ಕಾದಂಬರಿಕಾರರಾದ ಡಾ|| ಶಿವರಾಮ ಕಾರಂತರದು ಎನ್ನುವುದು ಎಲ್ಲರಿಗೂ ತಿಳಿದ ವಿಷಯವೇ. ನವೋದಯ ಕಾವ್ಯ ಸಂವೇದನೆಗಳ ವಿಸ್ತೃತ ಅಭಿವ್ಯಕ್ತಿಗೆ ಗೀತನಾಟಕಗಳು ಸಮರ್ಥವಾದ ಭಿತ್ತಿಯೊಂದನ್ನು ಒದಗಿಸಿದವು. ಕಾವ್ಯ ಸಂವೇದನೆಗಳಿಗೆ ಗೀತ ಸಾಹಚರ್ಯ ದೊರೆಯುವುದರಿಂದ ಹೆಚ್ಚಿನ ಪರಿಣಾಮ ಸಾಧ್ಯತೆಗಳನ್ನು ಕಂಡುಕೊಂಡ ಪು.ತಿ.ನ ಗೀತನಾಟಕಗಳನ್ನೇ ಹೆಚ್ಚಿನ ಪ್ರಮಾಣದಲ್ಲಿ ಬರೆದರು. ಇವರಿಗೆ ಗೀತನಾಟಕಗಳು ಕಾವ್ಯದ ವಿಸ್ತರಣೆಯಾಗಿ ಕಂಡು ಬಂದವು. ಗೀತ ಸಂಭಾಷಣೆಗಳ ಮೂಲಕ ನಾಟಕೀಯ ಪರಿಸರ ನಿರ್ಮಾಣದ ಪ್ರಯತ್ನಗಳನ್ನೂ ಮಾಡಿದರಾದರೂ ರಂಗ ಪ್ರಯೋಗದ ನೇರ ಪರಿಚಯವಿಲ್ಲದ ಕಾರಣ ನಾಟಕೀಯ ಅಂಶಗಳಿಗಿಂತ ಇವರ ಗೀತ ನಾಟಕಗಳಲ್ಲಿ ಕಾವ್ಯಾಂಶ ಮತ್ತು ಗೇಯಾಂಶಗಳೇ ಹೆಚ್ಚಾದವು. ಆದರೆ ಕಾರಂತರಿಗೆ ಯಕ್ಷಗಾನ ರಂಗಭೂಮಿ, ಮರಾಠಿ ರಂಗಭೂಮಿಯ ಪರಿಚಯವಿದ್ದು ಗದ್ಯ ನಾಟಕ, ಪದ್ಯ ನಾಟಕ ಇತ್ಯಾದಿಯಾಗಿ ಪ್ರಯೋಗಗಳನ್ನು ನಡೆಸುವುದರ ಮೂಲಕ ಗೀತನಾಟಕಗಳ ಪರಿಣಾಮ ಸಾಧ್ಯತೆಗಳನ್ನು ಕಂಡುಕೊಂಡರು. ಅತಿಯಾದ ಭಾವಗೀತಾತ್ಮಕತೆಗಿಂತ, ಸಂಭಾಷಣಾತ್ಮಕ ಗೀತಗಳನ್ನು ರಚಿಸಿ ನಾಟಕೀಯ ಅಂಶಗಳ ಕಡೆಗೆ ಹೆಚ್ಚಿನ ಗಮನ ಹರಿಸಿದರು.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅನನ್ಯ ಗೀತನಾಟಕಕಾರರಾಗಿ ಹೆಸರಾದ ಪು. ತಿ. ನ ಮತ್ತು ಕಾರಂತರೇ ಅಲ್ಲದೆ ಇನ್ನೂ ಕೆಲವು ಗೀತನಾಟಕಕಾರರು ಇರುವರಾದರೂ ಅವರೆಲ್ಲರೂ ಒಂದೋ ಎರಡೋ ಗೀತನಾಟಕಗಳನ್ನು ವೈವಿಧ್ಯಕ್ಕಾಗಿ ಬರೆದರು. ಪು.ತಿ.ನ ಮತ್ತು ಕಾರಂತರ ನಂತರ ಇನ್ನೆರಡು ಮಹತ್ವದ ಹೆಸರುಗಳೆಂದರೆ ಸಿದ್ಧಯ್ಯ ಪುರಾಣಿಕರದು ಮತ್ತು ಗೌರೀಶ ಕಾಯ್ಕಿಣಿ ಅವರದು.

ಗೀತನಾಟಕಗಳದು ಒಂದು ಸಂಕೀರ್ಣ ಜಾತಿ. ಇತ್ತಕಡೆ ಪೂರ್ತಿಯಾಗಿ ನಾಟಕವೂ ಅಲ್ಲ ಅತ್ತ ಒಂದು ಕಾವ್ಯಕೃತಿಯೂ ಅಲ್ಲ. ಆದರೂ ವೈವಿಧ್ಯಕ್ಕೆಂದು ಹಲವರು ಬರೆದಿರುವರಾದರೂ ಅವುಗಳಿಗಿರುವ ಸೀಮಿತ ಪ್ರಯೋಗ ಸಾಧ್ಯತೆಗಳಿಂದಾಗಿ ಇಲ್ಲಿಯೂ ಸಲ್ಲದ ಅಲ್ಲಿಯೂ ಸಲ್ಲದ ತ್ರಿಶಂಕು ಸ್ಥಿತಿಯಲ್ಲಿ ಉಳಿಯಬೇಕಾಗುತ್ತದೆ.

ಆದರೆ ಈ ಜಾತಿಯ ಗೀತನಾಟಕಗಳಿಗೆ ಪ್ರೇರಣೆ ಪ್ರೋತ್ಸಾಹಗಳು ಇಲ್ಲದಿದ್ದರೂ ಅದಕ್ಕಿರುವ ಅದ್ಭುತ ಕಲಾತ್ಮಕತೆ, ಗೀತ, ಸಂಗೀತಗಳ ಸಮ್ಮಿಳಿತ ಪರಿಣಾಮ ಕಾರಿತೆ, ಶ್ರವಣ ಸುಭಗತೆ ಇತ್ಯಾದಿಗಳಿಂದಾಗಿ ಮತ್ತು ಇವುಗಳ ಅಂತಸ್ಸತ್ವ ಮತ್ತು ಸ್ವರೂಪ ರಮ್ಯತೆಯಿಂದಾಗಿ ಪ್ರತಿಭಾಶೀಲ ಕವಿ ಮನಸ್ಸುಗಳು ಸ್ಪಂದಿಸದೆ ಇರಲು ಸಾಧ್ಯವೇ ಇಲ್ಲ. ಇಂತಹ ವರ್ಗಕ್ಕೆ ಸೇರಿದ ಡಾ|| ಎಸ್.ಎಸ್. ಲಕ್ಷ್ಮಿನಾರಾಯಣ ಭಟ್ಟರು ಪು.ತಿ.ನರ ಗೀತನಾಟಕಗಳನ್ನು ಮೆಚ್ಚಿಕೊಂಡು, ಅವುಗಳಿಂದ ಸ್ಫೂರ್ತಿ ಪಡೆದು, ತಮ್ಮ ಪ್ರಯೋಗಶೀಲತೆಗೆ ಮತ್ತೊಂದು ಸವಾಲೆಂಬಂತೆ 1996ರಲ್ಲಿ 'ಊರ್ವಶಿ' ನಾಟಕವನ್ನು ಪ್ರಕಟಿಸಿದರು. ಗೀತನಾಟಕಗಳಿಗೆ ಅತ್ಯಂತ ಆಪ್ತವಾದ ವಸ್ತು 'ಪುರಾಣ' ಮತ್ತು 'ಕಲ್ಪನೆ'. ಹಾಗಾಗಿ ಭಟ್ಟರು ತಮ್ಮ ಗೀತನಾಟಕಕ್ಕೆ 'ಪುರಾಣ' ಪಾತ್ರವಾದ 'ಊರ್ವಶಿ'ಯನ್ನೇ ಕೇಂದ್ರ ಪಾತ್ರವಾಗಿ ಆರಿಸಿಕೊಂಡರು. ಕಾಳಿದಾಸ ಇದಕ್ಕೂ ಮೊದಲೇ 'ವಿಕ್ರಮೋರ್ವಶೀಯಂ' ಎಂಬ ನಾಟಕವನ್ನು ಬರೆದು 'ಊರ್ವಶಿ' ಪ್ರಸಂಗವನ್ನು ತನ್ನದೇ ರೀತಿಯಿಂದ ವಿಶ್ಲೇಷಿಸಿದ್ದ ಪ್ರಸ್ತುತ ಭಟ್ಟರೂ ಅದೇ 'ಊರ್ವಶಿ'ಪ್ರಸಂಗವನ್ನು ತೆಗೆದುಕೊಂಡಿದ್ದರೂ, ಸಮಕಾಲೀನ ಚಿಂತನೆಗಳ ಹಿನ್ನೆಲೆಯಲ್ಲಿ ವಸ್ತುವನ್ನು ನಿರ್ವಹಿಸಿರುವರೀತಿ ಅದ್ಭುತವಾಗಿದೆ. ಊರ್ವಶೀ ಕೇವಲ ಅಪ್ಸರೆ. ಇಂದ್ರ ಸಭೆಯಲ್ಲಿ ಅವನ ನಿರ್ದೇಶದಂತೆ ಕುಣಿಯುವ ದೇವಗಣಿಕೆ. ಆದರೆ ಉಳಿದ ಎಲ್ಲ ಅಪ್ಸರೆಯರಿಗಿಂತ ಸುಂದರಿಯಾದ್ದರಿಂದ ಅವಳಿಗೊಂದಿಷ್ಟು ವಿಶೇಷ ಸ್ಥಾನ. ಭಟ್ಟರು ಇಂತಹ ಅಪ್ಸರೆ 'ಊರ್ವಶಿ'ಯನ್ನು ಗ್ರಹಿಸಿರುವ ರೀತಿ, ಅವಳಿಗೆ ದೊರಕಿಸಿಕೊಟ್ಟ ಮಹತ್ವ, ಅವಳ ವ್ಯಕ್ತಿತ್ವದ ಉದಾತ್ತೀಕರಣ ನಿಜವಾಗಿಯೂ ಅಚ್ಚರಿಗೊಳಿಸುತ್ತದೆ.

ಈ ಗೀತನಾಟಕದಲ್ಲಿ ಭಾವಾಂಶ, ಚಿಂತನಾಂಶಗಳೆರಡರ ಸಮನ್ವಿತ ಸಮತೋಲನವನ್ನು, ಕಾಣುತ್ತೇವೆ. ಊರ್ವಶಿಯ ಕತೆ ಇಂದು ನೆನ್ನೆಯದಲ್ಲ. ಋಗ್ವೇದದಿಂದ ಮೊದಲ್ಗೊಂಡು ಭಾಗವತ ಭಾರತ, ವಾಯುಪುರಾಣ, ಮತ್ಸ್ಯ ಪುರಾಣ, ಪದ್ಮ ಪುರಾಣ ಇತ್ಯಾದಿ ಪುರಾಣಗಳೇ ಅಲ್ಲದೆ ಕಥಾ ಸರಿತ್ಸಾಗರ ಮತ್ತು ಕಾಳಿದಾಸನ ವಿಕ್ರಮೋರ್ವಶೀಯದಲ್ಲಿಯೂ ಊರ್ವಶಿಯ ಕಥಾ ಪ್ರಸಂಗ ಹಲವು ಅವತಾರಗಳನ್ನು ತಳೆದಿದೆ. ಆಖ್ಯಾನಗಳಾಗಿ, ಉಪಾಖ್ಯಾನಗಳಾಗಿ ಪ್ರಧಾನವಾಗಿಯೋ, ಪ್ರಾಸಂಗಿಕವಾಗಿಯೋ ಬಂದಿದೆಯಾದರೂ 'ಊರ್ವಶಿ'ಪಾತ್ರದ ಬಗ್ಗೆ ಪ್ರಧಾನವಾಗಿ ಚಿಂತನೆಗಳು ನಡೆದಿಲ್ಲ. ಕಾಳಿದಾಸನಲ್ಲಿಯೂ ಊರ್ವಶಿಗಿಂತ ಪುರೂರವನ ಪ್ರಣಯ ಸಾಹಸವೇ ಮುಖ್ಯವಾಗಿದೆ. ಪುರೂರವನ ಉತ್ಕಟ ಪ್ರೇಮದರ್ಶನವೇ ಇಲ್ಲಿ ಕಾವ್ಯದ ಮೂಲಕವಾಗಿ ವ್ಯಕ್ತವಾಗಿದೆ.

ಭಟ್ಟರ 'ಊರ್ವಶಿ' ನಾಟಕದಲ್ಲಿ ಊರ್ವಶಿಯದೇ ಪ್ರಧಾನ ಪಾತ್ರವಾದರೂ ಪೂರಕ ಪಾತ್ರಗಳಿಗೂ ಪಾತ್ರೋಚಿತವಾದ ರೀತಿಯಲ್ಲಿ ನ್ಯಾಯ ಸಂದಿದೆ. ಎಲ್ಲಿಯೂ ಅಸಮ ತೋಲನವಿಲ್ಲದೆ ಎಚ್ಚರಿಕೆಯಿಂದ ನಾಟಕವನ್ನು ಮುನ್ನಡೆಸಿದ್ದಾರೆ.

ಈ ನಾಟಕದಲ್ಲಿ ಭಟ್ಟರು ರೂಢಿಯ ಅಥವಾ ಪಾರಂಪರಿಕವಾದ ರೀತಿಯಲ್ಲಿ ಊರ್ವಶಿ-ಪುರೂರವರ ಉತ್ಕಟ ಪ್ರೀತಿಯನ್ನು ವೈಭವೀಕರಿಸದೆ, ಸಹಜವಾಗಿ, ವಾಸ್ತವಿಕವಾಗಿ, ಲೌಕಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ ಮತ್ತು ತಮ್ಮ ತಾತ್ವಿಕ ಚಿಂತನೆಗಳಿಗೆ ಅನುಗುಣವಾಗಿ ಕಥಾ ಪ್ರಸಂಗಗಳನ್ನು ರೂಪಿಸಿಕೊಂಡಿದ್ದಾರೆ. ಪುರಾಣ ಕಥೆಗಳು ವಾಸ್ತವ ದೂರವಾಗಿರುವುದರಿಂದ

ಮತ್ತು ಕಾಲಾಂತರವಿರುವುದರಿಂದ ಸೃಜನಶೀಲ ಪ್ರತಿಭೆಗಳ ಕೈಯಲ್ಲಿ ಅವರವರ ತಾತ್ವಿಕ ಚಿಂತನೆ, ನಂಬಿಕೆಗಳಿಗೆ ಅನುಗುಣವಾಗಿ ಮತ್ತು ನಿರ್ದಿಷ್ಟ ಮೌಲ್ಯಗಳ ಪ್ರತಿಪಾದನೆಗಾಗಿ ಬದಲಾಯಿಸಿಕೊಳ್ಳಲು ಹೆಚ್ಚಿನ ಸ್ವಾತಂತ್ರ್ಯ ವಹಿಸುತ್ತಾರೆ. ಪು.ತಿ.ನ ಅವರು ತಮ್ಮ ಗೀತನಾಟಕವಾದ 'ಸತ್ಯಾಯನ ಹರಿಶ್ಚಂದ್ರ'ವನ್ನು ಬರೆಯುವಾಗ ಸತ್ಯ ಹರಿಶ್ಚಂದ್ರ, ವಿಶ್ವಾಮಿತ್ರರ ವಿಚಾರವಾಗಿ ಕಂಡುಬಂದ ವಿರುದ್ಧಾಂಶಗಳು, ಅವರಲ್ಲಿನ ಸ್ವಭಾವ ದ್ವಂದ್ವಗಳೆಲ್ಲ ವನ್ನೂ ಗಮನದಲ್ಲಿರಿಸಿಕೊಂಡು, ಅಂತಹ ಕಥಾನಕವನ್ನು ಆರಿಸಿಕೊಳ್ಳಬೇಕಾಗಿ ಬಂದಾಗ ಎದುರಾಗುವ ಸಮಸ್ಯೆಗಳ ಬಗ್ಗೆ ಚಿಂತಿಸಿ ಯಾವುದೇ ವೈರುಧ್ಯಗಳಿಗಾಗಲೀ, ದ್ವಂದ್ವಗಳಿಗಾಗಲಿ ಅವಕಾಶವಿಲ್ಲದಂತೆ, ವ್ಯಕ್ತಿತ್ವಕ್ಕೊಂದು ಸಮಗ್ರತೆಯನ್ನು, ಏಕಸೂತ್ರತೆಯನ್ನು ಒದಗಿಸಿ, ತಮ್ಮ ದೃಷ್ಟಿ ಕೋನಕ್ಕೆ ಹೊಂದುವಂತೆ ಪಾತ್ರ ಕಲ್ಪನೆಯನ್ನು ಮಾಡಿಕೊಂಡಂತೆ ಭಟ್ಟರೂ 'ಊರ್ವಶಿ' ಪಾತ್ರವನ್ನು ತಮ್ಮ ಚಿಂತನೆಯ ಮೂಸೆಯೊಳಗಿಂದ ಕಡೆದಿರಿಸಿದ್ದಾರೆ. ಎಲ್ಲ ಬಗೆಯ ಅಲೌಕಿಕ ಪರಿವೇಶಗಳಿಂದ ಬಿಡಿಸಿ ನೆಲದ ವಾಸ್ತವತೆಗೆ ಹತ್ತಿರವಾಗುವಂತೆ ಎಲ್ಲ ಪಾತ್ರಗಳನ್ನೂ ಸೃಷ್ಟಿಸಿದ್ದಾರೆ. ವಸ್ತು ಹಳೆಯದಾದರೂ ದೃಷ್ಟಿ ನವ ನವೀನವಾಗಿದೆ. ವೈಚಾರಿಕತೆಯ ಮೆರುಗಿನಿಂದ ಕೂಡಿದೆ.

ಇಲ್ಲಿ ನೆಲದ ಬದುಕಿನ ಮೌಲ್ಯ ಚಿಂತನೆ ನಡೆದಿದೆ.

ಊರ್ವಶಿ ಸ್ವರ್ಗದವಳಾದರೂ ಮೊದಲಿನಿಂದ ಕಡೆತನಕ ನೆಲದ ಬದುಕಿನ ಆಕರ್ಷಣೆಗೆ ಒಳಗಾಗಿ ತುಡಿವ, ಹಂಬಲಿಸುವ ಪರಿ ಆಶ್ಚರ್ಯವೆನಿಸುತ್ತದೆ. ಅವಳ ಈ ಬಗೆಯ ನೆಲದ ಸೆಳೆತಕ್ಕೆ ಭಟ್ಟರು ನೀಡಿರುವ ತಾರ್ಕಿಕ ಸಮರ್ಥನೆ ಎಂದರೆ ಮೂಲಭೂತವಾಗಿ ಅವಳ ಕರುಳ ನಂಟು ಇರುವುದು ಈ ನೆಲದೊಂದಿಗೇ! ಹುಟ್ಟಿದ ನೆಲದ ಸೆಳೆತ ಯಾರಿಗೇ ಆದರೂ ಅದಮ್ಯವೆನಿಸುತ್ತದೆ. ಈ ನೆಲದ ಮನುಷ್ಯ ನಾರಾಯಣ ಮುನಿಯೇ ಈಕೆಗೆ ಜನ್ಮಕೊಟ್ಟದ್ದು!

ನಾಟಕದ ಘಟನಾ ಸ್ಥಳಗಳು ಸ್ವರ್ಗ ಮತ್ತು ಭೂಮಿ. ಈ ಭೂಮಿಯ ಸೌಂದರ್ಯ, ಬದುಕುಗಳು ಯಾರಿಗಾದರೂ ಕರುಬುವಂತೆ ಆಗುವ ಹಾಗೆ ಚಿತ್ರಿಸಿದ್ದಾರೆ; ಉದಾತ್ತೀಕರಿಸಿದ್ದಾರೆ. ಕಣ್ಣರಿಯದಿದ್ದರೂ ಕರುಳರಿಯದೇ ಎಂಬಂತೆ ಅಪ್ರಜ್ಞಾಪೂರ್ವಕವಾಗಿ ಊರ್ವಶಿ ಈ ನೆಲದ ಸೊಬಗಿಗೆ, ಬದುಕಿಗೆ ಹಾತೊರೆಯುತ್ತಾಳೆ. ತನ್ನವರು ಯಾರೇ ಎದುರಾದರೂ ಭೂಮಿಯ ಬದುಕಿನ ಹಿರಿಮೆಯನ್ನು ಎತ್ತಿ ಹಿಡಿಯುತ್ತಾಳೆ. ಈ ನೆಲದ ಬದುಕಿನ ಅನುಭವ ಇಲ್ಲದಿದ್ದರೂ ಇದರ ಜೊತೆಗೆ ಪ್ರೀತಿಯನ್ನು ಬೆಳೆಸಿಕೊಳ್ಳುತ್ತಾಳೆ. ಒಂದು ಬಗೆಯ ಅವಿನಾಭಾವ ಸಂಬಂಧವನ್ನು ಬೆಸೆದುಕೊಳ್ಳುತ್ತಾಳೆ. "ಮಣ್ಣು ಸ್ವರ್ಗಕು ಮಿಗಿಲೆ ಸುಭಗೆ?"- ಎನ್ನುವ ಇಂದ್ರನ ಪ್ರಶ್ನೆಗೆ ಸಮರ್ಥನೆಯ ಉತ್ತರಗಳು ತರ್ಕದ ತಳಹದಿಯನ್ನು ಹೊಂದಿವೆ.

> **"ಎಲ್ಲಕು ಇದೆ ಇಲ್ಲಿ ಕೊನೆ**
> **ಎಂದೇ ಅದಕೆ ಬೆಲೆ**
> **ಕೊನೆ ಎನುವುದೆ ಬಾಳಿಗೊಂದು**
> **ಅರ್ಥಕೊಡುವ ನೆಲೆ"**

(ಅಂ.1ದೃ-1 ಪು.3)

ಕೊನೆ ಇಲ್ಲದ, ವಿನಾಶಕ್ಕೆ ಒಳಗಾಗದ ಯಾವುದೇ ಸ್ಥಿತಿ ಏಕತಾನತೆಯನ್ನು ಉಂಟುಮಾಡುವುದಲ್ಲದೆ ಒಂದೇ ಸ್ಥಿತಿಯಲ್ಲಿದ್ದು ಕೊಳೆತು ನಾರುತ್ತದೆ. ವಿನಾಶದ ಒಳಗಿಂದಲೇ ಸೃಷ್ಟಿಯ ಬೀಜಗಳು ಮೊಳೆಯ ಬಲ್ಲವು ಎನ್ನುವ ಅರಿವಿದೆ. ಅಲ್ಲದೆ ಭೂಮಿಯ ಮೇಲಿನ ಮೌಲ್ಯಗಳ ಸ್ವರೂಪ ಎಂತಹುದು?

"ಬುವಿಯ ರೀತಿಯೆ ಬೇರೆ
ಭೋಗಕೂ ಇದೆ ಮೇಲೆ
ಒಂದು ಗಂಡಿಗೆ ಒಂದು ಹೆಣ್ಣು
ತೆತ್ತು ಕೊಳ್ಳುವುವು ತಮ್ಮ
ಹೊತ್ತಿಕೊಳುವುವು ಜೀವ
ಘುಮಘುಮಿಸಿ ಹುಟ್ಟುವುದು ಪ್ರೇಮ"

-(ಅಂ.1-ದೃ-2 ಪುಟ-5)

"ಮರ್ತ್ಯ ಹೃದಯ ನಾಳೆಯಲ್ಲಿ
ಹರಿವ ಜೀವರಸ
ಅದರ ಎದುರು ಸ್ವರ್ಗದ ಸಿರಿ
ಸಂಪದವೂ ಕಸ"

ಅಂ-]4-ದೃ.ಪು-40

ಭೂಮಿಯ ಬಗ್ಗೆ ಎಷ್ಟೆಲ್ಲ ವನ್ನೂ ಅರಿತಿದ್ದಾಳೆ. ಕೇವಲ ಭೋಗವೊಂದೇ ಮೌಲ್ಯವಲ್ಲ. ಇಲ್ಲಿನ ಹೆಣ್ಣು ಗಂಡಿನ ಸಂಬಂಧವಿಂತಿರುವುದು ಭೋಗದ ತಳಹದಿಯ ಮೇಲಲ್ಲ; ಪ್ರೀತಿ ಮತ್ತು ಪರಸ್ಪರ ತ್ಯಾಗದ ಮೇಲೆ. ಪ್ರತಿ ಮನುಜ ಹೃದಯದಲ್ಲೂ ಜೀವರಸದ ತನಿ ಇದೆ. ಘುಮಘುಮಿಸಿ ಹಬ್ಬುವ ಪ್ರೇಮದ ಎದುರು ಸ್ವರ್ಗದ ಸಿರಿಸಂಪತ್ತು ಕಸ ಎಂದು ಭಾವಿಸುವ ಊರ್ವಶಿಯ ದೃಷ್ಟಿಯಲ್ಲಿ ಮತ್ತು ಅವಳ ಅಚಲ ನಂಬಿಕೆಯಲ್ಲಿ, ಮಾನವ ಪ್ರೇಮಕೆ ಸಮವಿಲ್ಲ

ಭೂಮಿಗು ಮೀರಿದ ನೆಲೆಯಿಲ್ಲ
ಎಲ್ಲಕು ಕೊನೆಯನು ಹಾಡುವ ಮಣ್ಣಿನ
ಜೀವ ವೈಭವಕೆ ಎಣೆಯಿಲ್ಲ"

-(ಅಂ.6. ದೃ-1ಪು-58)

ಎನಿಸುವುದು ಸ್ವಾಭಾವಿಕವೇ!

ಊರ್ವಶಿಯ ನೆಲದ ಸಂಬಂಧದ ವಿಚಾರಗಳಿಗೇ ಪುಷ್ಠಿ ಕೊಡುವಂತೆ ಗೀತನಾಟಕಕಾರರು ಚಿತ್ರಲೇಖೆ, ಘೃತಪ್ರಿಯ ಪಾತ್ರಗಳನ್ನು ಸೃಷ್ಟಿಸಿ, ಸ್ವರ್ಗ ಮತ್ತು ಮರ್ತ್ಯ ಲೋಕದ ನಡುವಿನ ವ್ಯತ್ಯಾಸಗಳನ್ನು ಹಗುರ ಧಾಟಿಯಲ್ಲಿ ಹೇಳಿಸುತ್ತಲೇ ಭೂಮಿಯ ಬದುಕು ತನ್ನೆಲ್ಲ ವೈವಿಧ್ಯ, ವೈರುಧ್ಯ, ದ್ವಂದ್ವಗಳ ಮೂಲಕವೂ ಅಪೇಕ್ಷಾರ್ಹವಾಗುತ್ತದೆ ಎನ್ನುವುದನ್ನು ಸ್ಪಷ್ಟಪಡಿಸುತ್ತಾರೆ. 'ಸ್ವರ್ಗದ್ದು ಸ್ಥಾವರ ಸ್ಥಿತಿ' ಅದಕ್ಕೇ ಅದೊಂದು ಬಗೆಯ ಸಾವು. ಭೂಮಿಯ ಬದುಕು ಚಲನಶೀಲ. ಸ್ಥಿತಿಗಳು ಪರಿಸ್ಥಿತಿಗಳು ಬದಲಾಗುತ್ತವೆ. ಇಂತಹ ಬದಲಾವಣೆ ಇರುವುದರಿಂದಲೇ ವಿಕಾಸವಿದೆ. ಹೊಸ ಹುಟ್ಟಿದೆ. ಸ್ವರ್ಗದಲ್ಲಿ ಹಸಿವು, ಮುಪ್ಪು, ಸಾವು, ನೋವು, ನೇಮ, ನಿಷ್ಠೆ, ಜಪತಪ ಯಾವುದೂ ಇಲ್ಲ. ಆದ್ದರಿಂದಲೇ ತಿರಸ್ಕಾರಯೋಗ್ಯ. ಭೂಮಿಯಲ್ಲಿ ಕಾಣುವ ವೈವಿಧ್ಯ, ದ್ವಂದ್ವಗಳು

ಜೊತೆಗೆ ಮನುಷ್ಯನ ಸಣ್ಣತನಗಳು, ಜಗಳಗಳು, ಸ್ವರ್ಗದಲ್ಲಿನ ಏಕತಾನತೆಯ ಬೇಸರವನ್ನು ಕಳೆಯುವುದಕ್ಕೆ ಅನಿವಾರ್ಯಗಳು. ಋಣಾತ್ಮಕ ಧನಾತ್ಮಕ ಮೌಲ್ಯಗಳಿಂದ ದ್ವಂದ್ವಗಳಿಂದ ಕೂಡಿದ ನೆಲದ ಬದುಕು ನಿಜಕ್ಕೂ ಸ್ವಾಗತಾರ್ಹವೆಂಬ ಅಂಶವನ್ನು ನಾಟಕಕಾರರು ಸ್ಪಷ್ಟಪಡಿಸುತ್ತಾರೆ; ಘೃತ ಪ್ರಿಯನ ಮೂಲಕ! ಅಲ್ಲದೆ ತಿಂಡಿ ಪೋತವಿದೂಷಕನಾದ ಈ ಘೃತಪ್ರಿಯನ ಬಾಯಿಂದ

**'ಏನೊಂದೂ ಇರದ ಲೋಕ**
**ಏನು ಸ್ವರ್ಗವೋ ಎಂಥ**
**ಪಾಳು ದುರ್ಗವೋ!'-**

**(ಅಂ-6ದೃ-2ಪು-64**

-ಎಂದು ಹೊರಟ ಉದ್ಗಾರ ಕಟುಸತ್ಯದ ವಾಸ್ತವ! ಊರ್ವಶಿಯ ಅಭಿಪ್ರಾಯಗಳಿಗೆ ಪೂರಕ! ಸ್ವರ್ಗದಲ್ಲಿ ಎಲ್ಲವೂ 'ಪ್ರಾಪ್ತಸ್ಥಿತಿ'ಯಲ್ಲಿಯೂ 'ಪರ್ಯಾಪ್ತ ಸ್ಥಿತಿ'ಯಲ್ಲಿಯೂ ಇರುವುದರಿಂದ ಅದಕ್ಕೆ ಬೇಡಿಕೆಯೇ ಇಲ್ಲ. 'ಬೇಡಿಕೆ ಇಲ್ಲದ್ದಕ್ಕೆ ಬೆಲೆಯೇ ಇಲ್ಲ'- ಎನ್ನುವ ವಾಣಿಜ್ಯತತ್ವ ವ್ಯವಹಾರ ಸಿದ್ಧಾಂತವಷ್ಟೇ ಅಲ್ಲದೆ ತಾತ್ವಿಕ ದರ್ಶನವೂ ಆಗಿದೆ!

ಈ ನಾಟಕಕ್ಕೆ ಇನ್ನೊಂದು ಮಗ್ಗುಲೂ ಉಂಟು. ಈ ಮೊದಲೇ ಹೇಳಿದಂತೆ ಸಮಕಾಲೀನ ವಿಚಾರಧಾರೆಯ ಮೌನ ಸೆಲೆ ಇಲ್ಲಿದೆ. ಭೂಮಿಯ ಬದುಕಿನ ವೈಭವೀಕರಣದ ಜೊತೆಗೆ ಹೆಣ್ಣಿನ ಉದಾತ್ತೀಕರಣವೂ ನಡೆದಿದೆ. ರೂಢಿಗಿಂತ ಭಿನ್ನವಾಗಿ, ಹೆಣ್ಣನ್ನು, ಅವಳ ಆತ್ಮ ಗೌರವವನ್ನು, ಅಸ್ತಿತ್ವವನ್ನು ಇವತ್ತಿನ ಸ್ತ್ರೀ ಚಿಂತನೆಯ ಹಿನ್ನೆಲೆಯೊಳಗೆ ಚರ್ಚಿಸಲಾಗಿದೆ. ಅಪ್ಸರೆಯರನ್ನುದೇವದಾಸಿಯರೆಂದು, ಆತ್ಮವಿಲ್ಲದ, ಅಸ್ತಿತ್ವವಿಲ್ಲದ ಕೇವಲ ಉಪಭೋಗದ ಸಾಮಗ್ರಿಯೆಂದು ಪರಿಗಣಿಸಲಾಗುವ ಸಾಂಪ್ರದಾಯಿಕ ದೃಷ್ಟಿಗಿಂತ ಭಿನ್ನವಾಗಿ ಅವಳನ್ನಿಲ್ಲಿರೂಪಿಸಲಾಗಿದೆ. ಪುರೂರವನಂತಹ ಉದಾತ್ತರಾಜ, ಒಬ್ಬ ಪುರುಷ ವ್ಯಕ್ತಿಯ ಬಾಯಲ್ಲಿ 'ಸ್ತ್ರೀಪರವಾದ' ಮಾತುಗಳು ಹೆಣ್ಣಿನ ಬಗೆಗಿನ ಪುರುಷ ಸಮಾಜದ ಎಚ್ಚರವನ್ನೂ ಧ್ವನಿಸುತ್ತದೆ.

**"ವಸ್ತುವಲ್ಲ ಚಿತ್ರರಥ**
**ಅವಳೂ ಸಹ ವ್ಯಕ್ತಿ"**

**ಅಂ.7.ದೃ-1.ಪು 74**

-ಎಂದ ಮಾತು ಪ್ರಗತಿಪರ ಚಿಂತನೆಗೆ ನಿದರ್ಶನವಾಗಿದೆ. ಪುರುಷದೃಷ್ಟಿಯಲ್ಲಿ ಬದಲಾವಣೆಯಾದರಷ್ಟೇ ಸಾಲದು. ಹೆಣ್ಣು ತನ್ನ ಸಂಕೋಚಗಳಿಂದ ಹೊರ ಬಂದು ಆತ್ಮವಿಶ್ವಾಸ, ಅಧಿಕಾರ, ಹಕ್ಕುಗಳನ್ನು ಸ್ಥಾಪಿಸಿಕೊಳ್ಳದಿದ್ದರೆ, ದಿಟ್ಟೆದೆಯಿಂದ ಪ್ರತಿಭಟಿಸಿ ನಿಲ್ಲದಿದ್ದರೆ ಹಳೆಯ ಚರಿತ್ರೆಯೇ ಮುಂದುವರೆಯುತ್ತದೆ. ಊರ್ವಶಿ ಆಧುನಿಕ ಹೆಣ್ಣಿನ ನಿಲುವನ್ನು ಪ್ರತಿನಿಧಿಸುವಂತೆ, ತುಳಿತಗಳನ್ನು ಸಹಿಸಿ ನಿಂತವಳು. ಭೂಮಿಯ ಸಂಪರ್ಕಮಾತ್ರದಿಂದಲೇ ಮೂಡಿದ ಎಚ್ಚರದಿಂದ. ಚಿತ್ರಲೇಖೆಯೊಂದಿಗೆ ಮಾತನಾಡುವಾಗ ಅದುಮಿಟ್ಟುಕೊಂಡಿದ್ದ ಆಕ್ರೋಶ, ಅಸಮಾಧಾನಗಳನ್ನು ಹೊರಗೆಸೆಯುತ್ತಾಳೆ.

"ನಿಷ್ಠೆಯಿರದ ನೀತಿಯಿರದ
ಸ್ವರ್ಗ ನನ್ನದಲ್ಲ
ಇಂದ್ರ ಕಳಿಸಿದಲ್ಲರೊಡನೆ
ಮನವಿಲ್ಲದೆ ಮೈ ಬೆರಸುವ
ಬಾಳಿದು ಬಾಳಲ್ಲ
ನನಗೆ ಜೋಡಿಯಾದನಾದ
ರೊಬ್ಬ ಶ್ರೇಷ್ಠ ಮರ್ತ್ಯನೇ"

(ಅಂ.4.ದೃ1. ಪು-41)

ಎನ್ನುವ ತೀರ್ಮಾನ ಇಂತಹ ಪ್ರತಿಭಟನೆಯ ಕಲ್ಪನೆಯೇ ಇಲ್ಲದ ಸ್ವರ್ಗದವರಿಗೆ, ಅವಳು ಭೂಮಿಯ ಬದುಕನ್ನೇ ಬಯಸುವುದಾಗಲೀ, ಪುರೂರವನನ್ನು ಪತಿಯಾಗಿ ಸ್ವೀಕರಿಸುವುದಾಗಲೀ ಅರ್ಥವಾಗುವುದಿಲ್ಲ. ಅಲ್ಲದೆ ಅವಳ ಆ ಹಟ, ನಿಲುವು, ದೇಶದ್ರೋಹ, ಸ್ವಾಮಿದ್ರೋಹದಂತೆ ಕಾಣುವುದು ಸಹಜವೆನಿಸುತ್ತದೆ.

ಊರ್ವಶಿ-ಪುರೂರವರ ಇಲ್ಲಿನ ಪ್ರೇಮ ಕೇವಲ ದೈಹಿಕ ಆಕರ್ಷಣೆಯಲ್ಲ. ಪ್ರೀತಿ, ಪ್ರೇಮ, ಪರಿಣಯಗಳಿಗೆ ಒಂದು ತಾತ್ವಿಕ ನೆಲೆಗಟ್ಟಿದೆ. ನೆಲದ ಮೇಲಿನ ಬದುಕಿನಲ್ಲಿ, ಇಲ್ಲಿನ ಸಮಾಜದಲ್ಲಿ ಹೆಣ್ಣು-ಗಂಡುಗಳ ಸಂಬಂಧಕ್ಕೆ ಒಂದು ನೈತಿಕ ಚೌಕಟ್ಟಿನ ಅಗತ್ಯವಿದೆ. ಪು.ತಿ.ನರು ಹೇಳುವಂತೆ ಹೆಣ್ಣು-ಗಂಡುಗಳ ನಡುವಿನ ಪ್ರೀತಿ ಧರ್ಮ ಸಂಯಮಿತ ಪ್ರೇಮವಾಗಿರಬೇಕೇ ಹೊರತು ಕಾಮವಲ್ಲ. ಊರ್ವಶಿ-ಪುರೂರವರ ನಡುವೆ ಮೊದಲಿಗೆ ದೇಹಸೌಂದರ್ಯದ ಸೆಳೆತಗಳೇ ಇದ್ದರೂ ದಾಂಪತ್ಯ, ವಿವಾಹ ವ್ಯವಸ್ಥೆಯೊಳಗೆ ಬದ್ಧವಾಗಿ ಪಾತಿವ್ರತ್ಯ, ಏಕಪತ್ನಿತ್ವ ಇತ್ಯಾದಿ ಮೌಲ್ಯ ನಿರೀಕ್ಷೆಗಳೊಂದಿಗೆ ಮುಂದುವರೆಯುತ್ತದೆ. ಪತಿ-ಪತ್ನಿಯರ ನಡುವೆ ಪರಸ್ಪರ ನಿಷ್ಠೆಯ ಅಗತ್ಯವಿದೆ ಎಂಬ ಅಂಶಕ್ಕೆ ಒತ್ತು ಬೀಳುತ್ತದೆ. ಒಬ್ಬರಿಂದೊಬ್ಬರು ನಿರೀಕ್ಷಿಸುವ ನಿಷ್ಠೆ ಪ್ರಾಮಾಣಿಕತೆಗಳಿಗೆ ಯಾವುದೇ ಕಾರಣಕ್ಕೆ ಧಕ್ಕೆಯುಂಟಾದರೂ ಪ್ರೀತಿ, ಪ್ರೇಮ, ದಾಂಪತ್ಯದ ಅಡಿಪಾಯ ಅಲುಗಾಡುತ್ತದೆ. ನಡುವೆ ಉಂಟಾಗುವ ಬಿರುಕು ಪತಿಪತ್ನಿ ಸಂಬಂಧಗಳನ್ನೇ ಉಚ್ಚಾಟಿಸಿ ಬಿಡುತ್ತದೆ. ಇಂದ್ರನ ತಂತ್ರವೋ ಕುಟಿಲತೆಯೋ, ಯಾವುದೇ ಕಾರಣವಾದರೂ, ಊರ್ವಶಿಯ ಬಲವಾದ ನಂಬಿಕೆ ಬುಡಮೇಲಾಗುತ್ತದೆ. ಯಾವ ಸುಖ ಭೋಗಗಳಿಗಾಗಿ, ಸ್ವರ್ಗಾರೋಹಣದ ಅದಮ್ಯ ಆಕಾಂಕ್ಷೆಗಾಗಿ ವರ್ಷಗಟ್ಟಲೆ ತಪಸ್ಸು ಮಾಡಿ ದಕ್ಕಿಸಿಕೊಳ್ಳಬಯಸುತ್ತಾರೋ, ಅಂತಹ ಸ್ವರ್ಗವನ್ನೇ ಧಿಕ್ಕರಿಸಿ, ಅಲ್ಲಿನ ಸುಖಭೋಗಗಳನ್ನು ಕಸಕ್ಕಿಂತ ಕಡೆಗಣಿಸಿ, ನೆಲದ ಬದುಕಿನ ಮೌಲ್ಯಗಳಿಗಾಗಿ ಧರ್ಮಸಂಯಮಿತವಾದ ದಾಂಪತ್ಯಕ್ಕಾಗಿ ಬಯಸಿಬಂದಳೋ, ತನ್ನೆಲ್ಲ ಕಲ್ಪನೆ ನಿರೀಕ್ಷೆಗಳು ಸಾಕ್ಷಾತ್ಕಾರವಾಗಬೇಕೆಂದು, ಬಯಸಿ, ನಂಬಿ ಬಂದಳೋ ಅದು ಹುಸಿಯಾದದ್ದನ್ನು ಕಂಡಾಗ ಅವಳಿಗೆ ಆದ ಆಘಾತ ಮಾತಿಗೆ ಮೀರಿ ನಿಂತ ಮೌನವಾಗುತ್ತದೆ. ಇಬ್ಬರ ವಿದಾಯದಲ್ಲಿ ನಾಟಕ ಕೊನೆಯಾಗುತ್ತದೆ.

ಇಲ್ಲಿನ ಕತೆ ಸನ್ನಿವೇಶಗಳು ಲೋಕ ಸಹಜ ರೀತಿಯಲ್ಲಿ ವಾಸ್ತವದ ಪಾತಳಿಯ ಮೇಲೆ ನಿರೂಪಿತವಾಗಿದೆ. ಸ್ವರ್ಗದವರಾದರೂ ಮಾನವಾರೋಪಿತ ಸ್ವಭಾವಗಳಲ್ಲಿಯೇ ಕಾಣಿಸಿಕೊಳ್ಳುತ್ತಾರೆ.

ಊರ್ವಶಿಯಂತೂ ಈ ಮಣ್ಣಿನಲ್ಲಿ ಅದ್ದಿ ತೆಗೆದ ಪಾತ್ರವಾಗಿದೆ. ಅವಳ ತರ್ಕ, ಆಲೋಚನೆ, ಭಾವ, ವಿಚಾರ, ಚಿಂತನೆಗಳಲ್ಲವೂ ಈ ನೆಲದ್ದೇ! ಅವಳ ವರ್ತನೆ ಸ್ವಭಾವಗಳು ಈ ನೆಲದ ಹೆಣ್ಣಿನ ಪ್ರತಿರೂಪ. ನಾರಾಯಣ ಋಷಿಯಂತಹವನಿಂದ ಹುಟ್ಟು ಪಡೆದ ಊರ್ವಶಿಯ ವ್ಯಕ್ತಿತ್ವ ಸಾಮಾನ್ಯ ಹೆಣ್ಣುಗಳಿಗಿಂತ ಉದಾತ್ತವೂ ಉನ್ನತವೂ ಆಗಿದೆ.

**'ಅವಳ ವ್ಯಕ್ತಿತ್ವದೆತ್ತರಕೆ ತಕ್ಕಂತೆ**
**ಬಳಸಬೇಕೆಂದು ತಿಳಿಸಿದ್ದನಲ್ಲವೇ ಋಷಿ?'**

**ಅಂ.8ದೃ-1ಪು-93**

-ಎಂದು ಬೃಹಸ್ಪತಿ ಕೇಳುವ ಪ್ರಶ್ನೆಯು ಮೂಲಕ ಅವಳ ವ್ಯಕ್ತಿತ್ವದ ಔನ್ನತ್ಯದ ಕಲ್ಪನೆಯುಂಟಾಗುತ್ತದೆ.

ಇದಿಷ್ಟೂ ನಾಟಕದ ವಸ್ತು ಸ್ವರೂಪವಾದರೆ, ಈ ನಾಟಕದ ತಂತ್ರ ಶೈಲಿ ಸಂವಿಧಾನ ಸ್ವರೂಪದ ವಿಚಾರದಲ್ಲಿ ಒಂದೆರಡು ಮಾತು. ಗೀತನಾಟಕದಲ್ಲಿ ಗೀತ ಸಂಭಾಷಣೆಯೇ ಪ್ರಧಾನ ತಂತ್ರ. ಸಾಂದರ್ಭಿಕವಾಗಿ ಅಗತ್ಯಕ್ಕೆ ತಕ್ಕಂತೆ ಗದ್ಯದ ಸಾಲುಗಳನ್ನೋ, ಕಥನಾತ್ಮಕ ಶೈಲಿಯನ್ನೋ ಬಳಸಿಕೊಳ್ಳಬಹುದು. ಇಲ್ಲಿನ ಒಟ್ಟು ಗೀತಗಳಲ್ಲಿ ಎರಡು ಪ್ರಭೇದಗಳನ್ನು ಕಾಣುತ್ತೇವೆ. ಒಂದು ಶುದ್ಧ ಹಾಡುಗಳು ಮತ್ತೊಂದು ಸಂಭಾಷಣಾಗೀತಗಳು ಈ ಎರಡನ್ನು ಬಳಸುವಾಗಲೂ ಭಟ್ಟರ ಕಾವ್ಯ ಪ್ರತಿಭೆ ಗರಿಗೆದರಿದೆ. ಅತ್ಯಂತ ಭಾವ ತೀವ್ರ ಸನ್ನಿವೇಶಗಳಲ್ಲಿ ಹೊಮ್ಮಿದ ಹಾಡುಗಳು ಭಾವ ಸೌಂದರ್ಯ, ನಾದ ಸೌಂದರ್ಯಗಳಿಂದ ಮುಪ್ಪುರಿಗೊಂಡು ಶ್ರವಣ ಸುಭಗವೆನಿಸಿವೆ. ಅಲ್ಲದೆ ಅ.ರಾ.ಮಿತ್ರ ಅವರು ಗಮನಿಸಿರುವಂತೆ ಇಲ್ಲಿನ ಭಾಷೆ ರೂಪಕ ಸತ್ವದಿಂದ ಕೂಡಿದೆ. ಇಂತಹ ಭಾಷೆಯ ಮೂಲಕ ಭಾವ ಧ್ವನಿ, ರಸಧ್ವನಿಯನ್ನು ಹೊಮ್ಮಿಸುವ ಹಲವಾರು ಗೀತಗಳು ಆಯಾ ಸನ್ನಿವೇಶ, ಸಂದರ್ಭಗಳಿಗೆ ಮತ್ತಷ್ಟು ಅರ್ಥ ಸೌಂದರ್ಯವನ್ನು ಕಲ್ಪಿಸುತ್ತವೆ. ಸಖಿಯರೊಂದಿಗೆ ಮೈ ಮರೆತು ಹಾಡುವಾಗಿನ

**"ಯಾಕೆ ಹರಿಯುತಿದೆ ಈ ನದಿ ಹೀಗೆ**
**ದಡಗಳನ್ನೇ ದೂಡಿ?**
**ತನ್ನನು ಕಾಯುವ ಎಲ್ಲೆಗಳನ್ನೇ**
**ಇಲ್ಲದಂತೆ ಮಾಡಿ!"**
**............................**
**ಯಾರು ನುಡಿಸುವರು ಎಲ್ಲೋ ದೂರದಿ**
**ಮತ್ತೆ ಮತ್ತೆ ಕೊಳಲ**
**ಯಾಕೆ ಮೀಟುವುದು ಆ ದನಿ ಹೀಗೆ**
**ನನ್ನ ಆಳದಳಲು?**

**(ಅಂ.2 ದೃ-1 ಪು. 16)**

-ಎನ್ನುವ ಹಾಡು ಅವಳ ಅಂತರಾಳದ ಸುಪ್ತ ಹಂಬಲದ, ಅವ್ಯಕ್ತ ನೋವಿನ ಅಭಿವ್ಯಕ್ತಿಯಾಗಿದೆ. ಇದೇ ಭಾವದ ವ್ಯಕ್ತ ಅಭಿವ್ಯಕ್ತಿಯಾಗಿ ಬರುವ,

'ಎಲ್ಲಿ ಹೋದನಲ್ಲ?- ಚಿತ್ತವ
ಚೆಲ್ಲಿ ಹೋದನಲ್ಲ
ಮೊಲ್ಲೆವನದಲಿ ಮೆಲ್ಲಗೆ ಗಾಳಿ
ಸಿಳ್ಳು ಹಾಕಿತಲ್ಲ (ಅಂ.4. ದೃ 1ಪು-37

ಪುರೂರವನು ಹಾಡುವ

'ಮರೆಯಲಾರೆ ನಿನ್ನ ನೀರೆ
ಮರೆಯೆ ಈ ಜನ್ಮಕೆ
ಮರೆತು ಹೇಗೆ ಬಾಳಬಹುದೆ
ಆತ್ಮ ಮರೆತು ಅನ್ನಕೆ'

(ಅಂ-4.ದೃ-2. ಪು-45

-ಎಂಬ ಹಾಡುಗಳೇ ಅಲ್ಲದೆ ''ಶಂಕಯೆಂಬ ಬೆಂಕಿ ಸೋಕಿ' ಹೋದರೇನು ಹೋಗಲಿ ಬಿಡು' ಇತ್ಯಾದಿ ಸಂಭಾಷಣಾ ಪದ್ಯಗಳೂ ಕೂಡಾ ರಾಗಸಂಯೋಜನೆಯೊಂದಿಗೆ ಹಾಡ ಬಹುದಾದ ತಾಳ, ಲಯಗಳನ್ನು ಹೊಂದಿವೆ. ಪ್ರಾಸ ಅನುಪ್ರಾಸ ಉಪಮೆ ರೂಪಕಗಳು ಧಾರಾಳವಾಗಿ ಬಳಕೆಯಾಗಿವೆ.

ಭಾವ ತೀವ್ರ ಸನ್ನಿವೇಶಗಳಲ್ಲಿ ಬರುವ ಹಾಡುಗಳ ಚಿತ್ರಾತ್ಮಕತೆ, ಹೋಲಿಕೆಗಳು, ಊರ್ವಶಿಯ ಸೌಂದರ್ಯದ ವರ್ಣನೆ ಇತ್ಯಾದಿ ಎಡೆಗಳಲ್ಲಿ ಕಾಣುವ ರೂಪಕಾತ್ಮಕತೆಗಳು ನಾಟಕಕಾರರ ಕಾವ್ಯ ಪ್ರತಿಭೆ, ಸಂಗೀತಜ್ಞತೆಗಳಿಗೆ ನಿದರ್ಶನಗಳಾಗಿವೆ.

ಗೀತನಾಟಕ ಪ್ರಯೋಗ ಅನ್ಯ ಗದ್ಯನಾಟಕ ಪ್ರಯೋಗದಷ್ಟು ಸುಲಭವಲ್ಲ. ಗೀತನಾಟಕಕಾರನಿಗೆ ಗೀತ ಸಂಗೀತಗಳ ಸ್ಪಷ್ಟ ಕಲ್ಪನೆಯ ಜೊತೆಗೆ ರಂಗತಂತ್ರದ ಅರಿವಿನ ಅಗತ್ಯವೂ ಇದೆ. ಇಲ್ಲಿನ ನಾಟಕಕಾರರು ಪ್ರಯೋಗಾನುಕೂಲಕ್ಕೆ ಮತ್ತು ರಂಗ ಪರಿಣಾಮಗಳಿಗೆ ಸಾಧ್ಯವಾಗಬಹುದಾದ ರಂಗ ತತಂ್ರಗಳನ್ನೂ ರೂಪಿಸಿದ್ದಾರೆ. ಕೇವಲ ಗೀತ ಸಂಭಾಷಣೆಗಳಿಂದ ಬೇಸರವಾಗದಂತೆ ಹಾಡು, ನೃತ್ಯ ಸಂಯೋಜನೆಯ ಸೂಚನೆಯಿದೆ. ಕೆಲವೆಡೆಗಳಲ್ಲಿ ಪೂರ್ವಘಟನೆಗಳನ್ನು ಸೂಚಿಸಲು ಫ್ಲಾಷ್‌ಬ್ಯಾಕ್ ತಂತ್ರವನ್ನು ಬಳಸಿದ್ದಾರೆ. ಮಾಯಾ ಊರ್ವಶಿಯ ಪ್ರಸಂಗದಲ್ಲಿ ತಿಲೋತ್ತಮೆಯೂ ಊರ್ವಶಿಯೂ ಆಗುವ ಸನ್ನಿವೇಶ ನಿರ್ದೇಶಕರ ಕಲ್ಪನೆಗೆ ಒಡ್ಡಿದ ಸವಾಲಿನಂತಿದೆ.

ನಾಟಕದ ಅಂತ್ಯ ಧ್ವನಿಪೂರ್ಣ ಸನ್ನಿವೇಶದೊಂದಿಗೆ ನಿಲ್ಲುತ್ತದೆ. ಮನಸ್ಸು ಮುರಿದು ಹೋದ ಊರ್ವಶಿ, ಪುರೂರವನ ಸಮಜಾಯಿಷಿಯನ್ನೂ ಕೇಳಿಸಿಕೊಳ್ಳದ ಸ್ಥಿತಿಯಲ್ಲಿ ರಥವೇರಿ ಹೊರಟು ಹೋಗುವುದು; ಮಾಯಾ ಊರ್ವಶಿ ಮಾಯವಾಗುವುದು; ತಡೆವ ಪ್ರಯತ್ನದಲ್ಲಿ ಪುರೂರವ ಊರ್ವಶಿಯನ್ನು ಹಿಂಬಾಲಿಸುತ್ತಿರುವುದು- ಇವೆಲ್ಲ ನಡೆಯುತ್ತಿದ್ದಂತೆ ದೃಶ್ಯವನ್ನು ಹೆಪ್ಪುಗಟ್ಟಿಸುವುದು ಅಥವಾ ಫ್ರೀಜ್ ಮಾಡಿಸುವುದು ನಾಟಕಕ್ಕೆ ಹೆಚ್ಚಿನ ಪರಿಣಾಮಕಾರಿತೆ ಮತ್ತು ಧ್ವನ್ಯತೆಗಳನ್ನು ನೀಡಿವೆ.

ಲಕ್ಷ್ಮೀ ನಾರಾಯಣಭಟ್ಟರ ಕಾವ್ಯ ಪ್ರತಿಭೆ, ನಾಟ್ಯ ಪ್ರತಿಭೆಗಳೆರಡೂ ಈ ನಾಟಕದಲ್ಲಿ ಗರಿಗಟ್ಟಿದೆ ಎನ್ನುವುದರಲ್ಲಿ ಸಂಶಯವಿಲ್ಲ . ಹೊಸ ದೃಷ್ಟಿ, ಸಮಕಾಲೀನ ಚಿಂತನೆ, ಹೊಸ ಸನ್ನಿವೇಶಗಳ

ನಿರ್ಮಾಣ, ಪಾತ್ರಗಳ ಸಮರ್ಪಕ ಸ್ವಭಾವ ಚಿತ್ರಣ, ಭಾಷಾ ಪ್ರಯೋಗ, ಭಾವ ನಿರೂಪಣಾ ಸಾಮರ್ಥ್ಯಗಳಿಂದ ಕನ್ನಡದ ಗೀತನಾಟಕ ಪರಂಪರೆಗೆ ಒಂದು ಮೌಲಿಕ ಕೊಡುಗೆಯಾಗಿದೆ.

ಪು.ತಿ.ನರ "ಅಹಲ್ಯೆ" ನಾಟಕದಲ್ಲಿ ಧರ್ಮ-ಕಾಮಗಳು ಮುಖಾಮುಖಿ ಘರ್ಷಣೆಗೆ ಒಳಗಾದರೆ, 'ಊರ್ವಶಿ' ನಾಟಕದಲ್ಲಿ ಸ್ವರ್ಗ ಮರ್ತ್ಯಗಳು ಮುಖಾಮುಖಿಯಾಗುತ್ತವೆ. ಕಾರಂತರು ನಂಬಿರುವಂತೆ ಪುರಾಣವಸ್ತು ಭಾವನಾಲೋಕದ ಸತ್ಯಗಳು ಮಾನವನನ್ನು ತೂಗಿಸಬಲ್ಲ ರಾಗ-ದ್ವೇಷ, ಉಕ್ಕು-ಸೊಕ್ಕು ಕುಗ್ಗುತಗ್ಗು ಇತ್ಯಾದಿ ಭಾವಗಳೆಲ್ಲ ಇಲ್ಲಿಯೂ ತುಂಬಿವೆ. ಲೋಕ ದೇವಲೋಕವಾದರೂ ಅವರೆಲ್ಲರ ವರ್ತನೆಗಳು ಮನುಷ್ಯರದೇ ಆಗಿವೆ. ಒಟ್ಟಿನಲ್ಲಿ 'ಊರ್ವಶಿ' ಇತ್ತೀಚಿನ ಯಶಸ್ವೀ ಗೀತನಾಟಕವಾಗಿದೆ.



# ಜಿ.ವಿ. ಐಯ್ಯರ್ ಕಂಡ ರಾಮಾಯಣ

'ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ -ಎಂದು ಕುಮಾರ ವ್ಯಾಸ ರಾಮಾಯಣ ಕಾವ್ಯ ವಸ್ತುವನ್ನು ನಿರಾಕರಿಸಿ, ತನ್ನ ಕಾವ್ಯ ಪ್ರತಿಭೆ, ಭಕ್ತಿ ನಿಷ್ಠೆಯ ಅಭಿವ್ಯಕ್ತಿಗೆ ಮಹಾಭಾರತ ಕತೆಯನ್ನು ಆಯ್ದುಕೊಂಡದ್ದು ಅವನ ವೈಯಕ್ತಿಕ ನಿಲುವಿಗೆ ಸಮರ್ಥನೀಯವೆನಿಸಿದರೂ, ದ್ರಷ್ಟಾರ ದೃಷ್ಟಿಗೆ ರಾಮಾಯಣ ಕತೆ ತನ್ನ ಗರ್ಭದಲ್ಲಿ ಅಡಗಿಸಿಟ್ಟುಕೊಂಡಿರಬಹುದಾದ ಅದ್ಭುತ ಧ್ವನ್ಯತೆ ಅನಾವರಣ ಗೊಳ್ಳುತ್ತದೆ ಎನ್ನುವುದಕ್ಕೆ ಚಲನ ಚಿತ್ರ ಜಗತ್ತಿನ ದೈತ್ಯ ಪ್ರತಿಭೆಯಾಗಿರುವ ಜಿ.ವಿ. ಐಯ್ಯರ್ ಅವರು ರಾಮಾಯಣವನ್ನು ಕಂಡ ದೃಷ್ಟಿ ಮತ್ತು ಚಿತ್ರ ಮಾಧ್ಯಮದಲ್ಲಿ ನಿರೂಪಿಸಲು ಹೊರಟ ಸಾಹಸ ನಿಜಕ್ಕೂ ಅದ್ಭುತ ಸಾಕ್ಷಿಯಾಗಿದೆ. ರಾಮಾಯಣ ಕಾವ್ಯ ಕಥೆಗೆ ಹಲವು ಆಯಾಮಗಳಿವೆ; ಫ್ಲೆಕ್ಸಿಬಿಲಿಟಿ ಇದೆ. ಸೃಜನಶೀಲ ಪ್ರತಿಭೆಯ ಮೂಸೆಯಲ್ಲಿ ರಾಮಾಯಣ ಹಲವು ಅವತಾರಗಳನ್ನು ರೂಪಾಂತರಗಳನ್ನು, ಪಡೆಯುತ್ತದೆ. ಆಧ್ಯಾತ್ಮಿಕ, ಅನುಭಾವಿಕ ನೆಲೆಗಳಿಂದ ಹಿಡಿದು ಸಮಕಾಲೀನ ಗೊಳಿಸುವ ಎಲ್ಲ ಪ್ರಯತ್ನಗಳೂ ನಡೆದಿವೆ; ನಡೆಯುತ್ತಿವೆ.

ಇಂತಹ ಸಂದರ್ಭದಲ್ಲಿ ಐಯ್ಯರ್ ಅವರು ರಾಮಾಯಣವನ್ನು ದೃಶ್ಯಮಾಧ್ಯಮದಲ್ಲಿ ಚಲನಚಿತ್ರವಾಗಿಸಲು ಹೊರಟಿರುವುದು, ಮೇಲು ನೋಟಕ್ಕೆ ವಿಶೇಷವೇನೂ ಅನಿಸುವುದಿಲ್ಲ. ಏಕೆಂದರೆ ರಾಮಾಯಣ ಕತೆಯನ್ನು ಮತ್ತೆ ಮತ್ತೆ ಚಲನಚಿತ್ರವಾಗಿ, ದೂರದರ್ಶನ ಧಾರಾವಾಹಿಗಳಾಗಿ ನಿರ್ಮಿಸಿ ಅಳವಡಿಸುತ್ತಿರುವುದು ಸರ್ವೇ ಸಾಮಾನ್ಯವಾಗಿದೆ. ಆದರೆ ಜಿ.ವಿ. ಐಯ್ಯರ್ ಅವರು ನಿರ್ಮಿಸಲು ಹೊರಟ ರಾಮಾಯಣ ಚಲನ ಚಿತ್ರದ 'ಚಿತ್ರಕಥೆ'ಯ ಅವಲೋಕನ, ಒಮ್ಮೆಲೇ ನಮ್ಮ ನಿಲುವುಗಳನ್ನು ಬದಲಾಯಿಸಿ ಬಿಡುತ್ತದೆ. ಇವರು ರಾಮಾಯಣವನ್ನು ಕಂಡು ಅರ್ಥೈಸಿರುವ ರೀತಿ ನಿಜಕ್ಕೂ ರೋಮಾಂಚಕಾರಿಯಾಗಿದೆ. ಸನಾತನ ಸಂಸ್ಕೃತಿಯ ಬಹುಮುಖತೆಯ ಪರಿಚಯವಿರುವ ಮತ್ತು ಭಾರತೀಯ ಸಾಂಸ್ಕೃತಿಕ ಪರಂಪರೆಯ ಅಂತರ್ಗತ ವಿಷಯಗಳಾದ ವೇದ, ಶಾಸ್ತ್ರ, ಪುರಾಣ, ಮಹಾಕಾವ್ಯಗಳ, ಭಾರತೀಯ ದರ್ಶನಗಳ, ಉಪನಿಷತ್ತುಗಳ, ಧಾರ್ಮಿಕ ನಂಬಿಕೆ, ತಾತ್ವಿಕ ಚಿಂತನೆಗಳ ಬಗ್ಗೆ ಆಳವಾದ ಅರಿವುಳ್ಳ ಮತ್ತು ಅವುಗಳ ಅರ್ಥವನ್ನು ಅರಗಿಸಿಕೊಂಡು ಸ್ವತಂತ್ರ ದೃಷ್ಟಿಯನ್ನು ರೂಪಿಸಿಕೊಳ್ಳಬಲ್ಲ ಐಯ್ಯರ್ ಅವರು ತಮ್ಮ ಕಾಣ್ಕೆಗಳನ್ನು ಜನಸಾಮಾನ್ಯರಿಗೆ

ತಲುಪಿಸಲು ಚಲನಚಿತ್ರ ಮಾಧ್ಯಮವನ್ನು ಅದ್ಭುತವಾಗಿ ದುಡಿಸಿಕೊಂಡರು. ಅವರ ಚಲನಚಿತ್ರಗಳು ಕಲಾತ್ಮಕವಾಗಿ, ತಾತ್ವಿಕವಾಗಿ ಹೊಸದನ್ನು, ವಿಶಿಷ್ಟವಾದುದನ್ನು ನೀಡುತ್ತಲೇ ಬಂದಿವೆ. ಈ ಹಾದಿಯಲ್ಲಿ ಬರಲಿರುವ ರಾಮಾಯಣದ 'ಚಿತ್ರಕಥೆ' ಹಲವು ದೃಷ್ಟಿಗಳಿಂದ ಮಹತ್ವದ್ದೆನಿಸಿದೆ. ಮನುಷ್ಯ ದೇಹವನ್ನೇ ರಾಮಾಯಣವಾಗಿ ಪರಿಭಾವಿಸಲು ಹೊರಟಿರುವ ಐಯ್ಯರ್ ಅಲ್ಲಿನ ಪಾತ್ರಗಳನ್ನು ಮನುಷ್ಯ ದೇಹದ ಭಾಗಗಳ, ಭಾವಗಳ ಪ್ರತೀಕಗಳಾಗಿಸಿದ್ದಾರೆ. ಇವರ ಈ ಕಾಣ್ಕೆಯಲ್ಲಿ ಎರಡು ಸಾಧ್ಯತೆಗಳನ್ನು ಗುರುತಿಸಬಹುದು ರಾಮಾಯಣಕ್ಕೆ ಒಡ್ಡಿದ ಪ್ರತಿಮೆಯ ದೇಹವೂ, ದೇಹಕ್ಕೊಡ್ಡಿದ ರೂಪಕವಾಗಿ ರಾಮಾಯಣವೂ ನಿಲ್ಲುವ, ಅರ್ಥೈಸಿಕೊಳ್ಳುವ ಸಾಧ್ಯತೆಗಳಿವೆ.

ಚಿತ್ರಕಥೆಯಾಗಿ ನಮ್ಮ ಮುಂದಿರುವ ಈ ರಾಮಾಯಣದ ಪ್ರೊಜೆಕ್ಷನ್, ದೃಶ್ಯೀಕರಿಸುವ ತಂತ್ರ, ಬಣ್ಣ ಬೆಳಕುಗಳ ವಿನ್ಯಾಸ, ಸಾಂಕೇತಿಕ ಗೊಳಿಸುವ ನಿರ್ದೇಶನ ಕೌಶಲ ಇವೆಲ್ಲವುಗಳ ಸಮರ್ಪಕ, ಸಮರ್ಥ ಸಂಯೋಜನೆಗಳನ್ನು ಅವಲಂಬಿಸಿ ಇದರ ಯಶಸ್ಸು ನಿಲ್ಲುತ್ತದೆ. ಚಿತ್ರಕಥೆಯ ಕಥೆಯ ಅಂಶದ ಜೊತೆ ದೇಹದ ಭೂಮ ಕಲ್ಪನೆ, ರೂಢಿಗಿಂತ ಭಿನ್ನ ನೆಲೆಯಲ್ಲಿನ ಚಿತ್ರ ಸಂಭಾಷಣೆಗಳು, ಮೈ ನವಿರೇಳಿಸುವ ಪರಿಣಾಮವನ್ನು ಉಂಟುಮಾಡಬಲ್ಲವು. ಅಲ್ಲಲ್ಲಿ ಕಂಸಗಳಲ್ಲಿ ಸನ್ನಿವೇಶಗಳನ್ನು, ಸನ್ನಿವೇಶಗಳನ್ನು ಹೇಗೆ ಸೃಷ್ಟಿಸಬೇಕೆಂಬ ಸೂಚನೆಗಳನ್ನೂ ನೀಡಿದ್ದಾರೆ.

ರಾಮಾಯಣದ ಇಲ್ಲಿನ ಕತೆ ಮೂಲಕತೆಯ ಜಾಡಿನಲ್ಲಿ ಮತ್ತು ಸನ್ನಿವೇಶ, ಸಂದರ್ಭ, ಘಟನೆಗಳು ಅದೇ ಕ್ರಮದಲ್ಲಿ ಬಂದಿರುವುದಾದರೂ ಕತೆ ಸವಿಸ್ತಾರವಾಗಿ ಬೆಳೆಯುವುದಿಲ್ಲ. ಕತೆಯ ಬೆಳವಣಿಗೆ ಶಬ್ದಗಳಲ್ಲಿ ವಿವರಣೆಗೊಳ್ಳುವುದಕ್ಕಿಂತಲೂ ಕ್ಯಾಮರಾ ಫೋಕಸ್ ಮೂಲಕ ವಿವರಗಳು ಬಿಚ್ಚಿಕೊಳ್ಳುತ್ತವೆ.

ವಿಶ್ವರೂಪದ ಪರಿಕಲ್ಪನೆಯನ್ನು ನೆನಪಿಗೆ ತರುವ ಅವರ ಭೂಮದೇಹವೇ ರಾಮಾಯಣ ಪಾತ್ರಗಳ ಜನ್ಮ ಸ್ಥಾನ. ಎಲ್ಲ ಪಾತ್ರಗಳೂ, ಘಟನೆಗಳು, ಸನ್ನಿವೇಶಗಳೂ ಅನುಕ್ರಮವಾಗಿ ಪರಿಕ್ರಮಿಸುತ್ತವೆ. ದೇಹ, ದೇಹದೊಳಗಿನ ನರನಾಡಿಗಳು ಕಾಯಗಳು ಅರಿಷಡ್ವರ್ಗಗಳು, ಮೂಲ ಪ್ರವೃತ್ತಿಗಳು ಹಿಂಸಕ ಮನೋದರ್ಮಗಳು, ಸ್ಥಾಯಿ, ಸಂಚಾರಿ ಭಾವಗಳು ಇವೇ ಇಲ್ಲಿನ ಪಾತ್ರಲೋಕದ ವ್ಯಕ್ತಿಗಳು. ಕತೆ, ಸನ್ನಿವೇಶ, ಸಂದರ್ಭಗಳು ಮೂಲ ರಾಮಾಯಣ ಕಾವ್ಯದ್ದು. ಆದರೂ ಅವುಗಳನ್ನು ಪ್ರತಿನಿಧಿಸಿರುವ, ವ್ಯಾಖ್ಯಾನಿಸಿರುವ ರೀತಿ, ದೃಷ್ಟಿ ಬೇರೆ ಬೇರೆಯಾಗಿದೆ. ಪ್ರತಿ ಮನುಷ್ಯನಲ್ಲಿರುವ ಸತ್ವ ರಜ ತಮೋ ಗುಣಗಳೇ ಕೌಸಲ್ಯೆ, ಸುಮಿತ್ರೆ, ಕೈಕೆಯರಾಗಿ, ದಶರಥ ದೇಹ ಸಾಮ್ರಾಜ್ಯದ ಅಧಿಪತಿಯಾಗಿ, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳನ್ನು ಹಾಸುಹೊಕ್ಕು ಕಾಣಿಸಿಕೊಳ್ಳುವರು. ಈ ದಶರಥ ತ್ರಿಗುಣಾತ್ಮಕರಾದ ಮೂವರು ನಡದಿಯರನ್ನು ಮದುವೆಯಾಗಿ, ಚತುರ್ವಿಧ ಪುರುಷಾರ್ಥಗಳನ್ನು ಪ್ರತಿನಿಧಿಸುವ ರಾಮ, ಲಕ್ಷ್ಮಣ, ಶತ್ರುಘ್ನ, ಭರತರನ್ನು ಮಕ್ಕಳಾಗಿ ಪಡೆಯುತ್ತಾನೆ. ಮುಂದಿನ ಕತೆಯೆಲ್ಲವೂ ಮೂಲಕತೆಯಂತೆಯೇ ಮುಂದುವರೆಯುತ್ತದೆ. ಆದರೆ ಕೈಕೆಯಲ್ಲಿ ಮಂಥರೆಯ ದುರ್ಬೋಧೆಯಿಂದ ತಾಮಸ ಪ್ರಕೃತಿ ಮೇಲ್ಗೆಯಾಗಿ ರಾಮವನವಾಸ

ಘಟಿಸುತ್ತದೆ. ಇದಕ್ಕೂ ಮೊದಲಿನ ಪ್ರಸಂಗವಾದ, ಯಾಗ ರಕ್ಷೆಗೆಂದು ವಿಶಾಮಿತ್ರರು ರಾಮಲಕ್ಷ್ಮಣರನ್ನು ಕರೆದೊಯ್ಯುವುದು ಎಲ್ಲರಿಗೂ ತಿಳಿದ ಸಾಮಾನ್ಯ ಸಂಗತಿ. ಆದರೆ ಇಲ್ಲಿ ಬೇರೆಯೇ ಉದ್ದೇಶಕ್ಕಾಗಿ ವಿಶ್ವಮಿತ್ರರಾದ ವಿಶ್ವಾಮಿತ್ರರು ರಾಮಲಕ್ಷ್ಮಣರನ್ನೂ ಜೊತೆಗೆ ಕರೆದೊಯ್ಯುತ್ತಾರೆ. ಇಲ್ಲಿ ಆನಂದಯಾನವನ್ನು ಕೈಗೊಳ್ಳಲು ದೇಹಸಾಮ್ರಾಜ್ಯ ಪರ್ಯಟನೆ ಮಾಡಿಸಲು ರಾಮಲಕ್ಷ್ಮಣರನ್ನು ಕರೆತಂದು ತನ್ನೊಳಗಿನ ಭ್ರಮೆಯ ರಾಕ್ಷಸನನ್ನು ಹೊಡೆದೋಡಿಸಲು ಮತ್ತು ಯಜ್ಞದಲ್ಲಿನ ಹಿಂಸೆಯನ್ನು ನಿವಾರಿಸಲು ಆದೇಶಿಸುತ್ತಾನೆ. ವಿಜ್ಞಾನರೂಪಿ ಸೀತೆಯನ್ನು ಧರ್ಮ ಸ್ವರೂಪಿ ರಾಮನೊಂದಿಗೆ ಜೊತೆಗೂಡಿಸುತ್ತಾನೆ. ಕುಂಡಲಿನೀ ರೂಪಿಯಾದ ಅಹಲ್ಯೆಯ ಉದ್ಧಾರ ಮಾಡಿಸುತ್ತಾನೆ. ರಾಮ, ಲಕ್ಷ್ಮಣ, ಸೀತೆಯರು ಆನಂದ, ಸಾಧನೆ, ವಿಜ್ಞಾನಗಳನ್ನು ಪ್ರತೀಕಿಸುವುದರ ಮೂಲಕ ಮನುಷ್ಯ ಬದುಕಿನಲ್ಲಿ ಇವುಗಳ ಅಗತ್ಯದ ಅನಿವಾರ್ಯತೆಯನ್ನು ಧ್ವನಿಸುತ್ತಾರೆ. ಕತೆಯ ಮೂಲಕವಾಗಿಯೇ ಅನೇಕ ಸಮಕಾಲೀನ ವಿಚಾರಗಳ ಚಿಂತನೆ ನಡೆಸಿದ್ದಾರೆ. ಧರ್ಮ, ಕರ್ಮ (ಯಜ್ಞಕರ್ಮ) ನೆಲೆಯಲ್ಲಿಯೂ ವೈಜ್ಞಾನಿಕತೆ ಅಥವಾ ವಿಜ್ಞಾನದ ಅಗತ್ಯವಿದೆ. ಅಂಧ ಶ್ರದ್ಧೆಯ ಆಚರಣೆ, ಅನುಷ್ಠಾನಗಳು ನಿಷ್ಪ್ರಯೋಜಕವೆನ್ನುವ ಆಧುನಿಕ ನಿಲುವು ಶೂರ್ಪನಖಿ ಪಾತ್ರದ ಮೂಲಕವಾಗಿ ವ್ಯಂಜಿಸಿದ್ದಾರೆ. ತನಗಾದ ಅವಮಾನಕ್ಕೆ ಸೇಡುತೀರಿಸಿಕೊಳ್ಳಲು ಅಣ್ಣ ರಾವಣನಲ್ಲಿಗೆ ಬಂದು ಸೀತೆಯ ರೂಪಲಾವಣ್ಯಗಳನ್ನು ಬಣ್ಣಿಸಿ ಅವನನ್ನು ಪ್ರಚೋದಿಸುವುದಿಲ್ಲ. ಬದಲಾಗಿ ಸೀತೆಯನ್ನು ಪಡೆಯಲು ಪ್ರಚೋದಿಸುವ ಕಾರಣ ಇಲ್ಲಿ ತರ್ಕಬದ್ಧವಾಗಿ ಕಾಣಿಸುತ್ತದೆ. ವೈದಿಕ ಸಂಸ್ಕೃತಿಯನ್ನು ಅತಿಯಾಗಿ ಪುರಸ್ಕರಿಸುವ, ಯಾಗ ಕರ್ಮಗಳಲ್ಲಿ ಅಚಲ ನಂಬಿಕೆಯುಳ್ಳ ರಾವಣನನ್ನು ಖಂಡಿಸುವ, ಛೀಮಾರಿ ಹಾಕುವ ಶೂರ್ಪನಖಿಯ ಮಾತುಗಳಲ್ಲಿ, ರಾವಣನು ಸೀತಾಪಹರಣ ಮಾಡಲು ತರ್ಕಬದ್ಧ ಸಮರ್ಥನೆ ಗೋಚರಿಸುತ್ತದೆ. ತನ್ನ ಪೌರುಷದ ಬಗ್ಗೆ ಅಹಂಕಾರವನ್ನು ಬೀಗಿದ ರಾವಣನಿಗೆ, ಶೂರ್ಪನಖಿ "ನಿನ್ನ ಅರಚು ಕಿರುಚೆಲ್ಲಾ ವಿಜ್ಞಾನ ವಿಹೀನ ಅಂದಶ್ರದ್ಧೆಯ ಈ ಯಜ್ಞ ಕರ್ಮಗಳಲ್ಲಿ, ಬಲಿಗಳಲ್ಲಿ, ಕಾಮ ಭೋಗೇಂದ್ರಿಯಗಳ ಸಂತೃಪ್ತಿಯಲ್ಲಿ. ಸ್ವತಂತ್ರವಾದ ವಿವೇಚನೆಯಿಲ್ಲ; ತೀರ್ಮಾನವಿಲ್ಲ-ವೈಚಾರಿಕ ದೃಷ್ಟಿಯೂ, ಇಲ್ಲ. ನೀ ಹೇಗೆ ಶಾಶ್ವತ ದೊರೆಯಾಗಬಲ್ಲೆ? ಅಣ್ಣಾ, ವೇದಾಂತದ ಜಗತ್ತಿನಲ್ಲಿ ವಿಜ್ಞಾನದ ಬೆಂಬಲವಿದೆ. ರಾಮನಲ್ಲಿ ಈ ಜಗತ್ತೇ ಮೋಹಿಸುವ ವಿಜ್ಞಾನಮಯಿ ಸೀತೆಯಿದ್ದಾಳೆ. ನೇರ ಯುದ್ಧಮಾಡಿ ಅವನನ್ನು ಗೆಲ್ಲುವುದು ಅಸಾಧ್ಯ. ಮೇಲಾಗಿ ಉಗುರಿನಲ್ಲಿ ಹೋಗುವುದಕ್ಕೆ ಕೊಡಲಿಯೇಕೆ ಬೇಕು? ನೀನು ಹೇಗಾದರೂ ಉಪಾಯದಿಂದ ಆ ವಿಜ್ಞಾನಮಯಿ ಸೀತೆಯನ್ನು ತಂದು ಬಿಟ್ಟರೆ ವಿಜ್ಞಾನ ವಿರಹಿತ ಧರ್ಮ ದಿಕ್ಕು ತೋರದೆ ಸಾಯುವುದು ಖಂಡಿತ" ಎನ್ನುವ ಮಾತುಗಳಲ್ಲಿ ಎರಡು ಅಂಶಗಳು ಸ್ಪಷ್ಟವಾಗುತ್ತವೆ. ಧರ್ಮಕ್ಕೂ ವಿಜ್ಞಾನದ ಅಗತ್ಯವಿದೆ, ಎನ್ನುವುದು ಒಂದಾದರೆ ರಾವಣನು ಸೀತೆಯನ್ನು ಕೊಂಡೊಯ್ದು ಉದ್ದೇಶ ವಿಜ್ಞಾನದ ಬೆಂಬಲ ಪಡೆಯುವುದಕ್ಕಾಗಿಯೇ ಎಂಬುದು ಎರಡನೆ ಅಂಶ. ಇದರಿಂದಾಗಿ ರಾವಣನ ವ್ಯಕ್ತಿತ್ವದ ಉದಾತ್ತೀಕರಣವನ್ನೂ ಲೇಖಕರು ಸಾಧ್ಯವಾಗಿಸಿದ್ದಾರೆ.

ಇದೇ ರೀತಿಯಲ್ಲಿ ಮಾಯಾಮೃಗವಾಗಿ ಕಾಂಚನ ಮೃಗವಾಗಿ ಕಾಣಿಸಿಕೊಂಡದ್ದಕ್ಕೆ ಸೀತೆಯಲ್ಲಿ ಮೂಡಿದ ಬಯಕೆಯನ್ನು ವಿಜ್ಞಾನದ ಶೋಧ ಪ್ರವೃತ್ತಿಯೆಂದು, ಶೋಧ ಪ್ರವೃತ್ತಿಯೇ ಅದರ ದೌರ್ಬಲ್ಯವೆಂದೂ ವ್ಯಾಖ್ಯಾನಿಸಿದ್ದಾರೆ. ಹೀಗೆ ಐಯ್ಯರ್ ಅವರು ಅನೇಕ ಸನ್ನಿವೇಶಗಳನ್ನು ತಮ್ಮ ದೃಷ್ಟಿ, ಕಾಣ್ಕೆಗಳಿಗನು ಗುಣವಾಗಿ ಅರ್ಥೈಸಿದ್ದಾರೆ. ಸೀತಾಪಹರಣ, ಸೀತಾನ್ವೇಷಣ, ಹನುಮ ಸುಗ್ರೀವ ಸಖ್ಯ, ಕಿಷ್ಕಿಂಧಾ ಪ್ರವೇಶ, ವಾಲಿವಧ, ಸೇತು ಬಂಧನ, ರಾಕ್ಷಸ ಸಂಹಾರ, ರಾವಣನ ಮೇಲೆ ದಿಗ್ವಿಜಯ ಎಲ್ಲವೂ ಸಾಂಕೇತಿಕ, ನೆಲೆಯಲ್ಲಿ ಮುಂದುವರೆಯುತ್ತದೆ. ಪ್ರತಿಯೊಂದು ಸನ್ನಿವೇಶದಲ್ಲಿ ಬರುವ ಸಂಭಾಷಣೆಗಳು ಆಧ್ಯಾತ್ಮಿಕ ಪರಿಭಾಷೆಯಲ್ಲಿರುತ್ತದೆ. ವೇದಾಸ್ತ್ರ, ವೇದಕರ್ಮಗಳಿಗೆ ಹೊಸ ವ್ಯಾಖ್ಯಾನವಿದೆ. ಹಿಂಸಾಮೂಲವಾದ ಯಜ್ಞಕರ್ಮಗಳು ಅಂಧ ಶ್ರದ್ಧೆಯ ಪರಿಣಾಮವೇ ಹೊರತು, ಫಲಕಾರಿಯಾಗುವುದಿಲ್ಲ. ವೇದಾನ್ತಿಗಳು ಪುರಸ್ಕರಿಸುವ ಅಹಿಂಸೆಯೊಂದಿಗೆ ವಿಜ್ಞಾನ ಶಾಂತಿ ಸಾಮರಸ್ಯಗಳೊಂದಿಗೆ ಬಾಳುತ್ತದೆ; ಆದರೆ ಹಿಂಸೆಯ ಕೈಗೆ ವಿಜ್ಞಾನ ಬಿದ್ದಲ್ಲಿ ಯುದ್ಧ, ವಿನಾಶಗಳೇ ಅಂತಿಮ ಪರಿಣಾಮವೆನ್ನುವ ಇಲ್ಲಿನ ಚಿಂತನೆಯಲ್ಲಿ ಆಧುನಿಕ ಅಣ್ವಸ್ತ್ರಗಳು ಹಿಂಸಕ ಪ್ರವೃತ್ತಿಯ ದೇಶಗಳಿಂದ ಬಳಕೆಯಾಗಿ ಅವು ಉಂಟುಮಾಡಿರುವ ವಿಧ್ವಂಸಕತೆಯ ಕಡೆ ನಿರ್ದೇಶಿಸುತ್ತಲೇ ವಿಜ್ಞಾನದ ಔಚಿತ್ಯಪೂರ್ಣ ಬಳಕೆಯಾಗಬೇಕೆಂಬ ಸೂಚನೆಯೂ ಕಾಣುತ್ತದೆ.

ವೈದಿಕರ ಸಮೃದ್ಧಿಯ ಸಾಮ್ರಾಜ್ಯವಾದ ಲಂಕೆಯು ವೇದಾಂತದ ಭಾವನೆಗಳಿಂದ ಹೇಗೆ ಪರಿವರ್ತನೆಯಾಗಬಹುದೋ ಎಂದು ಕುತೂಹಲದಿಂದ ಕಾಯುವ ವಾಲ್ಮೀಕಿಯಂತೆಯೇ ನಾವೂ ಇಂದಿನ ಪರಿಸ್ಥಿತಿಯಲ್ಲಿ ಅಂತಹದೇ ಪರಿವರ್ತನೆಗಾಗಿ ಕಾಯಬೇಕಾದ ಅಗತ್ಯವಿದೆ.

ರಾವಣರು, ರಾಕ್ಷಸರು, ಕುಂಭಕರ್ಣ, ಇಂದ್ರಜಿತಾದಿಗಳೆಲ್ಲರೂ ನಮ್ಮೊಳಗೇ ಇದ್ದಾರೆ ಎನ್ನುವುದನ್ನು ಐಯ್ಯರ್ ಅವರು establish ಮಾಡ ಹೊರಟಿದ್ದಾರೆ. ವೈದಿಕ ಕರ್ಮದ ವಿಕೃತ ರೂಪಗಳು, ಭ್ರಮೆಗಳು, ಹಿಂಸಾ ಪ್ರವೃತ್ತಿಗಳು, ಹಸಿವು ನೀರಡಿಕೆಗಳು- ಇವೇ ಇಲ್ಲಿನ ರಾಮಾಯಣ ಲೋಕದ ರಾಕ್ಷಸರು. ಈ ರಾಕ್ಷಸರನ್ನು ಗೆಲ್ಲದ ಹೊರತು ಧರ್ಮ ಸ್ಥಾಪನೆ ಸಾಧ್ಯವಾಗುವುದಿಲ್ಲ. ಹಿಂಸೆಯ ಸೆರೆಯಿಂದ ವಿಜ್ಞಾನ (ಸೀತೆ) ಬಿಡುಗಡೆಯಾಗುವುದಿಲ್ಲ. ಆದರೆ ವಿಜ್ಞಾನಕ್ಕೆ ಯಾವ ಅಪಾಯವೂ ಇಲ್ಲ. ರಾವಣ ಸೀತಿಯನ್ನು ಉಳಿಸುವುದು ತನ್ನ ಕಾಮದಾಹದ ತಣಿವಿಗಲ್ಲ, ವೈದಿಕ ಸಾಮ್ರಾಜ್ಯಕ್ಕೆ ವಿಜ್ಞಾನ ಬೇಕೇ ಬೇಕೆಂಬ ಅರಿವಿನ ಉದಯವಾಗುವುದರಿಂದ! ಇಲ್ಲಿನ ರಾವಣನಲ್ಲಿ ಯಜ್ಞಕರ್ಮಗಳ ಬಗೆಗಿನ ಅಂಧಶ್ರದ್ಧೆಯ ಹೊರತಾಗಿ ಅವಗುಣಗಳಿಲ್ಲ. ಆದರೂ ಅವನಲ್ಲಿ ನಿಮಿರಿ ನಿಲ್ಲುವ ಅಹಂಕಾರ, ಹಿಂಸೆಯ ಪ್ರವೃತ್ತಿಗಳಿಗೆ ಅವನು ಹೊಣೆಯಲ್ಲವೆಂಬ ಲೇಖಕರ ನಿಲುವಿನ ಸಮರ್ಥನೆಗೆ ಮಾತಲಿ ಹೇಳುವ "ಜ್ಞಾನದಿಂದ ರಾವಣ ಅಜೇಯ ರಾಮಚಂದ್ರ. ಅವನ ತಪ್ಪುಗಳೆಲ್ಲ ಹೃದಯ ವೇದನೆಯ ಹಿಂಸೆಗಳು" ಎಂಬ ಮಾತುಗಳೇ ಸಾಕ್ಷಿ.

ಚಿತ್ರಕಥೆಯ ಉದ್ದಕ್ಕೂ ರೂಪಕಗಳನ್ನು ಬಳಸುತ್ತಾರೆ. ಬರಹದ ಮೂಲಕ ಗ್ರಹಿಸಬಹುದಾದ ಅರ್ಥಧ್ವನಿಗಳನ್ನು ದೃಶ್ಯಮಾಧ್ಯಮದ ಮೂಲಕ ಹೇಗೆ ಸಂವಹನವನ್ನು ಸಾಧ್ಯವಾಗಿಸುವರೆಂಬುದೇ ಒಂದು ಕುತೂಹಲದ ಸಂಗತಿ. ಅದಕ್ಕಾಗಿ ಅವರು ವಿಭಿನ್ನ ತಂತ್ರಗಳನ್ನು ಬಳಸಿಕೊಂಡಿದ್ದಾರೆ.

ಬೇರೆ ಬೇರೆ ಪಾತ್ರಗಳ ಸಂಭಾಷಣೆಯ ಮೂಲಕ, ಹಿನ್ನೆಲೆಯ 'ಧ್ವನಿ'ಯ ಮೂಲಕ ರೂಪಕದ ಕಲ್ಪನೆಯನ್ನು ಕಟ್ಟಿಕೊಡುವ ಪ್ರಯತ್ನವಿದೆ. ಉದಾಹರಣೆಗೆ ರಾವಣನ ಸಾವನ್ನು ಮಹಾವೃಕ್ಷವೊಂದು ಕೆಳಗುರುಳುವಂತೆ ಎಂದು ವಿವರಿಸಲಾಗಿದೆ. ರಾವಣ ಉರುಳಿದ ಕೂಡಲೇ' ವೈದಿಕ ನಿಷ್ಠೆಯ ಮಹಾವೃಕ್ಷ ಕೆಳಗುರುಳಿತು. ಶೌರ್ಯದ ಸಾರವೇ ಹೊರಟು ಹೋಯಿತು. ಸೂರ್ಯನು ಭೂಮಿಗೆ ಬಿದ್ದನು. ಚಂದ್ರನು ಕತ್ತಲಲ್ಲಿ ಮುಳುಗಿದನು. ಅಗ್ನಿಯ ಕಾವು ಅಳಿಯಿತು. ಉತ್ಸಾಹ ಶಕ್ತಿಗೆ ಆಶ್ರಯ ತಪ್ಪಿತು. ಧೈರ್ಯವೆಂಬ ಚಿಗುರು, ಛಲವೆಂಬ ಪುಷ್ಪ, ತಪಸ್ಸೆಂಬ ದೃಢತೆ, ಶೌರ್ಯವೆಂಬ ಬೇರಲ್ಲಿ ಬಲವಾಗಿ ಬೆಳೆದು ನಿಂತಿದ್ದ ಮಹಾವೃಕ್ಷ ಭೂಮಿಗೆ ಬಿದ್ದು ಹೋಯಿತು'- ಎನ್ನುವ ಮಾತುಗಳಲ್ಲಿ ರಾವಣನ ಸಮಗ್ರ ವ್ಯಕ್ತಿತ್ವವೇ ಕಣ್ಣಿಗೆ ಕಟ್ಟಿದಂತಾಗುತ್ತದೆ. ಏಕ ಕಾಲಕ್ಕೆ ಮನಸ್ಸು ಅವನ ದೌರ್ಬಲ್ಯಗಳನ್ನು ಮರೆತು ಸಹಾನುಭೂತಿಯಿಂದ ಸ್ಪಂದಿಸುತ್ತದೆ.

ಐಯ್ಯರ್ ಅವರ ಈ ರಾಮಾಯಣ ಕಲ್ಪನೆಯಲ್ಲಿ ಅಧ್ಯಾತ್ಮವಿದೆ; ವೇದಾಂತವಿದೆ; ಯೋಗ ಶಾಸ್ತ್ರವಿದೆ; ಆಧುನಿಕ ಚಿಂತನೆಯಿದೆ; ವೈಚಾರಿಕ, ವೈಜ್ಞಾನಿಕ ದೃಷ್ಟಿ ಇದೆ. ಇಷ್ಟೆಲ್ಲವನ್ನೂ ಮೇಳವಿಸಿಕೊಂಡು ದೃಶ್ಯ ಮಾಧ್ಯಮದ ಮೂಲಕ ಪ್ರೇಕ್ಷಕ ಸಮುದಾಯಕ್ಕೆ ತಮ್ಮ ದರ್ಶನವನ್ನು ತಲುಪಿಸುವುದು ನಿಜಕ್ಕೂ ಒಂದು ಸವಾಲು. ಸಾಮಾನ್ಯ ರಂಜನೆ ನೀಡುವುದಕ್ಕಿಂತ ಮಹತ್ತರ ಸಂದೇಶಗಳನ್ನು ಚಿತ್ರದ ಮೂಲಕ ರವಾನಿಸುವ ಉದ್ದೇಶವೇ ಪ್ರಮುಖವಾಗಿ ಕೆಲಸ ಮಾಡಿದೆ. ಆಧ್ಯಾತ್ಮಿಕ ಸತ್ಯಗಳನ್ನು, ಕಾಣ್ಕೆಗಳನ್ನು ಸನ್ನಿವೇಶ ಸಂದರ್ಭಗಳ ಮೂಲಕ ಧ್ವನಿಸಿದ್ದಾರೆ. ಒಟ್ಟಾರೆಯ ನಿಲುವಿನಲ್ಲಿ, ಕರ್ಮಕ್ಕಿಂತ ಜ್ಞಾನದೊಡ್ಡದು; ಅಹಿಂಸೆ, ವಿಜ್ಞಾನಗಳು ಧರ್ಮದ ಸಾಹಚರ್ಯದೊಂದಿಗೆ ಒಡಗೂಡಿರಬೇಕು; ಪ್ರತಿ ಮನುಷ್ಯನಲ್ಲಿರುವ ಭಾವಗಳೇ ಅವರವರ ಶಕ್ತಿ ಸಾಮರ್ಥ್ಯ ವ್ಯಕ್ತಿತ್ವಗಳನ್ನು ನಿರ್ಧರಿಸುತ್ತವೆ ಎನ್ನುವ ವಿಚಾರ, ಚಿಂತನೆಗಳಿವೆ.

ಪರಿಚಿತ ರಾಮಾಯಣ ಕಥೆಯನ್ನು ಪುನರುಚ್ಚರಿಸಿದೆ. ರಾಮಾಯಣ ಕಥಾ ಹಂದರದ ಮೇಲೆ ದೇಹವನ್ನೇ ರಾಮಾಯಣವಾಗಿಸಿ ವ್ಯಾಖ್ಯಾನಿಸಿ ಕಲ್ಪಿಸಿರುವ ರೀತಿಯೇ ಅದ್ಭುತವಾಗಿದೆ. ದೃಶ್ಯ, ತಂತ್ರ, ಕಥಾ ನಿರೂಪಣೆ, ನೆರಳು ಬೆಳಕುಗಳ ಮೂಲಕವೇ ಈ ಅದ್ಭುತ ಕಲ್ಪನೆಯನ್ನು ಸಾಕ್ಷಾತ್ಕಾರವಾಗಿಸ ಹೊರಟಿರುವ ಐಯ್ಯರ್ ಅವರ ಈ ಸಾಹಸವನ್ನು ಕುತೂಹಲದ ಕಣ್ಣುಗಳಿಂದ ನಿರೀಕ್ಷಿಸಬೇಕಿದೆ.



## ಗೌರೀಶ್ ಕಾಯ್ಕಿಣಿ ಅವರ ಗೀತನಾಟಕಗಳು-ಒಂದು ಸಮೀಕ್ಷೆ

ಕನ್ನಡ ಸಾಹಿತ್ಯದಲ್ಲಿ ಗೌರೀಶ್‌ಕಾಯ್ಕಿಣಿಯವರು ಚಿಂತನ ಪರವಾದ ಬರಹಗಳಿಂದ ಗಮನಾರ್ಹರೆನಿಸಿದ್ದಾರೆ. ಬಹು ಮುಖ ಪ್ರತಿಭೆಯ ಕಾಯ್ಕಿಣಿಯವರು ಸಾಹಿತ್ಯದ ಅನ್ಯ ಪ್ರಕಾರಗಳಲ್ಲಿಯೂ ಪ್ರಯೋಗ ಶೀಲರೆನಿಸಿದ್ದರೂ 'ಕನ್ನಡ ಗೀತನಾಟಕ' ಸಂಬಂಧವಾಗಿ ಪ್ರಮುಖರೆನಿಸಿದ್ದಾರೆ. ಗೀತನಾಟಕವೆಂದ ಕೂಡಲೇ ನಮಗೆ ತಟ್ಟನೆ ನೆನಪಾಗುವುದು ಪು.ತಿ.ನ ಮತ್ತು ಕಾರಂತರು ಮಾತ್ರ. ಆದರೆ ಅತ್ಯಂತ ಸಂವೇದನಾಶೀಲ ಸೃಜನಶೀಲ ಮನಸ್ಸುಗಳು ಕೇವಲ ಒಂದು ಪ್ರಕಾರಕ್ಕೆ ಸೀಮಿತಗೊಳ್ಳದೆ ಹಲವು ಪ್ರಕಾರಗಳಲ್ಲಿ ಪ್ರಯೋಗಕ್ಕೆ ಮುಂದಾಗುತ್ತಾರೆ. ಕಥೆ, ಕಾದಂಬರಿ, ಕವನ, ನಾಟಕಗಳು ಸಾಕಷ್ಟು ಸಂಖ್ಯೆಯಲ್ಲಿ ಕನ್ನಡ ಸಾಹಿತ್ಯದಲ್ಲಿ ಕಾಣಸಿಗುವುದಾದರೂ 'ಗೀತನಾಟಕ' ಪ್ರಕಾರಕ್ಕೆ ಸ್ಪಂದಿಸಿ ಬರೆದದ್ದು ಕೇವಲ ಕೆಲವರು ಮಾತ್ರ. ಗದ್ಯ ನಾಟಕ, ಪದ್ಯನಾಟಕ, ಗಪದ್ಯ ನಾಟಕಗಳು ಸಾಮಾನ್ಯವಾಗಿ ಸಂಸ್ಕೃತ, ಕನ್ನಡ ಎರಡೂ ಭಾಷೆಗಳಲ್ಲಿ ಲಭ್ಯವಿವೆ. ಗೀತನಾಟಕಗಳಲ್ಲಿ ನಾಟಕ ನಿರೀಕ್ಷಿಸುವ ಕೆಲವು ವಿಶಿಷ್ಟ ಸಾಮರ್ಥ್ಯಗಳ ಜೊತೆಗೆ ಕಾವ್ಯ, ಸಂಗೀತ ಪ್ರಜ್ಞೆಗಳೂ ಅನಿವಾರ್ಯವಾಗುತ್ತವೆ. ಪಾಶ್ಚಾತ್ಯ 'ಅಪೆರಾ'ದಿಂದ ಪ್ರಚೋದಿತವಾಗಿದೆ ಎನ್ನುವ ಸಾಧಾರಣ ನಂಬಿಕೆಯಿರುವುದಾದರೂ 'ಗೀತನಾಟಕ' ಹುಟ್ಟಿಗೆ ನಮ್ಮದೇ ಆದ ಒಂದು ಸುದೀರ್ಘ ಪರಂಪರೆಯ ಹಿನ್ನೆಲೆಯಿದೆ. ನಾಟಕಗಳಲ್ಲಿ ಗೀತ, ಸಂಗೀತ ಅನಿವಾರ್ಯ ಭಾಗವಾಗಿ ಹಿಂದಿನಿಂದಲೂ ಪ್ರಯೋಗವಾಗುತ್ತಿರುವುದು ನಮ್ಮ ಭಾರತೀಯ ರಂಗಭೂಮಿಯ ಇತಿಹಾಸದ ಅಧ್ಯಯನದಿಂದ ಸ್ಪಷ್ಟವಾಗಿದೆ. ಆದರೆ ಗೀತವೇ ನಾಟಕವಾಗಿ, ಸಂಭಾಷಣೆಗಳೆಲ್ಲವೂ ಗೀತರೂಪದಲ್ಲಿ ಕಾಣಿಸಿಕೊಳ್ಳುವ ಗೀತನಾಟಕಗಳು ಆಧುನಿಕ ಕನ್ನಡ ಸಾಹಿತ್ಯದಲ್ಲಿನ ವಿಶಿಷ್ಟತೆಯಾದರೆ ಅನೇಕ ಅವಸ್ಥಾಂತರಗಳ ಮೂಲಕ ವರ್ತಮಾನ ಸ್ವರೂಪದಲ್ಲಿ ಕಾಣಿಸಿಕೊಂಡಿರುವುದು ನಮ್ಮ ಕವಿ ಕಾದಂಬರಿ ಕಾರರಾದ ಪು.ತಿ.ನ ಮತ್ತು ಕಾರಂತರ ಪ್ರಯೋಗ ಶೀಲತೆಯಿಂದ ಎಂಬುದು ನಿಜವಾದರೂ, ಇವರಿಬ್ಬರೂ ಗೀತನಾಟಕಗಳನ್ನು ಬರೆಯುತ್ತಿದ್ದ ಅವಧಿಯಲ್ಲಿಯೇ ಇನ್ನೂ ಅನೇಕ ಕನ್ನಡ ಕವಿ, ಸಾಹಿತಿಗಳೂ ಈ ಪ್ರಕಾರದ ರಚನೆಯಲ್ಲಿ ತೊಡಗಿದ್ದರು. ಕುರ್ತಕೋಟಿ, ಮಾಸ್ತಿ, ಸಿದ್ಧಯ್ಯ ಪುರಾಣಿಕ್, ತಿರುಕ, ಮುಗಳಿ ಮೊದಲಾಗಿ ಹಲವಾರು ಮಂದಿ ಬರಹಗಾರರು ಗೀತನಾಟಕಗಳನ್ನು ಆಕಾಶವಾಣಿಗೆಂದೇ ಬರೆದಿದ್ದಾರೆಯಾದರೂ ಕೆಲವರ ಗೀತನಾಟಕಗಳು ಅಪರೂಪಕ್ಕೆ ರಂಗ

ಪ್ರಯೋಗವನ್ನು ಕಂಡಿವೆ. ಇಂತಹ ಗೀತನಾಟಕಕಾರರ ಸಾಲಿನಲ್ಲಿ ಗೌರೀಶ ಕಾಯ್ಕಿಣಿಯವರ ಗೀತನಾಟಕಗಳು ಅವುಗಳ ದಟ್ಟ ಕಾವ್ಯಾಂಶ ಹೊಸದೃಷ್ಟಿಗಳಿಂದಾಗಿ ಪ್ರಮುಖವೆನಿಸುತ್ತವೆ.

ಕಾಯ್ಕಿಣಿಯವರ ಗೀತನಾಟಕಗಳು ಸರಿಸುಮಾರು ಐವತ್ತು, ಅರವತ್ತರ ದಶಕಗಳಲ್ಲಿ ರಚನೆಯಾಗಿದ್ದು ಧಾರವಾಡದ ಆಕಾಶವಾಣಿಯಿಂದ ಪ್ರಸಾರಗೊಂಡು ಸಾಕಷ್ಟು ಜನಪ್ರಿಯವಾಗಿವೆ. ಅವರು ರಚಿಸಿರುವ ಏಳು ಗೀತನಾಟಕಗಳ ಸಂಕಲನವಾಗಿ 'ಕ್ರೌಂಚಧ್ವನಿ' ಹೆಸರಿನಲ್ಲಿ ಪ್ರಕಟವಾಗಿದೆ. 'ರಂಗಪಂಚಮಿ', 'ಕಾಮದಹನ', 'ಚೈತ್ರ ಚಿತ್ರ' ವರ್ಷಾಗಮ 'ರಾಮನವಮಿ' ಇತ್ಯಾದಿ ಗೀತನಾಟಕಗಳು ಆಕಾಶವಾಣಿಯ ಮೂಲಕ ಅನುಕ್ರಮವಾಗಿ ಬಿತ್ತರಗೊಂಡಿವೆ. ಎಲ್ಲ ಗೀತನಾಟಕಗಳೂ ಬಾನುಲಿ ಪ್ರಸಾರಕ್ಕೆಂದೇ ರಚಿತವಾಗಿದ್ದರೂ 'ಯಶೋಧರಾ' ಮಾತ್ರ ರಂಗಪ್ರಯೋಗಕ್ಕೆಂದೇ ಬರೆದದ್ದೆಂದು ತಮ್ಮ ಕ್ರೌಂಚಧ್ವನಿ ಸಂಕಲನದ 'ನಿರೂಪಣೆ' ಭಾಗದಲ್ಲಿ ಹೇಳಿ ಕೊಂಡಿದ್ದಾರೆ. ಅಲ್ಲದೆ ಪಿ.ಆರ್. ಭಾಗವತ್ ಅವರು, ತಮ್ಮ ಗೀತನಾಟಕಗಳನ್ನು ಪ್ರಸಾರಕ್ಕೆ ನಿರ್ದೇಶಿಸಿದ್ದೇ ಅಲ್ಲದೇ ರಂಗದಮೇಲೆ ಪ್ರಯೋಗಿಸುವ ಪ್ರಯತ್ನವನ್ನೂ ಮಾಡಿದ್ದಾರೆಂದು ಹೇಳಿದ್ದಾರೆ. ಕಾಯ್ಕಿಣಿಯವರು ಕ್ರೌಂಚಧ್ವನಿ ಸಂಕಲನದಲ್ಲಿ 'ನನ್ನ ನಿರೂಪಣಾ' ಭಾಗದಲ್ಲಿ ತಮ್ಮ ಗೀತನಾಟಕಗಳ ಹುಟ್ಟಿನ ಹಿನ್ನೆಲೆಯ ಸಂದರ್ಭ, ಸನ್ನಿವೇಶವನ್ನು ವಿವರಿಸಿರುವುದರ ಮೂಲಕ, ಯಾವುದು ಪ್ರಸಾರ ದೃಷ್ಟಿಯುಳ್ಳದ್ದು ಯಾವುದು ರಂಗಪ್ರಯೋಗ ದೃಷ್ಟಿ ಉಳ್ಳದ್ದು ಎಂಬುದನ್ನು ಗುರುತಿಸಲು ಸಾಧ್ಯವಾಗಿದೆ.

ಕಾಯ್ಕಿಣಿ ಅವರ ಗೀತನಾಟಕಗಳನ್ನು ವಸ್ತು, ನಿರೂಪಣೆಯ ಶೈಲಿ, ಸಂವಿಧಾನಗಳ ದೃಷ್ಟಿಯ ಹಿನ್ನೆಲೆಯಲ್ಲಿ ಸಮೀಕ್ಷಿಸುವುದು ಸೂಕ್ತವೆನಿಸುತ್ತದೆ. ಅವರ ಸಮಗ್ರ ಗೀತನಾಟಕಗಳನ್ನು ಅವಲೋಕಿಸಿದಾಗ ವಸ್ತು ವೈವಿಧ್ಯತೆ ಕಂಡು ಬರುತ್ತದೆ. ಗೀತನಾಟಕ ಪ್ರಕಾರಕ್ಕೆ ಹೆಚ್ಚು ಸೂಕ್ತವೆನಿಸುವ ಪೌರಾಣಿಕ, ಕಾಲ್ಪನಿಕ ವಸ್ತುವಿನ ಜೊತೆಗೆ ಐತಿಹಾಸಿಕ ವಸ್ತುವನ್ನೂ ಬಳಸಿಕೊಂಡಿದ್ದಾರೆ. ಆದರೆ ಅವುಗಳಲ್ಲಿನ ವಸ್ತು ಸಾಮಗ್ರಿಯನ್ನು ಬಳಸಿಕೊಂಡ ರೀತಿ. ಸಂವಹನದ ಕ್ರಮ, ಧ್ವನಿರಮ್ಯತೆಗಳು ಅವರ ಪ್ರತಿಭೆ ಮತ್ತು ಸಂಗೀತ ಪ್ರಜ್ಞೆಗೆ ಸಾಕ್ಷಿಯಾಗಿದೆ. 'ಕ್ರೌಂಚಧ್ವನಿ' ಸಂಕಲನದ ಪ್ರತಿಯೊಂದು ಗೀತ ರೂಪಕದಲ್ಲಿಯೂ ಭಾವ ತೀವ್ರ, ಹೃದಯಸ್ಪರ್ಶಿ ಸನ್ನಿವೇಶಗಳಿವೆ. ಕಾವ್ಯ, ಗೀತಗಳಿಗೆ ಹೊಂದಿ ಬರುವ ವಸ್ತು ವಿಷಯಗಳೇ ಗೀತನಾಟಕಗಳ ದ್ರವ್ಯವಾಗಿರುವುದರಿಂದ, ಗೀತ ಮಾಧ್ಯಮದ ಕಲಾತ್ಮಕ ವಿನ್ಯಾಸವನ್ನು ಕಾಣುತ್ತೇವೆ.

ಇವರ 'ಕ್ರೌಂಚಧ್ವನಿ' ಸಂಕಲನದ 'ಚೈತ್ರ-ಚಿತ್ರ' ರಂಗಪಂಚಮಿ' ಕಾಮದಹನ, ಕ್ರೌಂಚಧ್ವನಿ (ರಾಮನವಮಿ), ವರ್ಷಾಗಮನ, ಯಶೋಧರಾ ಇತ್ಯಾದಿಯಾದ ಎಲ್ಲ ನಾಟಕಗಳಲ್ಲಿಯೂ ಕತೆಯ ಎಳೆ ತೆಳುವಾಗಿದ್ದು ಭಾವ ಕಲ್ಪನೆಯ ಜಾಲದ ಹೆಣಿಗೆ ದಟ್ಟವಾಗಿದೆ. 'ಚೈತ್ರ ಚಿತ್ರ', ಅಯೋಧ್ಯೆಗೆ ರಾಮನ ಪುನರಾಗಮನದ ಹಿನ್ನೆಲೆಯಲ್ಲಿ ಕರಾವಳಿ ಪ್ರದೇಶದಲ್ಲಿನ ಚೈತ್ರ ವೈಭವವನ್ನು ಬಿತ್ತರಿಸುತ್ತದೆ. ಪುರಾಣ ಪ್ರತಿಮೆಗಳ ಮೂಲಕವಾಗಿ ಋತುಸೌಂದರ್ಯ ನಿರೂಪಣೆ ಅತ್ಯಂತ ಮಾರ್ಮಿಕವಾಗಿ ಮೂಡಿ ಬಂದಿದೆ. ಇಡೀ ನಿಸರ್ಗದಲ್ಲಿಯೇ ಹೊಸ ಚೈತನ್ಯ, ಜೀವಕಳೆ ಹೊಡೆದೆದ್ದಿದೆ. ಮರಗಿಡ

ಬಳ್ಳಿ, ಹೂವು, ನೆಲ, ಬಾನು ಜೀವರುಗಳು ಸಂಭ್ರಮದ ಸಂಗೀತಕ್ಕೆ ಮಾರ್ದನಿಗೊಂಡಂತೆ ಕಾಣುತ್ತಿದೆ. ಸಕಲ ಚರಾಚರ ಜಗತ್ತೂ ಚೈತ್ರ ದೇವರ ಬಗೆಗೆ, ಬರವಿಗೆ 'ನವೋತ್ಸಾಹದ ಸ್ವಾಗತ'ವನ್ನು ನುಡಿಯುತ್ತಿರುವಂತೆ ಕಾಣುತ್ತದೆ. ಕವಿಯ ಕಾವ್ಯಮಯ ಭಾಷೆ, ಶಬ್ದಗಳಿಗಿರುವ ಸಂಗೀತ ಗುಣ, ಪ್ರಾಸ, ಅನುಪ್ರಾಸಗಳ ಲಯಬದ್ಧ ನಡೆ, ರಮ್ಯ ಚಿತ್ರಗಳ ನಿರ್ಮಾಣದಲ್ಲಿ ಅತ್ಯಂತ ಯಶಸ್ವಿಯಾಗಿದೆ. ಉದಾಹರಣೆಗೆ,

**ವಿಧುಹಾಸ ಮಧುಮಾಸ ಮೃದುರಾಸವಾಡೆ**
**ರಸರಾಜ ರತಿರಾಜ ಋತುರಾಜ ಕೂಡೆ**
**ಚಿತ್ರ ರಥವಾ ಚೈತ್ರಯಾತ್ರೆಗೆ ಹೂಡೆ**
**ಕಳೆ ಬಂತು ಕಾಡಿಗೆ ಸವಿ ಬಂತು ಪಾಡಿಗೆ**
**ನಾಡಿನ ನಾಡಿಗೆ ನವಸ್ಪಂದನ**
**ಚೈತ್ರಾವತಾರಕೆ ಅಭಿನಂದನ"** **(-ಚೈತ್ರ ಚಿತ್ರ-ಪುಟ.೧)**

-ಎನ್ನುವ ಸಾಲುಗಳು ಚೈತ್ರ ಮಾಸದ ಮೃದು, ಮಧುರಮಾದ ರಮ್ಯ ಪರಿಸರನ್ನು ಸಮರ್ಥವಾಗಿ ಬಿಂಬಿಸುವುದರಲ್ಲಿ ಸಾರ್ಥಕವಾಗಿದೆ. ಗೀತಗೋವಿಂದಕ್ಕೆ ಅನ್ವಯಿಸುವ 'ಕೋಮಲ ಕಾಂತ ಪದಾವಲಿ'ಯ ಬಳಕೆಯಿಂದ ಮೃದು ಭಾವೋದ್ದೀಪನೆಯ ನಿರೀಕ್ಷೆ ಸಫಲವಾಗಿದೆ. ಇದೇ ಬಗೆಯ ಸಫಲತೆಯನ್ನು ನಿಸರ್ಗದ ಸುಂದರ ಸನ್ನಿವೇಶಗಳ ನಿರೂಪಣೆಗೆ ಬಳಸಿಕೊಳ್ಳುವ ಪುರಾಣ ಪ್ರತಿಮೆಗಳಲ್ಲಿಯೂ ಕಾಣ ಬಹುದಾಗಿದೆ. ಚಂದ್ರೋದಯದ ಒಂದು ಸನ್ನಿವೇಶವನ್ನು ಇಲ್ಲಿ ಗಮನಿಸಬಹುದು.

**"ಆಕಾಶ ಮಣಿಪುರ ಚಿತ್ರ ಚಿತ್ರಾಂಗದೆ**
**ರವಿತಾನೆ ಅರ್ಜುನ ಬಳಿ ಸಾರಿದ**
**ಚೈತ್ರದ ಚಂದ್ರಾಮ ಬಭ್ರುವಾಹನ ಸಮ**
**ಹೊರವಂಟ ಹಿರಿಬಂಟ ದಳವೇರಿದ**
**ಫಾಲ್ಗುಣನ ತಲೆಮೆಟ್ಟಿ ತಳವೂರಿದ!'** **-ಚೈತ್ರ ಚಿತ್ರ. ಪು.೧**

ಅರ್ಜುನ-ಬಭ್ರುವಾಹನ ರೂಪಕದಿಂದ ಸೂರ್ಯಾಸ್ತ-ಚಂದ್ರೋದಯಗಳೆರಡನ್ನೂ ಒಟ್ಟಿಗೆ ವಿವರಿಸುವ ಭಾಷೆಯ ಸಂಯಮಶಕ್ತಿ ಅದ್ಭುತವಾಗಿದೆ. ಚೈತ್ರವರ್ಣನೆಯೇ ಮುಖ್ಯವಾದರೂ ನಿವೇದಕ, ಸಹ್ಯಗಿರಿ, ಮರುದ್ಗಣ, ಹುಡುಗರು, ಹುಡುಗಿಯರು, ಅಂಬಿಗರು ಇತ್ಯಾದಿ ಪಾತ್ರಗಳು ಬಂದರೂ, ಚೈತ್ರದ ಸೊಬಗು, ನಿಸರ್ಗದ ಉತ್ಸಾಹ, ಸಂಭ್ರಮಗಳನ್ನು ಪ್ರತೀಕಿಸುವುದಕ್ಕೆ ಮಾತ್ರವೇ ಬರುತ್ತಾರೆ. ವಸ್ತು ನಿಷ್ಠವಾದ ಕತೆಯಿಲ್ಲದಿದ್ದರೂ, ರೂಪಕದ ಕ್ರಿಯೆಯ ಮುನ್ನಡೆಗೆ ನಿವೇದಕ ಸಹಕರಿಸುತ್ತಾನೆ. ಪ್ರಕೃತಿಯ ಪರಿಸರದಲ್ಲಿನ ವ್ಯತ್ಯಾಸಗಳನ್ನೂ, ಜನಸಂಭ್ರಮವನ್ನೂ ನಡೆದ, ನಡೆವ ಘಟನೆಗಳನ್ನು ವಿವರಿಸಿ ಕಥೆಯ ಏಕಸೂತ್ರತೆಯನ್ನು ಉಳಿಸುತ್ತಾನೆ. ಕೊನೆಗೆ ಬರುವ ರಾಮಾಗಮನ ನಾಟಕದ ಮೂಲವಸ್ತುವಿನೊಂದಿಗೆ ಆವುದೇ ಬಗೆಯ ಸಂಬಂಧವಿಲ್ಲದಿದ್ದರೂ ಚೈತ್ರಾಗಮನ, ರಾಮಾಗಮನಗಳೆರಡೂ ಸಮೀಕೃತಗೊಂಡಿದೆ. ಜಗತ್ತಿಗೆ ಚೈತ್ರಾಗಮನ ಸಂಭ್ರಮೋಲ್ಲಾಸಗಳಿಗೆ ಕಾರಣವಾದಂತೆ ರಾಮಾಗಮನವೂ ಪ್ರಜಾಸಮುದಾಯಕ್ಕೆ ಬಂಧುವರ್ಗಕ್ಕೆ ಸಂತೋಷ, ಸಂಭ್ರಮ,

ಜೀವನೋತ್ಸಾಹಗಳಿಗೆ ಕಾರಣವಾಗುತ್ತದೆಂಬುದನ್ನು, ಚೈತ್ರಾಗಮನ, ರಾಮಾಗಮನಗಳ ನಡುವಿನ ಅಭೇದಕಲ್ಪನೆಯಿಂದ ಸ್ಥಾಪಿಸಿದ್ದಾರೆ. ರಾಮನೇ ಚೈತ್ರ; ಚೈತ್ರವೇ ರಾಮ ಎನ್ನುವ ಕಲ್ಪನೆಯೇ ವಸ್ತುವಿನ ಮೂಲ ದ್ರವ್ಯವಾಗಿದೆ.

ರಕ್ಕಸರೊಡೆಯ ರಾವಣನ ಧ್ವಂಸವಾಗಿ ಸೀತಾಸಮೇತನಾಗಿ ಪುಷ್ಪಕದಲ್ಲಿ ಬರುವ ರಾಮನೂ ಚೈತ್ರೋತ್ಸವದಲ್ಲಿ ಪಾಲ್ಗೊಂಡು ಸಂಭ್ರದಿಂದ ಅಯೋಧ್ಯೆಯತ್ತ ಬರುವಲ್ಲಿ ಅವನಿಗಾಗಿ ಹಾದಿ ಕಾಯುವ ಆಪ್ತ ಸಂಕುಲದೆದೆಯೊಳಗೂ ಚೈತ್ರೋದಯವಾಗಿದೆ ಎನ್ನುವುದನ್ನು 'ಚೈತ್ರ-ಚಿತ್ರ'ದಲ್ಲಿ ಸಾಂಕೇತಿಕವಾಗಿ ವಿವರಿಸಿದ್ದಾರೆ.

ಎರಡನೇ ನಾಟಕವಾದ 'ರಂಗಪಂಚಮಿ' ಗೀತನಾಟಕಗಳಿಗೆ ತೀರಾ ಪರಿಚಿತವಾದ ರಾಧಾಕೃಷ್ಣರ, ಗೋಪಿಯರ ಅನನ್ಯ ಪ್ರೇಮವನ್ನು ವಿವರಿಸುತ್ತದೆ. ಜೊತೆಗೆ ಪ್ರಾಸಂಗಿಕವಾಗಿ ರಾಧಾ-ಕೃಷ್ಣರ ವಿರಹದ ಕ್ಷಣಗಳನ್ನೂ ತನ್ಮೂಲಕವಾಗಿ ರಾಧಾಕೃಷ್ಣರ ಪ್ರೇಮಾತಿಶಯದ ವಿವರಗಳನ್ನೂ ಒಳಗೊಳ್ಳುತ್ತದೆ. ಕೃಷ್ಣನ ಕೊಳಲನಾದದ ಮಾಂತ್ರಿಕತೆಗೆ ಒಳಗಾದ ಗೋಪಿಕೆಯರು ತಮ್ಮ ತಮ್ಮ ಕುಟುಂಬಗಳ ವ್ಯವಹಾರವನ್ನು ಅಥವಾ ಲೌಕಿಕ ನಂಟುತನವನ್ನೂ ಮರೆತು ಶೃಂಗಾರ ಕೇಳೀ ಭೃಂಗಗಳಾಗಿ, ತಿಂಗಳ ಬೆಳಕಿನ ಸೊಬಗಿಗೆ, ಕೃಷ್ಣದೇಹದ ಸೊಗಡಿಗೆ ಸೆಳೆಯಲ್ಪಟ್ಟು.

**ರಂಗನೆಲ್ಲಿ? ಸಂಗವೆಂತು?**
**ತಿಂಗಳಲ್ಲಿ ಮದವಿದೆ**
**ಅಂಗಾಂಗದಿ ಶೃಂಗಾರ ಭೂ**
**ಜಂಗ ಹೆಡೆಯನಾಡಿದೆ!"** **-ರಂಗಪಂಚಮಿ ಪು.10**

- ಎಂದು ತಮ್ಮ ಪರಿಸ್ಥಿತಿಯನ್ನು ತೋಡಿಕೊಳ್ಳುತ್ತಾ ಧಾವಿಸಿ ಬರುತ್ತಾರೆ.

ಆದರೆ ರಾಧಾ ವಿರಹಾಕುಲ ಚೇತನನಾದ ಕೃಷ್ಣನನ್ನು ಕಂಡು ನಿರುತ್ಸಾಹ ಗೊಳ್ಳುತ್ತಾರಾದರೂ ಕೃಷ್ಣ ಚಿಂತೆಯಲ್ಲಿ ಪಾಲ್ಗೊಂಡು ರಾಧೆಗಾಗಿ ಅವರೂ ಹುಡುಕುತ್ತಾರೆ. ಕೃಷ್ಣನದೇ ಚಿಂತೆಯಲ್ಲಿ ಇದೇ ಸ್ಥಿತಿಯಲ್ಲಿದ್ದ ರಾಧೆಯೂ ಕಾಣಿಸಿಕೊಂಡು, ರಾಧಾಕೃಷ್ಣರ ಮಿಲನದ ನಂತರ ರಾಸಕೇಳಿ, ಜಲಕ್ರೀಡೆಗಳಲ್ಲಿ ತೊಡಗುತ್ತಾರೆ. ಆದರೆ ಅದಕ್ಕೆ ಮುನ್ನ, ಕೃಷ್ಣ ಗೋಪಿಕೆಯರೆಲ್ಲರಿಗೂ ಒಂದು ಪರೀಕ್ಷೆಯೊಡ್ಡುತ್ತಾನೆ. ಅಶೋಕ ವೃಕ್ಷದಲ್ಲಿ ಹೂವನ್ನರಳಿಸುವುದರ ಮೂಲಕ 'ರಾಧೆ' ಚೆಲುವೆಯೆಂಬುದು ನಿರೂಪಿತವಾದರೆ ಗೋಪಿಕೆಯರೆಲ್ಲರೂ ತಮ್ಮ ಸೋಲನ್ನೊಪ್ಪಿಕೊಂಡು ರಾಧೆಯ ಮೈ ಸಿರಿಯನ್ನು ಕೊಂಡಾಡುತ್ತಾರೆ. ನಂತರವೇ ಕೃಷ್ಣ-ಗೋಪಿಕೆಯರ ಕೋಲಾಟ, ನೀರಾಟಗಳ ರೀತಿಯಲ್ಲಿ ರಾಸ ಲೀಲೆ ಮುಂದುವರೆಯುತ್ತದೆ. ಇದರೊಂದಿಗೆ ನಾಟಕ ಕೊನೆಯಾಗುತ್ತದೆ.

ಮೂರನೆಯದಾದ 'ಕಾಮದಹನ' ಶೀರ್ಷಿಕೆಯೇ ನಿರೂಪಿಸುವಂತೆ, ತಾರಕಾಸುರನ ಸಂಹಾರಕ್ಕಾಗಿ ಪಾರ್ವತೀ ಪರಮೇಶ್ವರರ ಸಮಾಗಮವನ್ನು ಸಾಧಿಸುವುದಕ್ಕಾಗಿ ರತಿ ಮನ್ಮಥರನ್ನು. ತಪೋನಿರತನಾದ ಶಿವನನನ್ನು ಚಂಚಲಗೊಳಿಸಲು ಕಳುಹಿಸಿ, ಕೊನೆಗೆ ಶಿವನ ರೌದ್ರಾಗ್ನಿಗೆ ಆಹುತಿಯಾದ ಕತೆಯೇ ಇದರ ವಸ್ತು. ರೂಢಿಯ ನಾಟಕಗಳ ಮಾದರಿಯಲ್ಲಿಯೇ, ನೇರವಾಗಿ ಪಾತ್ರಸಂಭಾಷಣೆಗಳೊಂದಿಗೆ

ನಾಟಕ ತೊಡಗುತ್ತದೆ. ನಿವೇದಕ, ಮೊದಲಿಗೆ ಸೂತ್ರಧಾರನ ರೀತಿಯಲ್ಲಿ ನಾಟಕದ ಸ್ಥೂಲ ಪರಿಚಯ ಮಾಡಿಸುತ್ತಾನೆಯೇ ಹೊರತಾಗಿ ಮತ್ತೆಲ್ಲಿಯೂ ಕಾಣಿಸಿಕೊಳ್ಳುವುದಿಲ್ಲ.

ಭಾಷೆಯ ಸರಳತೆ, ಚುಟುಕಾದ ಸಂಭಾಷಣೆಗಳು ಗೀತರೂಪದಲ್ಲಿದ್ದು ನಾಟಕ ಕ್ರಿಯೆಗೆ ಚಾಲನೆ ದೊರೆಯುತ್ತದೆ. ಇದರಿಂದಾಗಿ ದೀರ್ಘ ಗೀತೆಗಳಿಂದ ಉಂಟಾಗಬಹುದಾದ ಬೇಸರ ತಪ್ಪಿದೆ. ಅಲ್ಲಲ್ಲಿ ನೀಡಿರುವ ರಂಗನಿರ್ದೇಶನದಿಂದ ಮತ್ತು ನಾಟಕ ಶಿಲ್ಪದ ದೃಷ್ಟಿಯಿಂದಲೂ ರಂಗದ ಮೇಲೆ ಯಶಸ್ವೀ ಪ್ರಯೋಗವಾಗುವ ಸಾಧ್ಯತೆ ಕಾಣಿಸುತ್ತದೆ. ನಾಲ್ಕನೆಯದಾದ 'ಕ್ರೌಂಚಧ್ವನಿ' ಅಥವಾ 'ರಾಮನವಮಿ' ರಾಮಾವತಾರದ ಸನ್ನಿವೇಶವನ್ನು ನಿರೂಪಿಸುತ್ತದೆ. ಆದರೆ ಅದಕ್ಕೆ ಪೂರ್ವದಲ್ಲಿ ವಾಲ್ಮೀಕಿ ಮಹರ್ಷಿಗಳು, ವ್ಯಾಧಬಾಣದಿಂದ ಪ್ರಿಯತಮನನ್ನು ಕಳೆದುಕೊಂಡ ಹೆಣ್ಣು ಕ್ರೌಂಚದ ಆರ್ತಧ್ವನಿಗೆ ಮರುಗಿ, ಅದರ ಆ ಸ್ಥಿತಿಗೆ ಕಾರಣನಾದ ವ್ಯಾಧನನ್ನು ಶಪಿಸಿದ್ದು ಮತ್ತು ಅವರ ಆ ಶೋಕೋದ್ಗಾರವೇ ವಾಲ್ಮೀಕಿ ರಾಮಾಯಣ ಬರೆಯಲು ಪ್ರೇರಣೆಯಾದದ್ದು, ರಾಮಾಯಣ ಲೋಕ ಪ್ರಿಯವಾದದ್ದು ಎಲ್ಲವನ್ನೂ ನಿವೇದಕನಿಂದ ನಿರೂಪಿಸಿದ್ದಾರೆ. ಇದರ ನಂತರ ರಾಮಜನ್ಮದ ಕತೆ ಬರುತ್ತದೆ. ಇದಕ್ಕೆ ಹಿನ್ನೆಲೆಯಾಗಿ ಭೂದೇವಿಯ 'ಆರ್ತಸ್ವರ' ಕ್ರೌಂಚ ಚೀತ್ಕಾರದ ಜೊತೆ ಜೊತೆಗೇ ಕೇಳಿ ಬರುತ್ತದೆ. ರಾವಣನ ಅಟ್ಟಹಾಸ, ದಶರಥನ ಪುತ್ರ ಕಾಮೇಷ್ಠಿಯಾಗ, ಬ್ರಹ್ಮ ಮೊದಲಾಗಿ ಅನೇಕ ದೇವದೇವತೆಗಳ ಪ್ರಾರ್ಥನೆಗೆ ಒಲಿದು ವಿಷ್ಣುವು ಕೌಸಲ್ಯಾನಂದನನಾಗಿ ಜನಿಸುವುದು ಮೊದಲಾದ ಕಥಾವಿವರಗಳು ಬರುತ್ತವೆ. ಇಲ್ಲಿ ಲೇಖಕರು ಹೇಳಿಕೊಳ್ಳುವಂತೆ ರಾಮಾಯಣದ ಜೊತೆಗೆ ಕೆಲವು ಅಂಶಗಳನ್ನು ಅದ್ಭುತ ರಾಮಾಯಣದಿಂದ ತೆಗೆದುಕೊಳ್ಳಲಾಗಿದೆ. ವೃಂದ ಗೀತಗಳಿಗಾಗಿ ಲಕ್ಷ್ಮೀಶನನ್ನೂ ಆಶ್ರಯಿಸಿರುವ ಸಂಗತಿಯನ್ನೂ ಒಪ್ಪಿಕೊಳ್ಳುತ್ತಾರೆ.

ರಾಮೋದಯದ ಸಂಗತಿಯೇ ಪ್ರಮುಖವಾದ ಕಥಾನಕವಾದರೂ ವಾಲ್ಮೀಕಿ ಶೋಕ ಶ್ಲೋಕವಾದ ಸನ್ನಿವೇಶಗಳನ್ನು ಫ್ಲಾಶ್ ಬ್ಯಾಕ್ ತಂತ್ರದ ಮೂಲಕವೂ ಕಥಾ ಸೂತ್ರದ ಅವ್ಯಾಹತತೆ 'ನಿವೇದಕ' ಪಾತ್ರದ ಮೂಲಕವೂ ನಿರೂಪಿಸಿದ್ದಾರೆ. ಈ ನಾಟಕದಲ್ಲಿ ಗಮನಿಸಬೇಕಾದ ಅಂಶವೆಂದರೆ, ಇಡೀ ನಾಟಕದ ಸನ್ನಿವೇಶ, ಸಂದರ್ಭ ಮತ್ತು ಕಥೆಯ ಬೆಳವಣಿಗೆ 'ಕ್ರೌಂಚಕ್ರಂದನ'ದ ಹಿನ್ನೆಲೆಯಲ್ಲಿಯೇ ವಿವರಣೆಗೊಂಡಿವೆ. 'ಕ್ರೌಂಚ ಕ್ರಂದನ' ನಾಟಕದಲ್ಲಿ ಸಾಂಕೇತಿಕ ಮಹತ್ವವನ್ನು ಪಡೆದಿದೆ. ಭೂದೇವಿಯ ಭೀತಿ, ಅಪುತ್ರ ಸ್ಥಿತಿಗಾಗಿ ಕೌಸಲ್ಯೆಯ ಕೊರಗು ಕ್ರೌಂಚಧ್ವನಿಯ ಹಿನ್ನೆಲೆಯಲ್ಲಿಯೇ ಬರುವುದು ಕಥಾ ನಿರೂಪಣೆ ಮತ್ತು ತಂತ್ರದ ದೃಷ್ಟಿಯಿಂದಲೂ ಮಹತ್ವಪೂರ್ಣವಾಗಿದೆ. ನಾಟಕದ ಪರಿಣಾಮಕ್ಕೆ ವೃಂದ ಗೀತ ಅಥವಾ ಕೋರಸ್ ಅನ್ನು ಬಳಸಿಕೊಂಡಿರುವುದೂ ಮತ್ತೊಂದು ಮಹತ್ವದ ಅಂಶವಾಗಿದೆ. ಸುರವೃಂದ, ಪುರಜನ ವೃಂದ ರಾಜಸ್ತ್ರೀಯರು ಮೊದಲಾದ ಪಾತ್ರಗಳನ್ನು ಈ ಕೋರಸ್ ಅಥವಾ 'ಮೇಳ'ವೇ ನಿರ್ವಹಿಸುತ್ತದೆ. ಅಥವಾ ಪ್ರತಿನಿಧಿಸುತ್ತದೆ.

'ವರ್ಷಾಗಮನ' ವರ್ಷಾಗಮನಕ್ಕಾಗಿ ಹಾತೊರೆವ ಪ್ರಕೃತಿ ಚೇತನಗಳ ಸುಂದರ ಚಿತ್ರವನ್ನೂ ವರ್ಷಋತು ವೈಭವವನ್ನೂ ಅದರಿಂದ ನೆಲ-ಬಾನುಗಳಿಗಾದ ಹರ್ಷೋಲ್ಲಾಸದ ರೀತಿಯನ್ನೂ ವಿವರಿಸುತ್ತದೆ.

ಮಳೆಗಾಗಿ ಯುಗಯುಗದಲ್ಲಿಯೂ ಜನ ಹಾತೊರೆದು, ಇಳೆ ಹಾತೊರೆದು ಹಾರೈಸಿದ್ದುಂಟು. ಯಜ್ಞಯಾಗಗಳನ್ನು ಆಚರಿಸಿ ಪರ್ಜನ್ಯ ಸೂಕ್ತಗಳನ್ನು ಹಾಡಿ ಕೊಂಡಾಡಿದ್ದುಂಟು. ಹಿಂದಿನಿಂದಲೂ ಜೀವನಾಧಾರವಾದ ಮಳೆಯ ಬಗ್ಗೆ ಭಕ್ತಿ ಭಾವವನ್ನೇ ತೋರಿ ಬಂದದ್ದುಂಟು. ಅದರ ಬಗ್ಗೆ ಭಯದಿಂದ ನಡೆದುಕೊಂಡದ್ದೂ ಉಂಟು. ಗ್ರೀಷ್ಮದ ಬಿಸಿಲ ನೈಷ್ಠುರ್ಯಕ್ಕೆ ತತ್ತರಿಸಿಹೋದ ಭೂಮಿ, ಬಾನಿನತ್ತ ಮುಖಮಾಡಿ, ಮಳೆಗಾಗಿ ಯಾಚಿಸುತ್ತದೆ. ಆರ್ದ್ರ, ಪುನರ್ವಸು, ಮೃಗಶಿರ ರೋಹಿಣಿಯರು ಪ್ರಿಯತಮನಾದ ಸೂರ್ಯಾಗಮನಕ್ಕಾಗಿ ಹಲುಬಿ,

**ಪ್ರಿಯಕರ ದಿನಕರ ಬಾ ಸಖನೆ**
**ಕನಿಕರವಿಡು ಉದಯೋನ್ಮುಖನೇ**
**ಭೂಮಿ ಸಾಧ್ವಿಗೆ ಪ್ರಜನನ ಚಾಪಲ್ಯ**
**ನೇಗಿಲಿತದ ನೆಲ ಶಿಲೆಯು ಅಹಲ್ಯಾ!**
**ದ್ರವಿಸು ಸ್ರವಿಸು ಕೊಡು ಸುಖ ಸಾಫಲ್ಯ!"** **(ವರ್ಷಾಗಮನ, ಪುಟ-49)**

-ಎಂದು ಪ್ರಾರ್ಥಿಸುತ್ತವೆ. ಭೂಮಿ ಫಲವತಿಯಾಗಲು, ಸಸ್ಯ ಶ್ಯಾಮಲೆಯಾಗಲು ಪರ್ಜನ್ಯ ದೇವತೆಯ ಪ್ರೇಮಾರ್ದ್ರತೆಯಿಂದ, ಸ್ನಿಗ್ಧವಾಗಬೇಕು. ಅದಕ್ಕಾಗಿಯೇ ತಾರೆಯರ ಆತುರ, ಭೂದೇವಿಯ ಕಾತರ. ಇವರೆಲ್ಲರ ಪ್ರಾರ್ಥನೆ ಸಾರ್ಥಕವಾಯಿತೆಂದರೆ ದಿಗ್ದೆಸೆಗಳೆಲ್ಲವೂ ಕಾರ್ಮೋಡಗಳಿಂದ ತುಂಬಿ ಘುಡು ಘುಡಿಸುವ ಗುಡುಗಿನ ಆರ್ಭಟದೊಂದಿಗೆ "ಉದ್ದಾಮ ಹೆದ್ದಾನೆ ಮದ್ದಾನೆಗಳ ಹಿಂಡು ಧಾಳಿಕ್ಕಿ ತೊ ಗಗನಾದುರ್ಗಕೆ!' (ಪು.೫೧) ಎಂಬಂತೆ ಭೋರ್ಗರೆವ ಮಳೆಯಾಗುತ್ತದೆ.

ಎಲ್ಲೆಲ್ಲೂ ವರ್ಷ ವೈಭವದ ಹರ್ಷ ತಾಂಡವವಾಡಿದೆ. ಲೋಕವೆಲ್ಲ ಉನ್ಮತ್ತ ಸಂಗೀತದ ಅನುರಣನದೊಂದಿಗೆ ಅಲೌಕಿಕವಾಗಿದೆ.

**ಇಂದ್ರಚಾಪ ಜಲತರಂಗ**
**ಗಹಗಹಿಸಿತು ಘನ ಮೃದಂಗ**
**ಸುರಿಮಳೆ ಸರಿ ಸಾರಂಗ**
**ಮಿಂಚಿನ ಬೆರಳಾಡಿದಂಗ**
**ಜೀವನ ಸಂಗೀತರಂಗ** **(-ವರ್ಷಾಗಮನ. ಪು. ೨೦)**

ಎಂಬ ಸಾಲುಗಳೂ ಮತ್ತು

**ದೇವದುಂಧುಭಿ ಧುಮುಧುಮಿಸುತ್ತಿರೆ**
**ಮಿಂಚು ಕುಣಿವುದು ಅಪ್ಸರೆ**
**ಕಾಮಧೇನು ಕಮನೀಯ ತೋರಣ**
**ನಾಕದಗೆಸಗೆ ಮರೆದಿರೆ**
**ಭಲರೆ! ಭಾಪುರೆ! ಮಝುರೆ! ಹಾಕಿತು**
**ಹಳ್ಳ ಹೊಳೆಗಳ ಕೈ ಪರೆ!"** **(-ವರ್ಷಾಗಮನ ಪು. ೫೨)**

ಎಂಬ ಸಾಲುಗಳು, ಸಂಗೀತ ಚಿತ್ರ ಅಥವಾ ಪ್ರತಿಮೆಗಳ ಮೂಲಕ ಮಳೆಯ ಮಂಜುಳ ಲಯ ಲಾಸ್ಯಗಳನ್ನು ನೃತ್ಯದ ಗತ್ತುಗಳನ್ನೂ ಅದ್ಭುತ ರಮ್ಯವಾಗಿ ಅಭಿನಯಿಸಿ ತೋರುತ್ತವೆ. ಇಲ್ಲಿ ಕಾಖಿಣಿಯವರ ಕಾವ್ಯ ಪ್ರತಿಭೆ ಮುಗಿಲು ಮುಟ್ಟಿದೆ. ಶಬ್ದಗಳಿಗಿರುವ, ಸಹಜ ಸಂಗೀತಾತ್ಮಕತೆ,

ಮತ್ತು ಸಂಗೀತಕ್ಕೆ ಸಂಬಂಧಿಸಿದ ಶಬ್ದ ಚಿತ್ರಗಳು ಕಾವ್ಯ ನಿರೀಕ್ಷೆಯ ಪರಿಣಾಮಗಳನ್ನು ಸಾರ್ಥಕಗೊಳಿಸಿದೆ. ಕೊನೆಗೆ ಬರುವ ರೈತರ ಹಿಗ್ಗಿನ ಹಾಡು ಸರಳವಾದ ಮಾತುಗಳಲ್ಲಿಯೇ ಮಳೆಯ ಪರಿಣಾಮಗಳನ್ನು ವಿವರಿಸಿ ನಾಟಕದ ಮೊದಲಿಗೆ ಅಂದರೆ ಮಳೆಯ ಪೂರ್ವಸ್ಥಿತಿಗೆ ವಿರುದ್ಧವಾದ ಚಿತ್ರವನ್ನು ನೀಡುವುದರೊಂದಿಗೆ ಪ್ರಕೃತಿಯಲ್ಲಿ ಸ್ಥಿತ್ಯಂತರವನ್ನು ಸೊಗಸಾದ ರೀತಿಯಲ್ಲಿ ನಿರೂಪಿಸುತ್ತದೆ.

**ನಕ್ಕಿತು ಇಳೆ ಉಕ್ಕಿತು ಹೊಳೆ ಸೊಕ್ಕಿತು ಬೆಳೆ ಚಂದ**
**ತುಂಬಲಿ ತೆನೆ, ತುಂಬಲಿ ಮನೆ, ತುಂಬಲಿ ಚಕ್ಕಂದ**
**ನೆಲಬಾನನೆ ನೆಯ್ದಿರೆ ಮಳೆ ಅಂತಃ ಪಟ ಹಿಡಿಯೆ**
**ಮಿಂಚಿನ ಗೊಂಚಲು ಮಿಂಚುಳೆ ಮಂತ್ರಾಕ್ಷತೆ ಸಿಡಿಯೆ**
**ಜಲಗರ್ಭದಿ ತೇಲಾಡಿತು ನವಸೃಷ್ಟಿಯ ಕಂದ**
**ಮಣ್ಣೊಳು ಸಾವಿರ ಕಣ್ಣೆವೆ ತೆರೆದಿವೆ ಏನಂದ!**
**ಆನಂದಾ ಬಿಸವಂದಾ!"**

ಎನ್ನುವ ರೈತರ ಹರ್ಷೋದ್ಗಾರ ಲೋಕದ ಉದ್ಗಾರವಾಗಿದೆ. ಸೃಷ್ಟಿಯಲ್ಲಿ ಎಂತಹ ನವೋಲ್ಲಾಸ, ನವ ಚೈತನ್ಯ, ನವ ಸೃಷ್ಟಿಯು ಕಾಣಿಸಿಕೊಳ್ಳುತ್ತದೆ ಎನ್ನುವುದನ್ನು ಅದ್ಭುತವಾದ ರೀತಿಯಲ್ಲಿ ಪ್ರಾಸಾನುಪ್ರಾಸ, ರೂಪಕ ಪ್ರತಿಮೆಗಳ ಮೂಲಕವಾಗಿ ವಿವರಿಸಿದ್ದಾರೆ. ಹುಚ್ಚುಮಳೆ, ಸಂಭ್ರಮದ ಮಳೆಯಿಂದ ಭೂಮಿಗೆ ಸಂತೋಷವಾಗಿದೆ. ಒಳ್ಳೆಯ ಫಸಲು ಬಂದಲ್ಲಿ ಮನೆ ಮನೆಯೆಲ್ಲಾ ಕಣಜಗಳು ತುಂಬುತ್ತವೆ. ಸಸ್ಯಗಳು ಮೊಳಕೆಯೊಡೆದು ಚಿಗುರುತ್ತವೆ, ಎನ್ನುವುದು ಕವಿಯ ಕಲ್ಪನೆ ರೈತರ ಹಾರೈಕೆಯಾಗಿ ಬಂದಿದೆ. ಹನಿಗಳಲ್ಲಿ ಮಂತ್ರಾಕ್ಷತೆ; ಮಳೆಯ ಧಾರೆ ನೆಲಬಾನಿನ ನಡುವೆ ನೆಯ್ದು ಹಿಡಿದ ಅಂತಃಪಟ. ಮೊಳಕೆ ಯೊಡೆವ ಬೀಜಗಳು ತೆರೆದೆ ಕಣ್ಣೆವೆಗಳು.......ಹೀಗೆ ಅವರ ರೂಪಕ ಕಲ್ಪನೆ ಅಗಾಧವಾಗಿ ಮುಂದೆ ಸಾಗುತ್ತದೆ. ಕಾವ್ಯ ಪ್ರತಿಭೆಯ ಸ್ವಚ್ಛಂದ ವೈಹಾಳಿಗೆ ಈ 'ವರ್ಷಾಗಮನ' ಗೀತನಾಟಕವೊಂದು ನಿದರ್ಶನವಾಗಿದೆ.

ಕಥಾ ಪ್ರಧಾನವಾದ ಗೀತನಾಟಕಗಳಿಗಿಂತ, ಭಾವನಿಷ್ಠವಾದ ಈ ಬಗೆಯ ಕಾವ್ಯವಸ್ತುವನ್ನು ವಿವರಿಸುವಲ್ಲಿ ಕವಿ ಮನಸ್ಸಿಗೆ ಹೆಚ್ಚಿನ ಸಂಭ್ರಮದ ಜೊತೆಗೆ ಪ್ರತಿಭೆ, ಕಲ್ಪನಾಸಾಮರ್ಥ್ಯಗಳನ್ನು ಸ್ವಚ್ಛಂದ ರೀತಿಯಲ್ಲಿ ದುಡಿಸಿಕೊಳ್ಳಲು ಸಾಕಷ್ಟು ಸ್ವಾತಂತ್ರ್ಯ ಮತ್ತು ಮುಕ್ತ ಅವಕಾಶಗಳಿರುತ್ತವೆ. ಅದ್ಭುತ ರಮ್ಯ ಕಲ್ಪನೆಯ, ಭವ್ಯ ಶಬ್ದ ಚಿತ್ರಗಳ ನಿರ್ಮಾಣಕ್ಕೆ ಎಡೆಯಿರುತ್ತದೆ. ಈ ನಾಟಕದಲ್ಲಿ ಕವಿಯ ಕಾವ್ಯ, ಸಂಗೀತ ಪ್ರಜ್ಞೆಗಳ ಸುಂದರ ಸಮನ್ವಯ ಸಾಮರಸ್ಯಗಳನ್ನು ಕಾಣುತ್ತೇವೆ.

ವರ್ಷ ವೈಭವದ ಇದೇ ವಸ್ತುವನ್ನು ಪು.ತಿ.ನ ಅವರೂ ಕೂಡಾ ತಮ್ಮ 'ವರ್ಷ-ಹರ್ಷ' ಗೀತನಾಟಕದಲ್ಲಿ ಬಳಸಿಕೊಂಡಿದ್ದಾರೆ. ಆದರೆ ಅಲ್ಲಿ ಮಳೆಯ ಸಂಭ್ರಮ ನಿರೂಪಿತವಾಗಿರುವ ರೀತಿಯೇ ಭಿನ್ನವಾಗಿದೆ. ಪು.ತಿ.ನರ 'ವರ್ಷ ಹರ್ಷ'ದಲ್ಲಿ ಯುವಕ-ಯುವತಿಯರ ಕನಸಿನ ಲೋಕದ ಮೂಲಕ ವರ್ಷ ವೈಭವ ಮತ್ತು ಆ ಋತುವಿನಲ್ಲಿ ಬರುವ ಪರ್ವಗಳು, ಎಳೆಯರ-ಕಳೆಯರ ಸಂಭ್ರಮಗಳು ಇತ್ಯಾದಿಗಳನ್ನು ವಿವರಿಸುತ್ತಾರೆ. ಮೋಡಗಳು ಮಾನವಾರೋಪಣಗೊಂಡು ಮಾತನಾಡುವ ಪಾತ್ರಗಳೊಂದಿಗೆ ಮುಖಾಮುಖಿಯಾಗುತ್ತವೆ. ತರುಣ-ತರುಣಿಯರು ಜಲಕನ್ಯೆಯರು,

ಕಿನ್ನರಿಯರು ಮೊದಲಾದ ಪಾತ್ರಗಳ ಪ್ರವೇಶದಿಂದ ನಾಟಕದಲ್ಲಿ ಒಂದು ಅಲೌಕಿಕ ಪರಿಸರ ಉಂಟಾಗಿದೆ. ಪು.ತಿ.ನರ ಪಳಗಿದ ಕಾವ್ಯ ಪ್ರತಿಭೆ ಗರಿಗೆದರಿ ಮಿಂಚಿದೆ. ಜೊತೆಗೆ ಕಾಯ್ಕಿಣಿ ಅವರ ನಾಟಕಕ್ಕಿಂತ ಸ್ವಲ್ಪ ಮಟ್ಟಿನ ನಾಟ್ಯಾಂಶ ಇಲ್ಲಿ ಕಾಣಿಸಿಕೊಂಡಿದೆ.

ಕಾಯ್ಕಿಣಿಯವರ ಮತ್ತೊಂದು ಗೀತನಾಟಕ 'ಯಶೋಧರಾ' ಎಲ್ಲರಿಗೂ ಚಿರಪರಿಚಿತವಾದ ಬುದ್ಧ ಯಶೋಧರೆಯರ ಸುತ್ತ ಹೆಣೆದ ಕತೆ. ವಸ್ತು ಐತಿ ಹಾಸಿಕವೇ ಆದರೂ ಪ್ರತಿಯೊಬ್ಬ ಕವಿ, ನಾಟಕಕಾರ ತನ್ನ ವೈಯಕ್ತಿಕ ದರ್ಶನಕ್ಕೆ ಅನುಗುಣವಾಗಿ ಕಥಾಂಶಗಳನ್ನು ರೂಪಿಸಿಕೊಂಡಿದ್ದಾರೆ. ಇದೇ ವಸ್ತು ನಮ್ಮ ಕಾರಂತ ಮತ್ತು ಮಾಸ್ತಿಯವರೂ ಬಳಸಿಕೊಂಡಿದ್ದಾರೆ. ಇವರಿಬ್ಬರೇ ಅಲ್ಲದೆ ಪ್ರಭುಶಂಕರ, ಜಿ.ಎಸ್. ಸಿದ್ಧಲಿಂಗಯ್ಯ ಮುಂತಾದವರೂ ಕೂಡ ಬುದ್ಧನ ಬದುಕಿನ ವಿವಿಧ ಸನ್ನಿವೇಶ, ಸಂದರ್ಭಗಳನ್ನು ವಸ್ತುವಾಗಿಸಿಕೊಂಡು ಅವರವರದೇ ಆದ ವಿಶಿಷ್ಟ ದೃಷ್ಟಿಕೋನದಿಂದ ಕಥಾವಸ್ತುವನ್ನು ನಿರ್ವಹಿಸಿದ್ದಾರೆ.

ಗೌರೀಶ ಕಾಯ್ಕಿಣಿಯವರು 'ಯಶೋಧರಾ' ಗೀತ ನಾಟಕದಲ್ಲಿ ಬುದ್ಧ ಮತ್ತು ಯಶೋಧರೆಯ ಬದುಕಿನಲ್ಲಿ ಒಂದು ಸಂಕೀರ್ಣ ಸನ್ನಿವೇಶವನ್ನು ಪ್ರಸ್ತುತಪಡಿಸಿದ್ದಾರೆ. ಬುದ್ಧನಾದ ಗೌತಮ, ಮಡದಿ ಯಶೋಧರೆಯ ಆತ್ಮಪರೀಕ್ಷೆಯನ್ನು ಮಾಡುವ ಮತ್ತು ಯಶೋಧರೆಯ ಸುಪ್ತ ಕಾಮನೆ ಮತ್ತು ಕಠೋರವಾಸ್ತವಗಳ ನಡುವಿನ ಸಂಘರ್ಷವನ್ನು ನಿರೂಪಿಸುವ ಆಶಯವೇ ಈ ನಾಟಕದ ಪ್ರಧಾನ ಅಂಶವಾಗಿದೆ. ಬುದ್ಧನಾಗಿ ಬರುವ ಗಂಡನನ್ನು, ಸಿದ್ಧನಂತೆ ಮತ್ತು ಭಿಕ್ಷುವಿನಂತೆ ಮಾತ್ರವೇ ಸ್ವೀಕರಿಸಬೇಕಾದ ಸನ್ನಿವೇಶದಲ್ಲಿ ಮನಸ್ಸಿನ ದುರ್ಬಲತೆ ಹತ್ತಿಕ್ಕಿದ ಅಂತರಂಗದ ಆಕಾಂಕ್ಷೆಗಳನ್ನು ಕೆರಳಿಸುತ್ತದೆ. ಆದ್ದರಿಂದಲೇ ಭಕ್ತಿ, ಗೌರವ ವಿನಯಗಳಿಂದ ಎದುರುಗೊಳ್ಳುವುದಕ್ಕೆ ಬದಲಾಗಿ ವಿಶೇಷ ಶೃಂಗಾರದೊಡನೆ ಪ್ರೇಯಸಿ ಪ್ರಿಯನಿಗಾಗಿ ಹಾತೊರೆಯುವಂತೆ ಕಾಯುತ್ತಾಳೆ ಯಶೋಧರೆ! ಜೊತೆಗೆ ಸಖಿ ಶ್ಯಾಮಲಿಯ,

"ಪುರದ ಮಾತು ಏನು ಮಹಾ?
ಅರಮನೆಯೇ ಅರಳಿದೆ ಸ್ವಯಂವರದ ಗೃಹಾಗಮನ
ದಂದಿನಿಂದ ಮರಳಿದೆ" -(ಯಶೋಧರಾ ಪು.೫೭)

ಎಂಬ ಮಾತು ಯಶೋಧರೆಯ ಅಂತರಂಗದ ಮಾರ್ನುಡಿಯಾಗಿ ಧ್ವನಿಸುತ್ತದೆ. ಪುರಜನರಿಗೆ ಬುದ್ಧಗುರುವಿನ ಆಗಮನದಿಂದ ಸಂಭ್ರಮೋಲ್ಲಾಸಕ್ಕೆ ಕಾರಣವಾದರೆ ಯಶೋಧರೆಯ ಮನಸ್ಸು- '' ಹೃದಯ ವಲ್ಲಭಗೆ ಗುರುವೆನ್ನುವ ಬಗೆ ಸರಿಯೆ?ಪರಿಯೆ? ಅರಿಯೆ, ಹಾ ನಾನರಿಯೆ!'' ಎಂದು ಸಂದಿಗ್ಧಗಳ ಸುಳಿಯಲ್ಲಿ ಸಿಕ್ಕಿ ನರಳುವಂತಾಗುತ್ತದೆ. ಬುದ್ಧನನ್ನು ಅಂತಃಪುರಕ್ಕೆ ಕರೆದು ತರುವಲ್ಲಿ, ಅವಳ ಸ್ವಾಭಿಮಾನ ಕೆರಳುತ್ತದೆ.

"ಎನ್ನ ನಿಲ್ಲಿಯೆ ಉಳಿದು ಹೋದರು
ಎನ್ನ ನಿಲ್ಲಿಯೆ ನೋಡಲಿ
ಬೆನ್ನ ತೋರಿಸಿದವರೆ ಮೋರೆಯ
ಕಾಣಿಸಲಿ ಕಾಪಾಡಲಿ!" -(ಯಶೋಧರಾ. ಪು.೫೯)

- ಎಂದು ನುಡಿದ ಛಲದಂತೆಯೇ, ಲೆಕ್ಕಾಚಾರದಂತೆಯೇ, ನಿರೀಕ್ಷೆಯಂತೆಯೇ ಬುದ್ಧನು ಅಂತಃಪುರಕ್ಕೆ ಬರುತ್ತಾನೆ. ಯಶೋಧರೆಯ ಮನಮಂಥನ, ಅಂತರ್ಯುದ್ಧ, ಹೆಡೆ ಬಿಚ್ಚುತ್ತಿರುವ ಕಾಮನೆಯ ಗಂಧಹತ್ತಿ, ಅದು ತನ್ನನ್ನು ತಬ್ಬುವ ಮುನ್ನವೇ ಸಾಂತ್ವನ ಗೊಳಿಸಬೇಕೆಂದು ಅವಳನ್ನು 'ಶಾಕ್ಯಮಾತೆ' ಎಂದು ಸಂಬೋಧಿಸಿ ತಮ್ಮಿಬ್ಬರ ನಡುವಿನ ಪೂರ್ವ ಸಂಬಂಧಗಳಿಗೆ ಹೊಸ ತಿರುವನ್ನು ನೀಡುವುದಲ್ಲದೆ ಅವಳಿಗೆ ತಾನು ಬಂದ ಕಾರಣವನ್ನು ಸ್ಪಷ್ಟವಾಗಿ ತಿಳಿಸಿ ಹೇಳುತ್ತಾನೆ. ಬುದ್ಧನ ಮಾತಿನ ಅರ್ಥದ ಜಾಡು ಹಿಡಿದು ಯಶೋಧರೆಯೂ ಜಾಣ್ಮೆಯಿಂದ "ಆರ್ಯಪುತ್ರನ ಪರಿಚರ್ಯೆ' ತನಗೆ ಗರ್ವದ ವಿಷಯವೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ. ಯಶೋಧರೆಯ ಮನಸ್ಸು, ಇನ್ನೂ ಲೌಕಿಕದ ನೆಲೆಯಲ್ಲಿದೆ; ಮಣ್ಣಿನ ಗುಣ, ಕಾಯಗುಣಗಳಿಂದ ಸ್ನಿಗ್ಧವಾಗಿದೆ. ಮನುಷ್ಯ ಸಹಜವಾದ ರಾಗಭಾವಗಳಿಂದ ಮುಕ್ತವಾಗಿಲ್ಲ ಎಂಬುದನ್ನರಿತ ಬುದ್ಧ, ದರ್ಪ, ಅಭಿಮಾನಗಳ ಕೆಡುಕಿನ ಸ್ವರೂಪವನ್ನು ವಿವರಿಸುತ್ತಾನೆ. ಮರ್ಮಾಹತಳಾದ ಯಶೋಧರೆ, ಬುದ್ಧನನ್ನು ಪೂರ್ವಾಶ್ರಮ ಸಂಬಂಧದೊಂದಿಗೆ ಭಾವಿಸಿ ಕ್ಷಮೆಯಾಚಿಸುತ್ತಾಳೆ. ಬುದ್ಧನಿಗೆ ತನ್ನನ್ನು 'ಭರ್ತ' ಎಂದು ಸಂಬೋಧಿಸಿದ್ದು ತೀರಾ ಆಕಸ್ಮಿಕವೆನಿಸಿದರೂ ಯಶೋಧರೆಯ ಮನದಾಳದಲ್ಲಿ ಬೇರು ಬಿಟ್ಟ ಈ ಸಂಬಂಧವನ್ನು ಕಿತ್ತೊಗೆಯಲು ಬಯಸಿ, ತಾನು ಇಂತಹ ಸಂಬಂಧಗಳಿಂದ..........ಹೇಗೆ, ಮುಕ್ತನೆಂಬುದನ್ನು ವಿವರಿಸಿ ತಿಳಿಸುತ್ತಾನೆ.

ಆದರೆ ನೋವಿನ ನೋಂಪಿಯಲ್ಲಿರುವ ಯಶೋಧರೆಗೆ ಬುದ್ಧನ ಮಾತುಗಳು ಅರ್ಥಹೀನವೆನಿಸುತ್ತದೆ. ಅವನ ತರ್ಕದ ಹಿಂದೆ ಪಲಾಯನ ಮನೋಧರ್ಮವಿದೆಯೆಂದು ಭಾವಿಸುತ್ತಾಳೆ. ಅವಳ ಮನದ ಆಕಾಂಕ್ಷೆಯ ಹಸಿರು ಬಾಡಿಲ್ಲ; ಬಯಕೆಗಳು ಬತ್ತಿಲ್ಲ. ಬುದ್ಧನಿಂದ ಲೋಕಕ್ಕೆ ಏನೆಲ್ಲ ದೊರೆತಿದ್ದರೂ ತನಗೆ ಆತನಿಂದ ಬಂದುದಾದರೂ ಏನು? ಎನ್ನುವ ಪ್ರಶ್ನೆಗೆ ಬುದ್ಧನಿಂದ ಉತ್ತರ ಬೇಕಿದೆ.

"ನಾನು ಪಡೆದುದೇನು? ಪ್ರಭೋ
ನಾನು ಪಡೆದುದೇನು?
ನಿನಗಾಯಿತು ಜ್ಞಾನೋದಯ
ಲೋಕಕೊಂದು ಭಾಗ್ಯೋದಯ?" -(ಯಶೋಧರಾ ಪುಟ.೬೩)

ಎನ್ನುವ ಪ್ರಶ್ನೆಗಳು ಬುದ್ಧನ ಆತ್ಮಸಾಕ್ಷಿಗೊಡ್ಡಿದ ಸವಾಲುಗಳಾಗಿ ನಿಲ್ಲುತ್ತವೆ. ಅವಳ ಪಾಲಿಗಿರುವುದು ಕೇವಲ ಕಣ್ಣೀರು. ಬುದ್ಧ ಯಶೋಧರೆಯ ಆಂತರ್ಯದ ಅಳಲಿಗೆ ಕುರುಡನೂ ಅಲ್ಲ, ಕಿವುಡನೂ ಅಲ್ಲ. ಆದರೆ ಅದಕ್ಕೆ ಪರಿಹಾರ ಅವಳ ನಿರೀಕ್ಷೆಯ ರೀತಿಯಲ್ಲಿ ಸಿಗಲಾರದು. ಎದುರು ನಿಂತ ಪರಿಸ್ಥಿತಿಯೊಂದಿಗೆ ರಾಜಿಮಾಡಿಕೊಂಡು ಬದುಕುವುದೊಂದೇ ದಾರಿ. ಆದ್ದರಿಂದಲೇ ಅವನು,

"ನೀನು-ನಾನು-ರಾಹುಲ
ಎಂಬುದರ ಕುತೂಹಲ

ಕಳೆದು ಆಚೆ ಕಣ್ಣ ತೆರೆ
ರವಿಯು ಕವಿದ ತಮದ ತೆರೆ
ಹರಿದೊಗೆ-ಒಳಗಣ್ಣ ಪರೆ!"

ಎಂದು ತತ್ವಬೋಧೆ ಮಾಡಿ ಸಾಂತ್ವನ ಗೊಳಿಸಲು ಯತ್ನಿಸುತ್ತಾನೆ. ಲೌಕಿಕ ಸಂಬಂಧಗಳ ಬಗೆಗಿನ ಮೋಹ ಬಿಡಬೇಕು. ಅಜ್ಞಾನದ ಕತ್ತಲನ್ನು ಕಿತ್ತೊಗೆದು ಒಳಗಣ್ಣು ತೆರೆದಾಗ ವಾಸ್ತವದ, ಸತ್ಯದ ಸೂರ್ಯನ ಬೆಳಕು ಒಳಗಿಳಿಯುತ್ತದೆ ಎಂಬುದು ಬುದ್ಧನ ನಿಲುವು. ಬುದ್ಧೋದಯದಿಂದ ಲೋಕಕ್ಕೆ ಮಾತ್ರವೇ ಭಾಗ್ಯೋದಯವೆಂದು ಭಾವಿಸುವ ಯಶೋಧರೆಗೆ, ತಾನೂ ಲೋಕದ ಒಂದಂಶ, ಒಂದು ಭಾಗ ಎಂಬುದನ್ನು ಮರೆತಿದ್ದಾಳೆಂದು ತಿಳಿಯ ಹೇಳಿ, ಸಮತೆಯಲ್ಲಿ ಮಮತೆಗೆ ಅವಕಾಶವೇ ಇಲ್ಲವೆಂದು ಸ್ಪಷ್ಟವಾಗಿ ತನ್ನಿಂಗಿತವನ್ನು ತಿಳಿಯ ಪಡಿಸಿ ಭಿಕ್ಷೆಗಾಗಿ ಬೇಡುತ್ತಾನೆ. ಯಶೋಧರೆ ಇದೇ ಅವಕಾಶವನ್ನು ಬಳಸಿಕೊಂಡು ತನ್ನನ್ನೇ ಅವನಿಗೆ ಒಪ್ಪಿಸಲು ಕಾಮಾತುರಳಾಗಿ ಮುಂದಾಗುತ್ತಾಳೆ. ತನ್ನ ಚೆಲುವನ್ನು ಬೀಗಿ, ವಿಕಾರವಾಗಿ, ಅವನ ಬಳಿ ಸಾರಿ "ಮದನನ ನಯನೋತ್ಸವ ಸಾಂದರ್ಯದ ಸೌಷ್ಮವ!"- ಎಂದು ಬಣ್ಣಿಸುತ್ತಾಳೆ. ಬುದ್ಧ ನೆತ್ತಿಗೇರಿದ ಅವಳ ಚೆಲುವಿನ ಗರ್ವ, ಚೆಲುವು ಸೌಂದರ್ಯಗಳ ನಶ್ವರತೆಯನ್ನು ಪ್ರತ್ಯಕ್ಷ ದರ್ಶನದಿಂದ ಸಾರಿ, ಮನವರಿಕೆ ಮಾಡಿಸಿ ಬುದ್ಧ, ಸಮುದಾಯದಲ್ಲಿ ಒಂದಾಗುವಂತೆ ಪ್ರಚೋದಿಸುತ್ತಾನೆ. ಬುದ್ಧನ ತಾಳ್ಮೆ, ಸಹನೆ, ಸೌಹಾರ್ದತೆ, ಶಾಂತತೆ, ದೃಢ ಚಿತ್ತ, ನಿಂತ ನಿಲುವುಗಳು ಕಡೆಗೆ ಯಶೋಧರೆಯನ್ನು ಸೋಲಿನತ್ತ ಅಸಹಾಯಕತೆಯತ್ತ ದೂಡುತ್ತದೆ. ರಾಹುಲನೂ ಧರ್ಮ ಶರಣಾಗಿ, ಸಂಘ ಶರಣಾಗಿ, ತಂದೆಯೊಂದಿಗೇ ಜೊತೆಗೂಡಿದಾಗ ಅವರ ಹಾದಿಯಲ್ಲಿ ಹೆಜ್ಜೆಹಾಕುವುದರ ಹೊರತು ಬೇರೆ ದಾರಿ ಉಳಿಯುವುದಿಲ್ಲ.

ಗೌರೀಶ ಕಾಯ್ಕಿಣಿಯವರ ಎಲ್ಲ ಗೀತನಾಟಕಗಳಲ್ಲಿನ ವಸ್ತು ಸಾಮಾನ್ಯವಾಗಿ ಎಲ್ಲರಿಗೂ ಚಿರಪರಿಚಿತವಾದುದು ಮತ್ತು ಪು.ತಿ.ನ ಕಾರಂತ, ಸಿದ್ಧಲಿಂಗಯ್ಯ, ಪ್ರಭುಶಂಕರ ಮೊದಲಾದವರೂ ಬಳಸಿಕೊಂಡಂತಹುದೆ. ಆದರೆ ಈ ಮೊದಲೇ ಹೇಳಿದಂತೆ ಪ್ರತಿಯೊಬ್ಬ ಕವಿ, ಸಾಹಿತಿ, ನಾಟಕಕಾರ ಸಮಾನ ವಸ್ತು, ಸನ್ನಿವೇಶ, ಸಂದರ್ಭಗಳನ್ನು ಬಳಸಿಕೊಂಡರೂ ನಿರ್ವಹಣೆ, ನಿರೂಪಣೆ, ದೃಷ್ಟಿ, ಧೋರಣೆಗಳಿಂದ ಭಿನ್ನವಾಗಿರುತ್ತಾರೆ. ಅಲ್ಲದೆ ಗೀತನಾಟಕಗಳು ರಮ್ಯ ಅಥವಾ ನವೋದಯ ಕಾವ್ಯ ಸಂಪ್ರದಾಯಕ್ಕೆ ಒಗ್ಗಿಕೊಂಡ ಪ್ರಕಾರವಾಗಿದೆ. ರಂಜಕತೆ, ಭಾವನಿಷ್ಠತೆ, ಕಾಲ್ಪನಿಕತೆ, ಸೌಂದರ್ಯ ನಿಷ್ಠತೆ, ಹೃದಯ ಸ್ಪರ್ಶಿ ವ್ಯಂಜಕತೆಗಳ ಭಿತ್ತಿಯಲ್ಲಿ ಮೂಡುವಂತಹುದು ಗೀತನಾಟಕವೇ ಆದರೂ ನಾಟ್ಯಾಂಶಗಳನ್ನು ರಂಗದ ಮೇಲಿನ ಪ್ರಯೋಗ ದೃಷ್ಟಿಯಿಂದ ಒಳಗೊಂಡುದಲ್ಲಿ ಹೆಚ್ಚು ಕಡಿಮೆ, ಕಾರಂತರನ್ನು ಹೊರತುಪಡಿಸಿ ಎಲ್ಲ ಗೀತನಾಟಕಕಾರರೂ ದೃಶ್ಯ ಮಾಧ್ಯಮಕ್ಕಿಂತ ಶ್ರವಣಮಾಧ್ಯಮವನ್ನು ದೃಷ್ಟಿಯಲ್ಲಿರಿಸಿಕೊಂಡೇ ಬರೆದದ್ದು. ವಿಶೇಷವಾಗಿ ಬಾನುಲಿ ಪ್ರಸಾರಕ್ಕೆಂದೇ ರಚಿಸಿ, ಪ್ರಸಾರವಾಗಿ 'ಗೀತನಾಟಕಗಳು' ಶ್ರವ್ಯ ನಾಟಕಗಳಾಗಿಯೇ ಪ್ರಚಲಿತವಾಗಿವೆ. ವಾಸ್ತವವಾಗಿ ಪು.ತಿ.ನ ಅವರು ಭಾವಿಸಿದಂತೆ 'ಗೀತನಾಟಕಗಳು' ಭಾವಗೀತೆಗಳ ವಿಸ್ತೃತ ರೂಪವಾಗಿದೆ.

ಇಲ್ಲಿನ ವಿಶಾಲ ಭಿತ್ತಿಯಲ್ಲಿ ಭಾವಗೀತೆಗಳ ಸೀಮಿತತೆಯನ್ನು ಮೀರಿ ಕವಿ ತನ್ನ ಪ್ರತಿಭೆಯ ಮೂಲಕ ವೈವಿಧ್ಯಮಯವಾದ ರಾಗ ಭಾವ ರಸಗಳನ್ನು ಮೂಡಿಸಲು ಸಾಕಷ್ಟು ಅವಕಾಶಗಳನ್ನು ಕಲ್ಪಿಸಿಕೊಳ್ಳಬಲ್ಲ.

ಈ ಹಿನ್ನೆಲೆಯಲ್ಲಿ ಗೌರೀಶ ಕಾಯ್ಕಿಣಿ ಅವರ ಗೀತನಾಟಕಗಳನ್ನು ಪರಿಶೀಲಿಸಿದಾಗ ಶುದ್ಧ ನಾಟ್ಯ ಪ್ರತಿಭೆಗಿಂತ, ಕಾವ್ಯ ಪ್ರತಿಭೆಯ ಅದ್ಭುತ ವಿಲಾಸವಿದೆ ‘ಕ್ರೌಂಚ-ಧ್ವನಿಯಲ್ಲಿನ ಎಲ್ಲ ನಾಟಕಗಳೂ ವಸ್ತುವಿನ ದೃಷ್ಟಿಯಿಂದ, ನವೀನ ದರ್ಶನದಿಂದ, ನಿರೂಪಣೆಯ ಶೈಲಿಯ ಸೊಗಸಿನಿಂದ, ಸಂಭಾಷಣೆಗಳ ಸತ್ವದಿಂದ ಕಾವ್ಯ ಗುಣದಿಂದ ಯಶಸ್ವೀ ರಚನೆಗಳಾಗಿವೆ. ಸಂಭಾಷಣಾ ಗೀತೆಗಳಲ್ಲಿ ಚುರುಕುತನವಿದೆ: ನಾಟಕ ಕ್ರಿಯೆಗೆ ಇದರಿಂದಾಗಿ ವೇಗದ ಚಾಲನೆ ದೊರೆತಿದೆ. ಗೀತ ಸಂಭಾಷಣೆಗಳಿಗೆ ಎಲ್ಲಿಯೂ ರಾಗ ನಿರ್ದೇಶನವಿಲ್ಲ ನಿರ್ದೇಶಕನ ಮರ್ಜಿಯನ್ನು ಅವಲಂಬಿಸಿ ರಾಗ ಸಂಯೋಜನೆಗೆ ಅಳವಡಿಸಿಕೊಳ್ಳಬಹುದು. ಕರ್ಣಾಟಕ, ಹಿಂದೂಸ್ಥಾನಿ, ಜಾನಪದ ಧಾಟಿಗಳನ್ನು ಅಪೇಕ್ಷಿಸುವ ಸಂಭಾಷಣಾ ಗೀತಭಾಗಗಳಿವೆ. ಪ್ರತಿಭಾವಂತ ನಿರ್ದೇಶಕನಾದಲ್ಲಿ ಯಾವ ಪ್ರಕಾರವನ್ನಾದರೂ ಯಾವುದೇ ಮಾಧ್ಯಮಕ್ಕೆ ಬೇಕಾದರೂ ರೂಪಾಂತರಿಸಿಕೊಳ್ಳಬಲ್ಲ; ದುಡಿಸಿಕೊಳ್ಳಬಲ್ಲ. ಆದರೆ ‘ಗೀತನಾಟಕ’ ಅತ್ಯಂತ ಸಂಕೀರ್ಣ ಪ್ರಕಾರ. ಇದಕ್ಕೆ ಸಂಗೀತ, ನೃತ್ಯ ಅಭಿನಯಗಳ ಶಿಸ್ತು ಉಳಿದೆಲ್ಲಕ್ಕಿಂತ ಹೆಚ್ಚು ಬೇಕಾಗುತ್ತದೆ. ‘ಯಶೋಧರಾ’ [illegible] ರಂಗಪ್ರಯೋಗ ಕಂಡಿತ್ತೆಂಬ ಅಂಶವನ್ನು ಕಾಯ್ಕಿಣಿಯವರೇ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಒಟ್ಟಿನಲ್ಲಿ ಗೌರೀಶ ಕಾಯ್ಕಿಣಿಯವರು, ಉತ್ತಮ ಕಾವ್ಯಗುಣ, ಸಾಧ್ಯವಾದಲ್ಲೆಲ್ಲ ನಾಟ್ಯ ತತ್ವಗಳ ಸಮನ್ವಯದಂದಿಗೆ ಉತ್ತಮ ಗೀತನಾಟಕಕಾರರೆನಿಸಿಕೊಂಡಿದ್ದಾರೆ.



# ‘ಗೃಹಭಂಗ’ ಕಾದಂಬರಿಯಲ್ಲಿ ಸ್ತ್ರೀ ಸಂಸ್ಕೃತಿ

ಅರವತ್ತರ ದಶಕದಿಂದ ಅವಿರತವಾಗಿ ಬರೆಯುತ್ತಿರುವ ಭೈರಪ್ಪನವರ ಕಾದಂಬರಿಗಳು ಆಯಾ ಕಾಲಘಟ್ಟಗಳಲ್ಲಿ ನಡೆದ ಮತ್ತು ನಡೆಯುತ್ತಲೇ ಬಂದಿರುವ ಸಾಹಿತ್ಯ ಚಳುವಳಿಗಳಿಂದ ಪ್ರಭಾವಿತವಾಗದೆ ತಮ್ಮದೇ ಆದ ವಿಶಿಷ್ಟ ಶೈಲಿಯನ್ನು ಉಳಿಸಿಕೊಂಡು ಬಂದು ಇಂದಿಗೂ ಅವರ ಕಾದಂಬರಿಗಳು ಎಲ್ಲ ವರ್ಗದ ಓದುಗರನ್ನು ಸೆರೆ ಹಿಡಿದು ನಿಲ್ಲಿಸಬಲ್ಲ ಸಾಮರ್ಥ್ಯ ಮತ್ತು ಸತ್ವಗಳನ್ನು ಉಳಿಸಿಕೊಂಡು ಬಂದಿವೆ. ಆದರೆ ಅರವತ್ತರ ದಶಕದ ಕಾದಂಬರಿಗಳಾದ ಧರ್ಮಶ್ರೀ, ದೂರ ಸರಿದರು. ವಂಶವೃಕ್ಷ, ತಬ್ಬಲಿಯು ನೀನಾದೆ ಮಗನೆ, ಮೊದಲಾದ ಕಾದಂಬರಿಗಳು ಮತ್ತು ಎಪ್ಪತ್ತರ ದಶಕದ ಗೃಹಭಂಗ, ನಿರಾಕರಣ, ದಾಟು, ಪರ್ವ ಇತ್ಯಾದಿ ಕಾದಂಬರಿಗಳು ಜನಪ್ರಿಯವಾದ ಹಾಗೆ ನಂತರ ಬಂದ ಎಂಬತ್ತರ ದಶಕದ ನೆಲೆ, ಸಾಕ್ಷಿ, ಅಂಚು, ತಂತು, ಸಾರ್ಥಗಳು ಹೆಚ್ಚಿನ ಓದುಗರನ್ನು ಸೆಳೆದುಕೊಳ್ಳಲಿಲ್ಲ. ಭೈರಪ್ಪನವರ ಬೌದ್ಧಿಕ ಚಿಂತನೆಗಳು, ತಾತ್ವಿಕ ದರ್ಶನಗಳು ಇತ್ಯಾದಿಗಳಿಂದಾಗಿ ಸಾಮಾನ್ಯ ಓದುಗನ ಹಿಡಿತಕ್ಕೆ ಸಿಗದೆ ಅರ್ಥ ಗ್ರಹಿಕೆಯ ಹೊರಗೇ ಉಳಿದವು.

ಎಪ್ಪತ್ತರ ದಶಕದಲ್ಲಿ ಬಂದ ಅವರ ಕಾದಂಬರಿ ‘ಗೃಹಭಂಗ ಇದಕ್ಕೆ ಹೊರತಾಗಿ ಯಾವುದೇ ಗಾಢವಾದ ಚಿಂತನೆಯ, ಬೌದ್ಧಿಕತೆಯ ಭಾರವಿಲ್ಲದೆ ತನ್ನ ಸಹಜತೆ ಮತ್ತು ಅತ್ಯಂತ ವಾಸ್ತವಿಕತೆಯ ಆಯಾಮಗಳಿಂದ ಮಹತ್ವದ ಕೃತಿಯಾಗಿದೆ. ಒಂದು ನಿರ್ದಿಷ್ಟ ಪ್ರದೇಶ, ಪರಿಸರಗಳ ನಡುವಿನಿಂದ ಮೂಡಿನಿಂತ ಜೀವನದ ಗ್ರಹಿಕೆಯ ಅಭಿವ್ಯಕ್ತಿಯಷ್ಟೇ ಇಲ್ಲಿ ಮುಖ್ಯವಾಗುತ್ತದೆ. ಗ್ರಾಮ್ಯ ಪರಿಸರದಲ್ಲಿ ಬದುಕುತ್ತಿರುವ ವ್ಯಕ್ತಿಗಳ ಜೀವನ ವಿಧಾನ, ಗುಣ ಸ್ವಭಾವ, ರೀತಿ ನೀತಿ ನಡವಳಿಕೆಗಳ ಪರಿಣಾಮವಾಗಿ ನಿರ್ಮಾಣವಾಗುವ ಒಂದು ಸಮಷ್ಠಿ ಸಂಸ್ಕೃತಿಯ ಗಾಢ ಚಿತ್ರಣ ಇಲ್ಲಿ ಕಂಡಿದೆ. ನಿರ್ದಿಷ್ಟವಾಗಿ, ಖಚಿತವಾಗಿ ಹೇಳಬೇಕೆಂದರೆ ಒಂದು ಬ್ರಾಹ್ಮಣ ಕುಟುಂಬದ ಬದುಕಿನಲ್ಲಿನ ಏರಿಳಿತಗಳೇ ಕೇಂದ್ರ ವಸ್ತುವಾಗಿದ್ದರೂ ಈ ಕುಟುಂಬದೊಂದಿಗೆ ಒಂದಲ್ಲ ಒಂದು ರೀತಿಯಿಂದ ಈ ಕಾದಂಬರಿಯಲ್ಲಿ ಬರುವ ಪ್ರತಿವ್ಯಕ್ತಿಯೂ ಸಂಬಂಧ ಹೊಂದಿರುವುದರಿಂದ ಅವರೆಲ್ಲರ ಕತೆಯೂ ಆನುಷಂಗಿಕವಾಗಿ ಕೇಂದ್ರ ವಸ್ತು, ಪಾತ್ರಗಳೊಂದಿಗೆ ಬೆಸೆದುಕೊಂಡು ಅವರೆಲ್ಲರ ಕತೆಯೂ ಇಲ್ಲಿ ಮುಖ್ಯವಾಗುತ್ತದೆ.

ಲೇಖಕರೇ ಈ ಕೃತಿ ಕುರಿತು ಹೇಳಿರುವ "ಯಾವುದೇ ಬೌದ್ಧಿಕ ಜಿಜ್ಞಾಸೆಯ, ತಾತ್ವಿಕ, ವೈಚಾರಿಕ ವಿಶ್ಲೇಷಣೆಗಳ ಹಂಗಿಲ್ಲದೆ, ಬದುಕನ್ನು ಕೇವಲ ಬದುಕಾಗಿ ನೋಡುವ ಸಾಕ್ಷಿ ಪ್ರಜ್ಞೆಯ ಸೃಜನಾತ್ಮಕ ಕೃತಿ.........ಬದುಕಿಗೆ ಬದುಕೇ ಬರೆದ ಭಾಷ್ಯ" ಎನ್ನುವ ಮಾತುಗಳ ಹಿನ್ನೆಲೆಯಲ್ಲಿ ಪರಿಶೀಲಿಸುವಾಗಲೂ ಇದನ್ನು ಹಲವು ದೃಷ್ಟಿಗಳಿಂದ ವಿಶ್ಲೇಷಣೆಗೆ ಒಳಪಡಿಸಬಹುದಾದ ಎಲ್ಲ ಸಾಧ್ಯತೆಗಳೂ ಇವೆ. ಕಾವ್ಯದಲ್ಲಿ ಕೆಲವೊಮ್ಮೆ ಸಾಂಪ್ರದಾಯಿಕ ಅಲಂಕಾರಗಳು ಇಲ್ಲದೇ ಹೋದರೂ ಸ್ವಭಾವೋಕ್ತಿಗೇ ಧ್ವನಿಶಕ್ತಿ ಇರುವ ಸಾಮರ್ಥ್ಯವನ್ನು ಯಾರೂ ಅಲ್ಲಗಳೆಯಲಾರರು. ಹಾಗಾಗಿ ಈ ಕಾದಂಬರಿಯಲ್ಲಿ ಪ್ರಧಾನವಾಗಿ ಬರುವ ಸ್ತ್ರೀ ಪಾತ್ರಗಳ ಮೂಲಕವೇ ಕಾದಂಬರಿಯ ಕತೆಯ ಕಾಲದ ಸ್ತ್ರೀ ಸಂಸ್ಕೃತಿಯ ಒಂದು ನಿಚ್ಚಳ ನೋಟವನ್ನು ಸಾಧ್ಯವಾಗಿಸಿದೆ. ಇಲ್ಲಿನ ಸ್ತ್ರೀ ಪಾತ್ರಗಳು ಅತ್ಯಂತ ಸಹಜತೆಯೊಂದಿಗೆ ತಮ್ಮೆಲ್ಲ ಗುಣ, ದೌರ್ಬಲ್ಯಗಳೊಂದಿಗೆ ಮತ್ತು ತಮ್ಮ ಕಾಲದ ಸಮಾಜ ತಮಗೆ ವಿಧಿಸಿರುವ ಕಟ್ಟು ಕಟ್ಟಳೆಗಳಿಗೆ ಬದ್ಧವಾಗಿ ಇಲ್ಲವೇ ಅದರ ನಡುವೆಯೂ ವೈಯಕ್ತಿಕ ನೆಲೆಯಿಂದ ಕೆಲವಷ್ಟನ್ನು ವಿರೋಧಿಸುತ್ತಾ, ಪ್ರತಿಭಟಿಸುತ್ತಾ ಬದುಕನ್ನು ಸ್ವೀಕರಿಸಿರುವ, ರೀತೀಯಂತೂ ವಿಶಿಷ್ಟವಾಗಿ ನಿರೂಪಿತವಾಗಿದೆ.

ಈ ಕಾದಂಬರಿಯ ಕಥಾಕಾಲ ಅಥವಾ ಕಾಣಿಸಲು ಯತ್ನಿಸಿರುವ ಜೀವನದ ಕಾಲ ಸಾವಿರದ ಒಂಬೈನೂರ ಇಪ್ಪತ್ತರ ನಂತರ ಆರಂಭವಾಗಿ ಸಾವಿರದ ಒಂಬೈನೂರ ನಲವತ್ತೈದರ ಸುಮಾರಿಗೆ ಕೊನೆಯಾಗುತ್ತದೆ. ಬ್ರಿಟಿಷರ ವಸಾಹತುಶಾಹಿ ಕಾಲ ಅದಾಗಿತ್ತು. ಸ್ವಾತಂತ್ರ್ಯ ಹೋರಾಟದ ಜೊತೆ ಜೊತೆಗೆ ಭಾರತೀಯ ಸಾಂಪ್ರದಾಯಿಕ ಸಮಾಜದ ದೃಷ್ಟಿಯಲ್ಲಿ ಹೆಂಗಸರು ಕೇವಲ ಪುರುಷನ ಅಧಿಕಾರದ ವ್ಯಾಪ್ತಿಯೊಳಗೆ ಆಸ್ತಿಯೊಳಗಿನ ಒಂದು ಭಾಗದಂತೆ ಭಾವಿಸಲಾಗುತ್ತಿತ್ತು. ಪಿತೃಪ್ರಧಾನ ವ್ಯವಸ್ಥೆ, ಧರ್ಮ ಶಾಸ್ತ್ರಗಳಲ್ಲಿನ ಅಭಿಪ್ರಾಯಗಳಿಂದಾಗಿ ಹೆಣ್ಣಿಗೆ ಸ್ವಂತತ್ರ ಅಸ್ತಿತ್ವವಾಗಲೀ, ಆಲೋಚನೆಗಳಾಗಲೀ, ಯಾವುದೇ ವಿಷಯಗಳಲ್ಲಿ ಸಾಮಾಜಿಕ ಸ್ವಾತಂತ್ರ್ಯವಾಗಲೀ, ಅಕ್ಷರ ಕಲಿಕೆ, ಜ್ಞಾನಾರ್ಜನೆಗಳಿಗೆ ಅವಕಾಶ, ಅನುಮತಿಗಳಾಗಲೀ ಇಲ್ಲದೇ ಪುರುಷನ ಆಸ್ತಿಯಾಗಿ, ಭೋಗ ಸಾಮಗ್ರಿಗಳಲ್ಲಿ ಒಂದಾಗಿ, ಪರಗತಿ ಕಾಣಿಸಲು ಅನಿವಾರ್ಯವಾದ, ಸಂತಾನ ಪ್ರಾಪ್ತಿಗೆ ಸಿದ್ಧಗೊಳ್ಳುವ ಯಂತ್ರವಾಗಿ ಮಾತ್ರವೇ ಭಾವಿಸಲಾಗುತ್ತಿತ್ತು. ವ್ಯಕ್ತಿ ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರ್ಯಗಳಿಂದ ವಂಚಿತಳಾಗಿದ್ದುದು ಮಾತ್ರವೇ ಅಲ್ಲದೆ ಬಾಲ್ಯ ವಿವಾಹ, ವೈಧವ್ಯ. ಸತಿ ಪದ್ಧತಿ ಮುಂತಾದ ಸಾಮಾಜಿಕ ಅನಿಷ್ಠಗಳಿಗೆ ಗುರಿಯಾಗಿ ಹಲವು ವಿಧದಲ್ಲಿ ಶೋಷಣೆ, ಅವಮಾನ, ಅವಹೇಳನ, ಹಿಂಸೆ, ಕ್ರೌರ್ಯಗಳಿಗೆ ಬಲಿಯಾಗಿ 'ತನ್ನತನದ' ಅರಿವೇ ಇಲ್ಲದೆ ಅಳಿಸಿ ಹೋಗುತ್ತಿದ್ದಳು. ಇಂತಹ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರ ಪರಿಸ್ಥಿತಿಗಳಿಂದ ಹೆಣ್ಣು ಮಕ್ಕಳು ಅನುಭವಿಸುತ್ತಿರುವ ನೋವು, ಗುರಿಯಾಗುತ್ತಿರುವ ಅನ್ಯಾಯಗಳ ಅರಿವಿನಿಂದ ಮಾನವೀಯ ಮೌಲ್ಯಗಳಿಗೆ ಒತ್ತು ಕೊಟ್ಟು, ಸಮಾಜದಲ್ಲಿ ಜಾತಿ, ವರ್ಗ, ಲಿಂಗ ಸಮಾನತೆಗಳನ್ನು ತರಬೇಕೆನ್ನುವ ತುಡಿತಕ್ಕೆ ಒಳಗಾಗಿದ್ದ ಒಂದಷ್ಟು ಮಂದಿ ದೇಶಪ್ರೇಮ, ರಾಷ್ಟ್ರಾಭಿಮಾನಗಳ ಸಮಾಂತರದಲ್ಲಿ ಭಾರತೀಯ ಸಮಾಜದಲ್ಲಿನ ಕೆಲವೊಂದು ಅನಿಷ್ಟಗಳ ವಿರುದ್ಧ ಹೋರಾಟಕ್ಕೆ ನಿಲ್ಲುವ ಕಾರ್ಯಾಚರಣೆಗಳನ್ನೂ ರೂಪಿಸಿದರು.

ಸುಧಾರಣೆಯ ಮನೋಭಾವದೊಂದಿಗೆ ಸ್ತ್ರೀ ಶಿಕ್ಷಣ, ಬಾಲ್ಯವಿವಾಹ ವಿರೋಧ, ವಿಧವಾ ಪುನರ್ವಿವಾಹ ಮತ್ತು ಅತ್ಯಂತ ಭಯಂಕರವೂ ದಾರುಣವೂ ಆದ ಸತಿ ಪದ್ಧತಿಯ ಖಂಡನೆ ಇತ್ಯಾದಿ ಮೌಲಿಕ ವಿಚಾರಗಳಿಗೆ ಚಾಲನೆ ಕೊಟ್ಟರು.

ಈ ಕಾದಂಬರಿಯ ಕಾಲ ಸರಿಸುಮಾರು ಇಂತಹ ಸುಧಾರಣವಾದಿ ಕಾಲವೇ ಆಗಿರುವುದರಿಂದ ಲೇಖಕರಿಗೆ ಸಹಜವಾಗಿ ಇದರ ಅರಿವಿದ್ದೇ ಇರುವುದಾದರೂ, ತಮ್ಮ ಕಾದಂಬರಿಯಲ್ಲಿನ ಸ್ತ್ರೀ ಪಾತ್ರಗಳ ಸೃಷ್ಟಿಯ ಹಿನ್ನೆಲೆಯಲ್ಲಿ ಇಂತಹ ಯಾವುದೇ ಆಶಯಗಳಿಲ್ಲ. ಉದ್ದೇಶ ಪೂರ್ವಕವಾಗಿ ದಿಟ್ಟತನ, ಸ್ವೇಚ್ಛೆಗಳನ್ನು ಆರೋಪಿಸಿಯೂ ಇಲ್ಲ. ಇಲ್ಲಿ ಬರುವ ಗಂಗಮ್ಮ, ನಂಜಮ್ಮ, ಸಾತು, ಕಮಲು, ಸರ್ವಕ್ಕ, ನರಸಿ, ತುಂಗಮ್ಮ, ವೆಂಕಟಲಕ್ಷ್ಮಿ, ಅಕ್ಕಮ್ಮ ಮೊದಲಾಗಿ ಎಲ್ಲ ಸ್ತ್ರೀ ಪಾತ್ರಗಳು ಸಿದ್ಧ ಪಾತ್ರಗಳಲ್ಲ ಪರಿಸ್ಥಿತಿ, ಪರಿಸರ, ಸನ್ನಿವೇಶ ಸಂದರ್ಭಗಳಿಗೆ ಅನುಗುಣವಾಗಿ ಸ್ಪಂದಿಸುತ್ತಾ ಅವರವರ ವ್ಯಕ್ತಿತ್ವಗಳು ವಿಕಾಸಗೊಳ್ಳುವುದನ್ನು ಕಾಣುತ್ತೇವೆ. ಇಲ್ಲಿನ ಸ್ತ್ರೀಪುರುಷ ಪಾತ್ರಗಳೆಲ್ಲವೂ ಅಂದಕ್ಕೆಂದು ಹೂದಾನಿಯಲ್ಲಿ ಅಚ್ಚುಕಟ್ಟಾಗಿ ಅಣಿಗೊಳಿಸಿ ಅಲಂಕರಿಸಿಟ್ಟ ಹೂವುಗಳಲ್ಲ. ಕಾಡಿನಲ್ಲಿ ಸ್ವೇಚ್ಛೆಯಾಗಿ, ಸ್ವಚ್ಛಂದವಾಗಿ ತಮಗೆ ತಾವೇ ಬೆಳೆದ ವೈವಿಧ್ಯಮಯ ಪುಷ್ಪಗಳು.

ಸ್ತ್ರೀವಾದಿ ಚಿಂತನೆಗಳಿಗೆ ಹೊರತಾಗಿ ಉಳಿದೂ ಭೈರಪ್ಪನವರು ಇಲ್ಲಿ ಕಾಣಿಸಿರುವ ಸ್ತ್ರೀ ಪಾತ್ರಗಳ ವ್ಯಕ್ತಿತ್ವ ಗುಣ ಸ್ವಭಾವಗಳು ಆಶ್ಚರ್ಯ ಮೂಡಿಸುತ್ತವೆ. ಸಾಂಪ್ರದಾಯಿಕ ಸಾಮಾಜಿಕ ದೃಷ್ಟಿಯಲ್ಲಿ ಹೆಂಗಸರು ಗಟ್ಟಿಯಾಗಿ ಮಾತನಾಡಬಾರದು, ಪುರುಷ ಎಷ್ಟೇ ಕ್ರೂರಿಯಾಗಿರಲಿ ಷಂಡನೋ ಭಂಡನೋ ಆಗಿರಲಿ, ಮನೆಮಂದಿಯನ್ನು ದುಡಿದು ಪೋಷಿಸಲಾಗದ ಅಯೋಗ್ಯನಿರಲಿ, ಹೆಂಡತಿಯಾಗಲೀ ಅಥವಾ ತಾಯಿ, ಸೋದರಿಯರಾಗಿರಲಿ ಪ್ರಶ್ನಿಸುವ, ಮಾತನಾಡಿಸುವ, ಆಡಿದ್ದಕ್ಕೆ ಪ್ರತಿಯಾಡುವ ಸಾಹಸವನ್ನು ಮಾಡಬಾರದು. ಗಂಡಸರು ಮಾಡುವ ಕೆಲಸಗಳನ್ನು ಮಾಡಬಾರದು; ಸಾರ್ವಜನಿಕ ವ್ಯವಹಾರಗಳಲ್ಲಿ ಕಾಣಿಸಿಕೊಳ್ಳಬಾರದು. ತಮ್ಮ ಖಾಸಗಿ ಆಸ್ತಿಯ ಮೇಲೂ ಹೆಣ್ಣು ಮಕ್ಕಳು ತಮ್ಮ ಹಕ್ಕನ್ನು ಸ್ಥಾಪಿಸಬಾರದು. ಮುಟ್ಟು-ಚಟ್ಟು ಮಡಿ ಮೈಲಿಗೆಗಳು ವ್ರತ-ನೇಮ, ಮದುವೆ, ಮುಂಜಿ, ಹಬ್ಬ-ಹರಿದಿನ ಅಡಿಗೆ ಪಡಿಗೆಗಳಿಗಷ್ಟೇ ತಮ್ಮನ್ನು ಸೀಮಿತಗೊಳಿಸಿಕೊಳ್ಳಬೇಕು. ಪರಪುರುಷರ ಜೊತೆ ಮಾತನಾಡುವುದು, ಪತ್ರ ವ್ಯವಹಾರ ಮಾಡುವುದೂ ನಿಷಿದ್ಧವೇ! ಹೀಗೆ ಒಂದು ರೂಢಿಯ ಸ್ತ್ರೀ ಸಂಸ್ಕೃತಿಯ ಕಲ್ಪನೆ ನಿರಂತರವಾಗಿ ಸಾಗಿ ಬಂದಿದೆ.

ಆದರೆ 'ಗೃಹಭಂಗ' ಕಾದಂಬರಿಯ ಕೇಂದ್ರ ಪಾತ್ರಗಳು ಸ್ತ್ರೀಯರಾಗಿರುವುದೂ ಇಲ್ಲಿನ ವೈಶಿಷ್ಟ್ಯವಾಗಿದೆ. ಅಲ್ಲದೆ ಗಂಗಮ್ಮ, ನಂಜಮ್ಮ, ಸರ್ವಕ್ಕ ಸಂಸಾರದ ನಿರ್ವಹಣೆ ಮತ್ತು ಪೋಷಣೆಗಳ ಜವಾಬ್ದಾರಿ ಹೊತ್ತು, ಊಟಕ್ಕಾಗಿಯೂ ಹೆಣಗಾಡುವ ಪರಿಸ್ಥಿತಿಯಲ್ಲಿ ನರಳುವುದನ್ನು ಕಾಣುತ್ತೇವೆ. ಊರ ಶಾಮಭೋಗರಾದ ರಾಮಣ್ಣನ ಎರಡನೇ ಹೆಂಡತಿಯಾಗಿ ಬಂದ ಗಂಗಮ್ಮ ಗಂಡನನ್ನು ಕಳೆದುಕೊಂಡು ಬೇಜವಾಬ್ದಾರಿ ಗಂಡು ಮಕ್ಕಳ ಪೋಷಣೆಗಾಗಿ ಊರೆಲ್ಲ ಸುತ್ತಾಡಿ ಭಿಕ್ಷೆಯ ರೂಪದಲ್ಲಿ, ಕನಿಕರದ ರೂಪದಲ್ಲಿ ದೊರೆತ ಧಾನ್ಯ ಸಂಗ್ರಹಿಸಿ ಜೀವಿಸಬೇಕಾದ ಅನಿವಾರ್ಯತೆಯಲ್ಲಿ ಬದುಕಬೇಕಾಗಿ ಬಂದರೂ 'ಬ್ರಾಹ್ಮಣ' ಜಾತಿಯಲ್ಲಿ ಹುಟ್ಟಿ ಆ ಜಾತಿ

ಸಂಸ್ಕಾರದ ಯಾವ ಲಕ್ಷಣಗಳೂ ಇಲ್ಲದೆ, ಸಂಕೋಚ, ಆತ್ಮಗೌರವ, ಆತ್ಮ ಪ್ರತಿಷ್ಠೆ. ನಾಚಿಕೆ ಹೇಚಿಕೆಗಳಿಲ್ಲದೆ ತನ್ನ ಬಾಯನ್ನೇ ಬಂಡವಾಳವಾಗಿಸಿಕೊಂಡು, ಸುಸಂಸ್ಕೃತ ಜಾತಿಯ ಹೆಂಗಸೊಬ್ಬಳಿಂದ ನಿರೀಕ್ಷಿಸಲಾಗದ ದುರ್ಭಾಷೆ, ಅವಾಚ್ಯ ಶಬ್ದಗಳನ್ನು ಧಾರಾಳವಾಗಿ, ಎತ್ತರದ ದನಿಯಲ್ಲಿ ಬಳಸಿ ಅದರ ಮೂಲಕವೇ ಎಲ್ಲವನ್ನೂ ದಕ್ಕಿಸಿಕೊಳ್ಳುತ್ತಾ ನಿಭಾಯಿಸಿಕೊಳ್ಳುತ್ತಾ ಸಾಗುತ್ತಾಳೆ. ಗಂಡನ ಶಾನುಭೋಗಿಕೆ ಮಗನಿಗೆ ಕೂಡಿಸಿ ಮರ್ಯಾದೆಯಿಂದ ಬಾಳ್ವೆ ಮಾಡಬಹುದಾಗಿದ್ದ ಅವಕಾಶವಿದ್ದರೂ, ಚೆನ್ನಿಗರಾಯ ಅಪ್ಪಣ್ಣನಂತಹ ಮಕ್ಕಳು ಅಕ್ಷರ ಶತ್ರುಗಳಾಗಿ ಸೋಮಾರಿಗಳಾಗಿ ಅಮ್ಮ ಕಷ್ಟಪಟ್ಟೋ ಅಥವಾ ತಿರಿದು ತಂದದ್ದೋ, ತಿಂದು ಉಂಡಾಡಿಗುಂಡರಂತೆ ಬದುಕುತ್ತಾರೆ. ಇದಕ್ಕೆ ತಾಯಿಯಾದವಳೇ ಕಾರಣವೆನ್ನುವುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ಗಂಗಮ್ಮನಿಗಾಗಲೀ ಅಥವಾ ಈ ಇಬ್ಬರು ಗಂಡು ಮಕ್ಕಳಿಗಾಗಲೀ ಸ್ವತಂತ್ರ ಆಲೋಚನೆಗಳಿಲ್ಲ. ತಾಯಿಯ ಹೆಜ್ಜೆ ಜಾಡಿನಲ್ಲಿಯೇ ನಡೆದು ಅವಳದೇ ಸಂಸ್ಕಾರವನ್ನು ಪಡೆದದ್ದರಿಂದಲೇ ಅವರ ಹೆಂಡಂದಿರನ್ನು ಸಂಬೋಧಿಸುವಾಗಲೆಲ್ಲ ಬೋಸುಡಿ, ಮುಂಡೆ, ರಂಡೆ' ಇಂಥಾ ಅವಾಚ್ಯಗಳೇ ಅವರ ಬಾಯಿಂದ ಹೊಮ್ಮುತ್ತಿದ್ದುದು. ಈ ಇಬ್ಬರ ಮಕ್ಕಳ ಬದುಕು ಪ್ರಾಣಿ ಬದುಕೇ ಆಗಿತ್ತು. ಆಹಾರ, ನಿದ್ರೆ, ಮೈಥುನ-ಇವೇ ಅವರ ಬದುಕಿನ ಅರ್ಥಗಳು! ದ್ಯಾವರಸಯ್ಯನವರ ಪ್ರಯತ್ನದ ಫಲವಾಗಿ ಅಲ್ಪಸ್ವಲ್ಪ ಶಾನುಭೋಗಿಕೆ ಕಲಿತು, ಕಂಠಿಜೋಯಿಸನ ವರ್ಚಸ್ಸಿನಿಂದ ಶಾನುಭೋಗಿಕೆ ಶಿವಲಿಂಗನಿಂದ ದೊರೆತು ಅಲ್ಪಸ್ವಲ್ಪ ಆದಾಯ ಬರುತ್ತಿದ್ದರೂ ಚೆನ್ನಿಗರಾಯನಿಗೆ ಮನೆ-ಹೆಂಡತಿ ಮಕ್ಕಳು ಲೆಕ್ಕಕ್ಕೆ ಬರುವುದಿಲ್ಲ. ತಾನು ಮತ್ತು ತನ್ನ ಹೊಟ್ಟೆಯಷ್ಟೆ ಅವನಿಗೆ ಮುಖ್ಯವಾಗುತ್ತದೆ. ಗಂಗಮ್ಮನ ಅವಿವೇಕ, ಸಣ್ಣತನ, ಅಜ್ಞಾನ, ದೊಡ್ಡಬಾಯಿ ಇನ್ನೊಬ್ಬರ ಬಗೆಗಿನ ನಿರ್ಲಕ್ಷ್ಯ, ಅತ್ತೆತನದ ಅಹಂಕಾರ ಅವರಿವರ ಹಿಸುಣತನಕ್ಕೆ ಕಿವಿಗೊಡುವ ಮನೋಭಾವ, ಮಕ್ಕಳಿಗೆ ರವಾನಿಸಿದ ಕುಸಂಸ್ಕಾರ ಎಲ್ಲವೂ ಒಟ್ಟಾರೆಯಾಗಿ ಮನೆ ಮುರಿಯಲು, ಗೃಹ ಭಂಗವಾಗಲು ಕಾರಣವಾಗುತ್ತದೆ. ಗಂಗಮ್ಮನಿಂದ ಮೊದಲಲ್ಗೊಂಡು ಇಲ್ಲಿ ಬರುವ ಎಲ್ಲ ಹೆಂಗಸರೂ ಹೆಚ್ಚು ಕಡಿಮೆ ಮೌಢ್ಯ, ಅಜ್ಞಾನಗಳಲ್ಲಿ ಬದುಕುವವರೇ, ಇದರ ಪರಿಣಾಮವಾಗಿ ಹೆಚ್ಚಿನ ಶೋಷಣೆ, ಹಿಂಸೆಗೆ ಒಳಗಾಗುತ್ತಾರೆ. ಗಂಗಮ್ಮ ಇದ್ದ ಬದ್ದ ಅಲ್ಪ ಆಸ್ತಿಯನ್ನು ಕಬ್ಬಿನಗದ್ದೆಯನ್ನು ಮಗ ಅಪ್ಪಣ್ಣ ಸಿಗರೇಟಿನ ಬೆಂಕಿಯಿಂದ ಆಕಸ್ಮಿಕವಾಗಿ ಸುಟ್ಟ ಕಾರಣಕ್ಕಾಗಿ ಗದ್ದೆಯನಷ್ಟ ಪರಿಹಾರಕ್ಕಾಗಿ, ಕುರುಬರ ಸಣ್ಣಯ್ಯ, ಅಯ್ಯಾಶಾಸ್ತ್ರಿ, ಬಣಜಿಗರ ರೇವಣ ಶೆಟ್ಟಿ ಎಲ್ಲರೂ ಏಕಕಾಲಕ್ಕೆ ಸಮಯ, ಅವಕಾಶಗಳ ಸದುಪಯೋಗ ಮಾಡಿಕೊಳ್ಳಬೇಕೆಂಬ ಸ್ವಾರ್ಥದ ಹವಣಿಕೆಯಲ್ಲಿ ನಷ್ಟವಾದದ್ದಕ್ಕಿಂತ ದುಪ್ಪಟ್ಟು ಸೆಳೆದುಕೊಳ್ಳಲು ಪ್ರಯತ್ನಿಸುತ್ತಾರೆ. ಕೋರ್ಟು, ಕಛೇರಿ, ವ್ಯಾಜ್ಯ, ಇತ್ಯಾದಿಗಳಿಗೆಂದು ಇದ್ದುದೆಲ್ಲವನ್ನೂ ಕಳೆದುಕೊಳ್ಳುತ್ತಾಳೆ. ಉಳಿದ ಒಂದಿಷ್ಟು ಹಣವನ್ನು 'ಋಷಿ ಪಂಚಮಿ' ವ್ರತಕ್ಕೆಂದು ಪೋಲು ಮಾಡುತ್ತಾಳೆ. ಇಷ್ಟೆಲ್ಲ ಕಷ್ಟ ಕಾರ್ಪಣ್ಯಗಳು ಅವಳನ್ನು ಮೆದುಮಾಡುವುದೇ ಇಲ್ಲ, ವಿವೇಕದತ್ತ ದೂಡುವುದೇ ಇಲ್ಲ. ಒಮ್ಮೆಯಾದರೂ ಅವಳಲ್ಲಿ ಪರಿತಾಪ, ಪಶ್ಚಾತ್ತಾಪಗಳು ಕಾಣಿಸಿಕೊಳ್ಳುವುದಿಲ್ಲ. ಮಕ್ಕಳ ದುಷ್ಟತನ, ದಡ್ಡತನಗಳು ಅಷ್ಟಾಗಿ ಅವಳನ್ನು ಕಾಡುವುದೇ ಇಲ್ಲ.

ಎಂದೋ ಒಮ್ಮೆ ಅಪರೂಪಕ್ಕೆ "ಉಳಿದೋರ್ ಮನೆ ಮಕ್ಕಳು ತಾಯಿ ಅಂದ್ರೆ ಹ್ಯಾಗೆ ಹೆದರ್‌ಕಂಡು ನಡೀತಾರೆ. ಈ ಮುಂಡೇವಕ್ಕೆ ಏನು ಬಂದಿದೆ ಬರಬಾರ್‍ದ ರ್‍ವಾಗ! ನನ್ನ ಹಣೇ ಬರಾ ಇದು' ಎಂದು ಕಣ್ಣಿನಲ್ಲಿ ನೀರುಹಾಕುತ್ತಾಳೆ. ಆದರೆ ಆ ಮಕ್ಕಳು ಅಮ್ಮನಿಗೆ ತಿರುಗಿಸಿಕೊಡುವ ರೀತಿ ಅವರು ಬೆಳೆದ ಬೆಳೆಸಿದ ಸಂಸ್ಕಾರಕ್ಕೆ ಕನ್ನಡಿಯಾಗಿದೆ.

'ಬೋಳಿ ಮುಂಡೆ, ಕತ್ತೆ ಮುಂಡೆ, ಸೂಳೆಮುಂಡೆ, ಹೊಲೆಮುಂಡೇ, ಹೊಲೇರಮುಂಡೆ'- ಎಂದು ಸಾಗುವ ಬೈಗಳು, ತಾಯಿಯಿಂದಲೇ ಬಂದ ಭಾಷೆಯ ಸಂಸ್ಕಾರವಾಗಿದೆ. ಗಂಗಮ್ಮನ ಈ ಬಗೆಯ ವ್ಯಕ್ತಿತ್ವ ಬದುಕಿನ ಕಷ್ಟ ಕಾರ್ಪಣ್ಯಗಳಿಂದ, ಸಂದರ್ಭಗಳಿಂದ ರೋಸಿಹೋಗಿ ಅವಳಿಗೆ ಬಂದದ್ದಲ್ಲ. ಮೊದಲಿನಿಂದಲೂ ಅವಳ ಬಾಯಿ, ಬಜಾರಿತನಗಳಿಂದಾಗಿ 'ಹೆಣ್ಣುಹುಲಿ' ಎಂದೇ ಗುರುತಿಸಿಕೊಂಡಿದ್ದಳು. ತನ್ನನ್ನು 'ಹೆಣ್ಣುಹುಲಿ' ಎಂದು ಕರೆದದ್ದು ಕಿವಿಗೆ ಬಿದ್ದರೆ ಸಾಕು. "ಈ ಜನದ ಬಾಯಿಗೆ ನನ್ ಯಡಗಾಲ ಹಳೇ ಎಕ್ಕಡ ತುರುಕ, ಸೂಳೆ ಮಕ್ಕಳನ್ ತಂದು" ಎಂದು ಇನ್ನೂ ಏನೇನೋ ಅವಾಚ್ಯ ಶಬ್ದಗಳ ಸುರಿಮಳೆಯಾಗುತ್ತಿತ್ತು.

ಗಂಗಮ್ಮನ ಸಂಸ್ಕೃತಿ ಇಷ್ಟಕ್ಕೇ ಸೀಮಿತವಾಗಿಕಲಿಲ್ಲ. ಅವಳಿಗೆ ಹೆಣ್ಣಿನ ವಿಚಾರವಾಗಿ ಇದ್ದ ಹಳೇ ನಂಬಿಕೆಗಳಲ್ಲಿಯೇ ವಿಶ್ವಾಸ. ಅಕ್ಷರ ಕಲಿತ, ಬುದ್ಧಿವಂತ ಸೊಸೆ ನಂಜಮ್ಮನನ್ನು ಪ್ರೀತಿ, ಸೌಹಾರ್ದಗಳಿಂದ, ಕನಿಕರದಿಂದ ನೋಡಿದ್ದೇ ಇಲ್ಲ. ಕಂಠಿ ಜೋಯಿಸರ ಮಗಳಾಗಿ, ತಾಯಿಯಿಲ್ಲದ ತಬ್ಬಲಿಯಾಗಿ ಅಕ್ಕಮ್ಮನ ಪ್ರೀತಿ, ವಾತ್ಸಲ್ಯಗಳ ನೆರಳಲ್ಲಿ ಬೆಳೆದ ನಂಜಮ್ಮ ನಿಷ್ಪ್ರಯೋಜಕ ಗಂಡನನ್ನು, ರಾಕ್ಷಸಿಯಂತಹ ಅತ್ತೆಯನ್ನು ಸಹಿಸಿಕೊಂಡು ಸಂಸಾರವನ್ನು ತೂಗಿಸಿಕೊಂಡು ಹೋಗಲು ಅವಳು ನಡೆಸುವ ಹೋರಾಟಗಳೇ ಇಡೀ ಕಾದಂಬರಿಯ ವ್ಯಾಪಕ ಭಿತ್ತಿಯಲ್ಲಿ ಮೂಡಿದ ಚಿತ್ರಗಳಾಗಿವೆ. ಕಂಠಿ ಜೋಯಿಸರ ದರ್ಪವನ್ನು ರೂಢಿಸಿಕೊಳ್ಳದಿದ್ದರೂ ಬದುಕಿನ ಸಮಸ್ಯೆಗಳ ಸವಾಲುಗಳನ್ನು ಎದುರಿಸಿ ನಿಲ್ಲಬಲ್ಲ ಮನೋಧೈರ್ಯ, ಸಾಮರ್ಥ್ಯಗಳು ಅವಳಲ್ಲಿ ದಿಟ್ಟವಾಗಿ ಕಾಣಿಸಿಕೊಳ್ಳುತ್ತವೆ. ಗಂಡನ ನಿರ್ಲಕ್ಷ್ಯ, ಸೋಮಾರಿತನ, ಅತ್ತೆಯ ಬಾಯಿಹರಕುತನ ಅವಳಲ್ಲಿ ಬೇಸರ, ನೋವುಗಳನ್ನು ಉಂಟು ಮಾಡಿದರೂ, ಅತ್ತೆಮನೆ ತೊರೆದು ತವರನ್ನು ಸೇರಲು ಬಯಸುವುದಿಲ್ಲ. ಪರಿಸ್ಥಿತಿಯ ಜೊತೆಗೆ ಹೆಣಗಾಡುತ್ತಲೇ ರಾಜಿಮಾಡಿಕೊಳ್ಳುತ್ತಲೇ, ಗಂಡನಲ್ಲಿ, ಅತ್ತೆಯಲ್ಲಿ, ಅಪ್ಪಣ್ಣ ಮೈದುನನಲ್ಲಿ ಸುಧಾರಣೆ ತರಲು ಪ್ರಯತ್ನಿಸುತ್ತಾಳೆ. ದ್ಯಾವರಸಯ್ಯನ ಒತ್ತಾಸೆ, ಹಿತಬೋಧೆ, ಮಾರ್ಗದರ್ಶನದಿಂದ ಶಾನುಭೋಗಿಕೆಯ ಕೆಲಸಗಳನ್ನು ಅತ್ತೆಯ ಮತ್ತು ಸುತ್ತಮುತ್ತಲಿನವರ ವಿರೋಧದ ನಡುವೆಯೂ ಅಳುಕಿನಿಂದಲೇ ಕಲಿಯುತ್ತಾಳೆ. ಲೆಕ್ಕದ ಪುಸ್ತಕಕ್ಕೆ ರೂಲು ಹಾಕುವುದರಿಂದ ಹಿಡಿದು ಪೋಟಿಗೆ ವಸೂಲಿವರೆಗಿನ ಎಲ್ಲ ಕೆಲಸಗಳನ್ನು ಅತ್ಯಂತ ಸಮರ್ಥವಾಗಿ ಅಚ್ಚುಕಟ್ಟಾಗಿ ನಿರ್ವಹಿಸಿ ಶೇಕ್‌ದಾರರಿಂದಲೂ ಮೆಚ್ಚುಗೆ ಪಡೆಯುತ್ತಾಳೆ. ನಂಜಮ್ಮ ಸ್ತ್ರೀ ಸ್ವಾತಂತ್ರ್ಯ, ಸ್ತ್ರೀಯರ ಹಕ್ಕುಗಳ ಬಗ್ಗೆ ಅರಿತವಳೂ ಅಲ್ಲ, ಆಡಿದವಳೂ ಅಲ್ಲ. ಅಪ್ಪಣ್ಣನ ಹೆಂಡತಿ ಸಾತು, ಅಣ್ಣ ಕಲ್ಲೇಶನ ಹೆಂಡತಿ ಕಮಲುರಂತೆ ಅವಿವೇಕಿಯೂ ಅಲ್ಲ; ಉದ್ಧಟಳೂ ಅಲ್ಲ. ಅವರಿಬ್ಬರೂ ಕಟ್ಟಿಕೊಂಡ ಗಂಡಂದಿರೊಡನೆ ಬಾಳಲಾರದೆ. ಅವರನ್ನು ಸಹಿಸಿಕೊಳ್ಳಲಾಗದೆ

ಸದಾ ಘರ್ಷಣೆ, ಸಂಘರ್ಷಗಳಿಂದ, ಗಂಡಂದಿರ ದೌರ್ಜನ್ಯ ಅನಾದರಣೆಗೆ ಒಳಗಾಗಿ ತಮ್ಮ ಬದುಕುಗಳನ್ನು ನರಕವಾಗಿಸಿಕೊಳ್ಳುತ್ತಾರೆ. ಆದರೆ ನಂಜಮ್ಮ ನರಕ ಸದೃಶ ಬದುಕಿನಲ್ಲಿ ನೆಮ್ಮದಿ, ಸುಖಗಳನ್ನು ಹುಟ್ಟುಹಾಕುವ ಪ್ರಯತ್ನ ಮಾಡುತ್ತಾಳೆ. ಸಾತು ಕಮಲೂರು ಬೆಳೆದ ವಾತಾವರಣ, ಹೆಚ್ಚಾಗಿ ತಾಯಂದಿರ ಅತಿ ಮಮತೆ, ಆಧುನಿಕ ಜೀವನ ಶೈಲಿಯ ಮೋಹ, ಸೇರಿದ ಮನೆಯಲ್ಲಿ ಬಾಳಲಾಗದ ಪರಿಸ್ಥಿತಿಗೆ ದಾರಿ ಮಾಡುತ್ತವೆ. ರುಚಿರುಚಿಯಾದ ತಿಂಡಿ, ಹೊತ್ತು ಹೊತ್ತಿಗೆ ಕಾಫಿ, ಸಣ್ಣಕ್ಕಿ ಅನ್ನ ಇವೆಲ್ಲವನ್ನೂ ಬಯಸುವ ಕಮಲು, ಸಾತುಗಳಿಗೆ ಗ್ರಾಮೀಣ ಬದುಕಿನ ಹೆಣ್ಣುಗಳಂತೆ ವಿನಯ ವಿಧೇಯತೆಗಳಿಂದ ಗಂಡ ಮತ್ತು ಹಿರಿಯರಿಗೆ ಹೆದರಿಕೊಂಡು ಸುಮ್ಮನಿರುವ ಜಾತಿಯಲ್ಲ, ಸಾತು ಅತ್ತೆ ಮತ್ತು ಗಂಡನ ಭಾಷೆಯಲ್ಲಿಯೇ ಅವರಿಗಿಂತ ಜೋರಾಗಿ ಎದುರೇಟು ಕೊಡಬಲ್ಲಳು. ಕಮಲುವಂತೂ ಅಕ್ಕಮ್ಮನಿಗಾಗಲೀ, ಗಂಡ ಕಲ್ಲೇಶನಿಗಾಗಲೀ ಹೆದರಿ ಕುಳಿತು ಕೊಳ್ಳುವ ಸ್ವಭಾವದವಳಲ್ಲ. ಹೊಡೆಯುವ ಗಂಡನಿಗೆ ತಿರುಗಿ ಹೊಡೆಯುತ್ತಾಳೆ. ಬಾಯಿಗೆ ಬಾಯಿ ಕೊಡುತ್ತಾಳೆ. ಇನ್ನೂ ಅತಿಯಾದರೆ ಬಾವಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುವ ಬೆದರಿಕೆ ಹಾಕುತ್ತಾಳೆ. ಸೇರಿಗೆ ಸವ್ವಾಸೇರಿನಂತೆ ಇದ್ದುದರಿಂದಲೇ ಗಂಡ ಹೆಂಡಿರ ನಡುವೆ ಸಾಮರಸ್ಯ ಸಾಧ್ಯವಾಗುವುದಿಲ್ಲ. ಕಚ್ಚಾಟ, ಬಡಿದಾಟಗಳಲ್ಲೇ ಬದುಕು ಸಾಗುತ್ತದೆ. ಸಾತುವಂತೂ ಅಪ್ಪಣ್ಣನಿಂದ ಬಿಡಿಸಿಕೊಂಡು ತವರಿಗೆ ಹೋಗುತ್ತಾಳೆ. ಆದರೆ ತಂದೆಯ ಮರಣಾನಂತರ ಜೀವನ ನಿರ್ವಹಣೆ ಕಷ್ಟವಾಗಿ ಅತ್ತೆಯ ಮನೆಗೆ ಹಿಂತಿರುಗುವ ಪ್ರಯತ್ನಗಳು ಸೋಲುತ್ತವೆ. ಆದರೆ ನಂಜಮ್ಮ ಇವರೆಲ್ಲರಿಗಿಂತ ಭಿನ್ನವಾಗಿ ತನ್ನ ಬದುಕಿನ ಜವಾಬ್ದಾರಿಯನ್ನು ತನ್ನ ಹೆಗಲಿಗೇರಿಸಿಕೊಂಡೇ ಹೋರಾಡುತ್ತಾ ಕೊನೆಯುಸಿರೆಳೆಯುತ್ತಾಳೆ. ನಂಜಮ್ಮನ ಹೋರಾಟದ ಮೂಲಕವಾಗಿಯೇ ಕಾಣಿಸಿಕೊಳ್ಳುವ ಕೆಲವು ಹೊಸ ವಿಚಾರಗಳು ಅತ್ಯಂತ ಸೂಕ್ಷ್ಮವಾಗಿ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತವೆ. ಹೆಂಗಸರು ಶಾನುಭೋಗಿಕೆ ಮಾಡುವುದು ಕಲ್ಪನೆಗೂ ಮೀರಿದ ವಿಚಾರ. ಆದರೆ ಪರಿಸ್ಥಿತಿಯ ಅನಿವಾರ್ಯತೆಯಿಂದ ಆ ಕೆಲಸಕ್ಕೆ ಕೈ ಹಾಕುವ ನಂಜಮ್ಮ ಅತ್ತೆಯ ಆರ್ಭಟಕ್ಕೆ, ಆಕ್ರೋಶಕ್ಕೆ ಒಳಗಾಗುತ್ತಾಳೆ. "ಹೆಂಗಸರು ಸರ್ಕಾರಿ ಲೆಕ್ಕ ಬರೀ ಬೌದೆ?" ಎಂಬುದು ಹುಬ್ಬುಗಂಟಿಕ್ಕಿ ಗಂಗಮ್ಮ ಪ್ರಶ್ನೆ ಕೇಳುವುದೇ ಅಲ್ಲದೆ, ಇದೇನೋ ಇವಳ ಮನ್‌ತನ ಹಾಳಾಗ, ಕತ್ತೆ ಮುಂಡೆ ತಂದು' (ಪು.78 ) ಲೆಕ್ಕದ ಪುಸ್ತಕ ಮುಟ್ಟಿ ಹೀಗ್ ಮಾಡ್ ಬೌದೇ' ಎಂಬುದೂ ಅವಳಿಗೆ ಅರ್ಥವಾಗದ ಒಗಟುಗಳಾಗುತ್ತವೆ. ಹೆಂಗಸರಿಗೆ ಸರ್ಕಾರಿ ಲೆಕ್ಕ ಬರೆಯುವುದು, ಲೆಕ್ಕದ ಪುಸ್ತಕ ಮುಟ್ಟುವುದು ನಿಷಿದ್ಧ. ಆದರೆ ನಂಜಮ್ಮ ಸಮಾಜ, ಜಾತಿ, ಸಂಪ್ರದಾಯಗಳು ಹಾಕಿದ ಚೌಕಟ್ಟಿನ ಒಳಗೇ ಜೀವಿಸುತ್ತ ತನ್ನದೇ ಆದ ರೀತಿಯಲ್ಲಿ ಸಾಮಾಜಿಕ, ಸಾಂಪ್ರದಾಯಿಕ ನಿರ್ಬಂಧಗಳನ್ನು, ಮೀರಬೇಕೆಂಬ ಹಟದಿಂದಲ್ಲದೆ ಸಹಜವಾಗಿ ಮತ್ತು ಅನಿವಾರ್ಯತೆಗಳಿಂದಾಗಿ ಮೀರುತ್ತಾಳೆ. ಅತ್ತೆಯ ಬೈಗುಳದ ಅಷ್ಟೋತ್ತರ ಸಹಸ್ರನಾಮದ ಮೂಲಕ ಮನಸ್ಸಿಗೆ ಆಗುವ ಹಿಂಸೆಯನ್ನು ನುಂಗಿಕೊಂಡು ಗಂಡ, ಮಕ್ಕಳ ಹೊಟ್ಟೆಪಾಡಿಗಾಗಿ ಬೇಕಾಗುವ ಸಂಪಾದನೆಯ ಸಾಧ್ಯತೆಗಳ ಅನ್ವೇಷಣೆಯಲ್ಲಿ ಸ್ವಲ್ಪ ಮಟ್ಟಿಗೆ ಕ್ರಾಂತಿಕಾರಿ ಎನಿಸಬಹುದಾದ ಕೆಲಸಗಳನ್ನು ಮಾಡುತ್ತಾಳೆ. ಪೋಟಿಗೆ ಹಣವನ್ನೂ ತನ್ನೊಬ್ಬನ ಊಟಕ್ಕೇ

ಪೋಲುಮಾಡುವ ಸ್ವಾರ್ಥಿಗಂಡನಿಂದ ಕೈತಪ್ಪಿಸಲು ಶೇಕ್‌ದಾರರನ್ನೇ ಭೇಟಿಯಾಗಿ, ಹಣ ನೇರವಾಗಿ ತನ್ನ ಕೈ ಸೇರುವಂತೆ ವ್ಯವಸ್ಥೆಮಾಡುತ್ತಾಳೆ. ಕೋರ್ಟು ಕಛೇರಿಗಳಿಗಾಗಿ ಆಸ್ತಿ ಹಾಳು ಮಾಡಬೇಡವೆಂದು ಅತ್ತೆಗೆ ಬುದ್ಧಿವಾದ ಹೇಳುವ ಸಾಹಸಕ್ಕೆ ಮುಂದಾಗುತ್ತಾಳೆ. ಅಪ್ಪಣ್ಣ ಸಾತು ನಡುವಿನ ಸಮಸ್ಯೆಯ ತೀರ್ಮಾನಕ್ಕಾಗಿ ಗುಟ್ಟಾಗಿ ಶ್ಯಾಮಭಟ್ಟರಿಗೆ ಕಾಗದ ಬರೆದು ಕರೆಸಿ ಅತ್ತೆಯಿಂದ ಹಾದರದವಳೆಂಬ ಆರೋಪಕ್ಕೆ ಗುರಿಯಾಗುತ್ತಾಳೆ. ಏಕಾಂಗಿಯಾಗಿ ತನ್ನ ಮೇಲೆರಗಿದ ಎಲ್ಲ ಸಮಸ್ಯೆಗಳ ಜೊತೆಗೆ ಹೆಣಗಾಡುತ್ತಾಳೆ. ಬದುಕಿನ ನಿರ್ವಹಣೆಯ ಸಮಸ್ಯೆ ಒಂದಾದರೆ, ನೈಸರ್ಗಿಕ ಅಥವಾ ಪ್ರಾಕೃತಿಕ ಪ್ರಕೋಪಗಳಾಗಿ ಕಾಣಿಸಿಕೊಳ್ಳುವ ಬರ, ಪ್ಲೇಗು ಮುಂತಾದವು ನಂಜಮ್ಮ ಮತ್ತು ಸರ್ವಕ್ಕನಂತಹವರನ್ನು ಜರ್ಝರಿತರನ್ನಾಗಿಸುತ್ತವೆ. ಸರ್ವಕ್ಕ ಕೂಡಾ ಗಂಡನ ಸ್ವಾರ್ಥ ದುರಾಸೆ, ಅನ್ಯಾಯಗಳಿಂದ ಮತ್ತು ಕುಟುಂಬದ ಕಡೆಗಿನ ಬೇಜವಾಬ್ದಾರಿತನದಿಂದ ಬೇಸತ್ತವಳು ನಂಜಮ್ಮನೊಂದಿಗೆ ಸ್ಪಂದಿಸುತ್ತಾಳೆ. ಅವಳ ಕಷ್ಟ ಸುಖಗಳಲ್ಲಿ ಭಾಗಿಯಾಗುತ್ತಾಳೆ. ಗಂಡನ ಸ್ವಾರ್ಥ, ಹಣದ ಮೋಹಕ್ಕೆ ಮಗಳನ್ನೇ ಕಾಶಿಂಬಡ್ಡಿಯ ಕಾಮದಾಹಕ್ಕೆ ಬಲಿಯಾಗಿಸುವುದನ್ನು ನೋಡಿಯೂ ಅಸಹಾಯಕಳಾಗಿ ಉಳಿಯುತ್ತಾಳೆ.

ಮಾದೇವಯ್ಯನ ನಿರಂತರ ಸಹಕಾರ, ಸಹಯೋಗದಿಂದ ಮತ್ತು ಕುರುಬರ ಹಳ್ಳಿ ಗುಂಡೇಗೌಡರ ಸಹಾಯದಿಂದ ನಂಜಮ್ಮ ತನ್ನ ಕಷ್ಟಗಳಿಗೆ ಸ್ವಲ್ಪ ಪರಿಹಾರವನ್ನು ಕಂಡು ಕೊಳ್ಳುತ್ತಾಳೆ. ಅವಳ ಜೀವನದ ಅನುಭವಗಳ ಮೂಲಕ ತನ್ನ ಸುತ್ತಲಿನ ಜನರ ಗುಣ ಸ್ವಭಾವಗಳನ್ನು ಅರಿತುಕೊಂಡ ಅವಳಿಗೆ ಜಾತಿ ಜನರಿಗಿಂತ, ಅವರ ಸ್ವಾರ್ಥಕ್ಕಿಂತ ಇನ್ನೊಬ್ಬರ ಕಷ್ಟ, ಸುಖ, ನೋವುಗಳಿಗೆ ಮಾನವೀಯವಾಗಿ ಸ್ಪಂದಿಸುವ ಅನ್ಯ ಜಾತಿಯ ಮಾದೇವಯ್ಯ, ಸರ್ವಕ್ಕ, ನರಸಿ ಇವರುಗಳು ಆಪ್ತರಾಗುತ್ತಾರೆ. ಹಸಿದ ಮಕ್ಕಳಿಗೆ ಉಣಿಸುವ ತಣಿಸುವ, ಮನೆಯಲ್ಲಿ ಒಂದು ಕಾಳು ರಾಗಿಯೂ ಇಲ್ಲದಾದಾಗ ತಾನೇ ಭಿಕ್ಷೆ ಬೇಡಿ ತಂದುದರಲ್ಲಿ ಹಂಚಿಕೊಡುವ ಮಾದೇವಯ್ಯನನ್ನು, ಮತ್ತು ಅಮ್ಮನ ಗುಡಿಯಲ್ಲಿ ಪ್ಲೇಗಿನ ಸೋಂಕಿನಿಂದ ಸಾವು ಬದುಕುಗಳ ಮಧ್ಯೆ ಇರುವಾಗ, ಪ್ಲೇಗಿನ ಸೋಂಕಿನ ಭೀತಿಯನ್ನೂ ಬಿಟ್ಟು ವಿಶ್ವನನ್ನು ಹಗಲೂ ರಾತ್ರಿ ಉಪಚರಿಸುವ, ಆರೈಕೆ ಮಾಡುವ ನರಸಿ, ತಿನ್ನುವುದಕ್ಕೇ ಇಲ್ಲದೆ ಕ್ಷಾಮದ ಬವಣೆಯಿಂದ ತತ್ತರಿಸಿದಾಗ, ಶೆತ್ತೆಗಡ್ಡೆ ಆಯಲು ಸೂಚಿಸಿ, ತಾನೂ ಶೆತ್ತೆ ಗಡ್ಡೆ ಸಂಗ್ರಹಕ್ಕೆಂದು ಬರುವ, ಕೈಲಿ ಕಾಸಿಲ್ಲದಿದ್ದಾಗ ಮುತ್ತುಗದ ಎಲೆ ಹಚ್ಚಲು ಸೂಚಿಸಿ ಆದಾಯಕ್ಕೊಂದು ದಾರಿ ಮಾಡುವ ಮತ್ತು ಅವಳೊಂದಿಗೇ ಎಲೆ ಆಯಲು, (ಸಂಗ್ರಹಿಸಲು) ಪಿಂಡಿಗಳನ್ನು ಮಾರಾಟ ಮಾಡಲು ಜೊತೆಯಾಗಿ ಹೋಗಿ ಸಹಕರಿಸುವ ಸರ್ವಕ್ಕ, ಇವರುಗಳನ್ನು ನೋಡಿದಾಗ ನಂಜಮ್ಮನಿಗೆ ಜಾತಿ ಮುಖ್ಯವೆನಿಸುವುದಿಲ್ಲ. ಈಗಾಗಲೇ ಊರವರ ದೃಷ್ಟಿಯಲ್ಲಿ ನಂಜಮ್ಮ ಸಂಪ್ರದಾಯ ವಿರೋಧಿ. ಅವಳಿಗೆ ಮಡಿ ಮೈಲಿಗೆ, ಜಾತಿ ಪಾತಿ ಯಾವುದೂ ಇಲ್ಲದವಳು. ಮುಟ್ಟನ್ನೂ ಮುಚ್ಚಿಟ್ಟು ಅಡಿಗೆ ಮಾಡುತ್ತಾಳೆಂಬ ಗುಮಾನಿ. ಅದಕ್ಕೇ ತುಂಗಮ್ಮ ಇನ್ನು ಮುಂದೆ ನಂಜಮ್ಮನ ಮನೆಗೆ ಹೋಗಬಾರದೆಂದು ನಿರ್ಧರಿಸುತ್ತಾಳೆ. ನಂಜಮ್ಮ ಇದ್ಯಾವುದಕ್ಕೂ ಹಿಂಜರಿಯುವುದಿಲ್ಲ. ಮಗಳು ಪಾರ್ವತಿ ಮದುವೆಗೆ ಮೊದಲೇ ಮೈನೆರೆದರೂ, ಅಧೀರಳಾಗದೆ

ಅದನ್ನು ಮುಚ್ಚಿಡುತ್ತಾಳೆ. ಅವಕಾಶ ಸಿಕ್ಕರೆ ದಿಟ್ಟೆದೆಯಿಂದ ಸಮಾಜ, ಸಮುದಾಯವನ್ನೇ ಎದುರಿಸಿ ನಿಲ್ಲುತ್ತಾಳೆ. ಬ್ರಾಹ್ಮಣ್ಯವನ್ನೇ ಬಂಡವಾಳವಾಗಿಸಿಕೊಂಡು ಮಾತು ಮಾತಿಗೂ ಧರ್ಮಶಾಸ್ತ್ರಗಳನ್ನು ಮುಂದಿಡುತ್ತಾ, ಜಾತಿ, ಧರ್ಮ ರಕ್ಷಕರೆಂದು ಬೀಗಿ ಕೊಳ್ಳುತ್ತಾ ದಂಡದ ರೂಪದಲ್ಲಿ ಹಣ ಗಳಿಸುತ್ತಾ ಬಂದಿರುವ ಅಯ್ಯಾಶಾಸ್ತ್ರಿ, ಅಣ್ಣಾಜೋಯಿಸರನ್ನೂ ಎದುರು ಹಾಕಿಕೊಳ್ಳಲು ಹಿಂತೆಗೆಯುವುದಿಲ್ಲ. ಅಪ್ಪಣ್ಣ, ಸಾತುವಿನ ನಡುವೆ ಘರ್ಷಣೆಯಾಗಿ, ಗಂಗಮ್ಮನ ಆದೇಶದಂತೆ ಸಾತುವಿನ ತಾಳಿಯನ್ನು ಅಪ್ಪಣ್ಣ ಕಿತ್ತು ಬಿಸಾಡುವುದರ ಮೂಲಕ ಇವರಿಬ್ಬರ ಮದುವೆಯ ಬಂಧ ಮುರಿದು ಬೀಳುತ್ತದೆ. ಸಾತು ಮತ್ತು ಅವಳ ತಾಯಿ ಅಪ್ಪಣ್ಣನ ಮನೆಯಿಂದ ಹೊರದೂಡಲ್ಪಟ್ಟಾಗ ನಂಜಮ್ಮ ಸಾತುವಿನ ಮೇಲಿದ್ದ ತನ್ನ ಅಸಮಾಧಾನವನ್ನೂ ಮರೆತು ಕನಿಕರದಿಂದ ತನ್ನ ಮನೆಯಲ್ಲಿರಲು ಅವಕಾಶ ಕೊಟ್ಟಿದ್ದಕ್ಕಾಗಿ ದೊಡ್ಡ ಹಗರಣವಾಗಿ ನಂಜಮ್ಮನಿಗೆ ದಂಡ ವಿಧಿಸಲಾಗುತ್ತದೆ. 'ಮಾಂಗಲ್ಯ ಹೋದ ಹೆಂಗಸು ವಿಧವೆಗೆ ಸಮಾನ. ಆದರೆ ಗಂಡ ಇದ್ರೂ ವಿಧವೆಯಾಗೂದು ಹೇಗೆ? ಆದ್ದರಿಂದ ಅವಳು ಇದ್ರೂ ಸತ್ತ ಸಮಾನ. ಅಂಥೋಳ ಮುಖದರ್ಶನ ಸಹ ಮಾಡಬಾರ್ದು. ಅಂತೋಳನ್ನ ಮನೆಗೆ ಸೇರಿಸಿ ನೀವು ತಪ್ಪು ಮಾಡಿದೀರಿ. ಪ್ರಾಯಶ್ಚಿತ್ತವಾಗಬೇಕು. ತಪ್ಪುದಂಡ ಕೊಡಬೇಕು' ಎನ್ನುವ ಅಣ್ಣಾಜೋಯಿಸರ ಮಾತಿಗೆ ನಂಜಮ್ಮ ತಿರುಗಿ ಬಿದ್ದಳು. ಪರಿಣಾಮ ಏನಾದರಾಗಲೀ, ಆಗುತ್ತಿರುವ ಅನ್ಯಾಯವನ್ನು ನೋಡಿ ಸಹಿಸಿಕೊಳ್ಳುವುದು ಅವಳಿಗೆ ಸರಿ ಎನಿಸಲಿಲ್ಲ. ''ತಾಳಿ ಕಿತ್ಕೊಂಡೋರು ಅಪ್ಪಣ್ಣಯ್ಯ. ಹೆಂಡ್ತಿ ತಾಳಿ ಕಿತ್ಕಳೂ ಅಧಿಕಾರ ಶಾಸ್ತ್ರದಲ್ಲಿ ಅವರಿಗಿದೆಯೇ? ದಂಡಗಿಂಡ ಹಾಕ್ ಬೇಕಾಗಿದ್ರೆ ಅವ್ರಿಗೆ ಹಾಕಿ. ಇನ್ನು ಮನೆ ಸುಟ್ಟು ಹೋಗಿ ಹೆಂಗಸರು ಬೀದಿ ಪಾಲಾಗಿದ್ದಾಗ ಮನೆಗೆ ಸೇರುಸ್ದೆ ನಾವೇನು ಮಾಡಬೇಕಾಗಿತ್ತು? ಈ ಕಷ್ಟ ಕಾಲದಲ್ಲಿ ಒಪ್ಪತ್ತು ಸಹಾಯ ಮಾಡ ಕೂಡದು ಅಂತ ಬರೆದಿದೆಯೇ ನಿಮ್ಮ ಧರ್ಮಶಾಸ್ತ್ರದಲ್ಲಿ (ಪುಟ-18) -ಎಂದು ಪ್ರತಿಭಟಿಸಿ ಕೇಳಿದ ಅವಳ ಪ್ರಶ್ನೆಗೆ ಧರ್ಮ ಪಾಲಕರೆನಿಸಿಕೊಂಡ ಅಯ್ಯಾಶಾಸ್ತ್ರಿ, ಅಣ್ಣಾಜೋಯಿಸ ತಬ್ಬಿಬ್ಬಾಗಿ ನಿಲ್ಲುವಂತಾಗುತ್ತಾರೆ.

ನಂಜಮ್ಮ ಎಂತಹ ಪ್ರತಿಕೂಲ ಪರಿಸ್ಥಿತಿಯಲ್ಲೂ ಅಸಹಾಯಕತೆಯಿಂದ ಮುರಿದು ಬೀಳುವುದಿಲ್ಲ. ಪ್ಲೇಗು, ಕಜ್ಜಿ ಇತ್ಯಾದಿಗಳಿಗೆ ಅಮ್ಮ, ನಾಗಪ್ಪ ದೇವರುಗಳೇ ಕಾರಣವಾದ್ದರಿಂದ ಅವರನ್ನು ಸಾಂತ್ವನ ಗೊಳಿಸಲು ಹರಕೆ ಪೂಜೆಗಳೇ ಬೇಕೆಂಬ ಊರಿನವರ ನಂಬಿಕೆ ನಡುವೆಯೂ ನಂಜಮ್ಮ ಚುಚ್ಚು ಮದ್ದನ್ನು ಮಾಡಿಸಿ ರಾಮಣ್ಣನ ಕಜ್ಜಿಯನ್ನು, ವಾಸಿಮಾಡಿಸುತ್ತಾಳೆ. ಶೆತ್ತೆಗಡ್ಡೆ ಹಾಳು ಮೂಳು ತಿಂದುದರ ಪರಿಣಾಮವಾಗಿ ಬಂದದ್ದು ಈ ಕಜ್ಜಿ, ತುರಿಕೆಯ ಕಾಯಿಲೆ ಎಂಬುದನ್ನು ಅರಿಯುತ್ತಾಳೆ. ಶೇಕ್‌ದಾರರೇ ಗುರುತಿಸುವಂತೆ ನಂಜಮ್ಮನಲ್ಲಿ ಅದ್ಭುತ ಸಾಮರ್ಥ್ಯವಿದೆ; ತಿಳಿವಳಿಕೆ ಇದೆ. ಗುಂಡೇಗೌಡರಿಗಂತೂ ನಂಜಮ್ಮನೆಂದರೆ ಮೆಚ್ಚಿಗೆ ಅಭಿಮಾನಗಳು. ಆದ್ದರಿಂದಲೇ ಹೃದಯ ತುಂಬಿ ಬಂದು 'ನಿಂಗೆ ದಿವಾನಿಕೆ ಮಾಡೋ ತಲೆ ಐತೆ. ಶೀಮೀ, ಆಳ್‌ಬ್ಯೆದು' ಎಂದು ಮುಕ್ತವಾಗಿ ಪ್ರಶಂಸಿಸುತ್ತಾನೆ.

ನಂಜಮ್ಮನ ತಾಳ್ಮೆ, ಜಾಣ್ಮೆ, ವಿವೇಕ, ಮನುಷ್ಯರನ್ನು ಅರ್ಥ ಮಾಡಿಕೊಳ್ಳುವ, ಪರರ ಕಷ್ಟಗಳಿಗೆ ಸಂವೇದಿಸುವ, ಸ್ವತಂತ್ರವಾಗಿ, ಸ್ವಾವಲಂಬಿಯಾಗಿ ಬಾಳಬೇಕೆನ್ನುವ, ಅನ್ಯಾಯಯವನ್ನು

ಪ್ರತಿಭಟಿಸುವ, ತನ್ನವರೂ ತನ್ನ ಸುತ್ತಲಿನವರೂ ಸುಖವಾಗಿ ಬಾಳ ಬಯಸುವ- ಎಲ್ಲ ಗುಣಗಳಿಂದ ಎಲ್ಲರಿಗೂ ಮೆಚ್ಚುಗೆಯಾಗುತ್ತಾಳೆ. ಆದರೆ ಬದುಕಿನ ಸೆಣಸಾಟದಲ್ಲಿ ವೈಯಕ್ತಿಕ ಪ್ರಯತ್ನಗಳು ಏನೇ ಆದರೂ ಮನುಷ್ಯ ಶಕ್ತಿಗಿಂತ ಮೀರಿದ ಯಾವುದೋ ನಿಗೂಢ ಶಕ್ತಿಯೊಂದರ ಕೈವಾಡವಿರುವುದರ ಸಾಧ್ಯತೆಯ ಅನುಮಾನ ತನ್ನಿಬ್ಬರ ಮಕ್ಕಳ ಸಾವು ಮತ್ತು ತನ್ನ ಸಾವಿನ ಕ್ಷಣಗಳಲ್ಲಿ 'ಅದ್ಯಾಕೆ ಹೀಗೆಲ್ಲ ಆಗುತ್ತೆ ಅಯ್ಯಾರೇ?'' ಎಂದು ಕೇಳುವ ಪ್ರಶ್ನೆಯ ಮೂಲಕ ಸ್ಪಷ್ಟವಾಗುತ್ತದೆ. ತನ್ನವರಲ್ಲಿ ತನ್ನ ಕುಟುಂಬದಲ್ಲಿ ತಾನೆಷ್ಟೇ ಪ್ರಯತ್ನಿಸಿದರೂ ಬದಲಾವಣೆಯನ್ನು ತರಲು ಸಾಧ್ಯವಾಗುವುದಿಲ್ಲ. ನಂಜಮ್ಮ ಬದುಕಿದ ಸಮಾಜ ಇನ್ನೂ ಹೊಸ ವಿಚಾರಗಳಿಗೆ, ಮಾನವೀಯ ಮೌಲ್ಯಗಳಿಗೆ ತೆರೆದುಕೊಳ್ಳುವ ಸ್ಥಿತಿಯನ್ನು ತಲುಪಿಲ್ಲ. ಇಲ್ಲಿನ ಪ್ರತಿಯೊಬ್ಬರೂ, ಕೆಲವರನ್ನು ಹೊರತು ಪಡಿಸಿ ತಮ್ಮ ತಮ್ಮ ವೈಯಕ್ತಿಕ ಸ್ವಾರ್ಥ ಪ್ರತಿಷ್ಠೆ ಅಹಮಿಕೆಗಳಿಗೇ ಬದ್ಧರು. ಇಂತಹ ಪುರುಷ ಸಮುದಾಯದ ನಡುವೆ ಜೀವಿಸುವ ಹೆಂಗಸರಂತೂ ಇನ್ನೂ ತಮಗೆ ವಿಧಿಸಿದ ಬದುಕನ್ನು ತೃಪ್ತಿ, ಸಮಾಧಾನಗಳಿಂದ ಸ್ವೀಕರಿಸುವಲ್ಲಿಯೇ ಸಾರ್ಥಕ್ಯವನ್ನು ಕಂಡು ಕೊಂಡಿದ್ದಾರೆ.

ಆದರೆ ಇಲ್ಲಿ ಕಾದಂಬರಿಯಲ್ಲಿ ಕಾಣುವ ಪ್ರಮುಖ ಸ್ತ್ರೀ ಪಾತ್ರಗಳು ಯಾವುದೇ ಸಂದರ್ಭದಲ್ಲಿಯೂ ಅಸಹಾಯಕರಂತೆಯೂ, ಹತಾಶಗೊಂಡಂತೆಯೂ ಕಾಣಿಸಿಕೊಳ್ಳುವುದಿಲ್ಲ. ತಮ್ಮ ಮೇಲೆ ಎರಗುವ ಆಘಾತಗಳನ್ನು, ಆರೋಪಗಳನ್ನು ಸ್ವತಃ ತಾವೇ ಪ್ರತಿರೋಧಿಸಬಲ್ಲರು; ಪ್ರತಿಭಟಿಸಬಲ್ಲರು. ಒಂದೊಂದು ಸ್ತ್ರೀಪಾತ್ರದ ನಿಲುವು, ಧೋರಣೆಗಳು, ಮನಃ ಸ್ಥಿತಿಗಳಲ್ಲಿನ ವೈವಿಧ್ಯಗಳಿಂದ ಸ್ತ್ರೀ ಸಂಸ್ಕೃತಿಯ ವಿಭಿನ್ನ ಮುಖಗಳ ದರ್ಶನವಾಗುತ್ತದೆ, ಈ ಕಾದಂಬರಿಯಲ್ಲಿ.

ಭೈರಪ್ಪನವರ ಈ ಗೃಹಭಂಗ ಕಾದಂಬರಿಯಲ್ಲಿ ಮೌಲ್ಯ ಚಿಂತನೆಯಾಗಲೀ, ಬೌದ್ಧಿಕ ಕಸರತ್ತಾಗಲೀ, ಸಂದೇಶವೊಂದನ್ನು ನೀಡಬೇಕೆಂಬ ಆಶಯವಾಗಲೀ ಇಲ್ಲ. ಅತ್ಯಂತ ಸಹಜವೂ, ವಾಸ್ತವಿಕವೂ ಆದ ನ್ಯಾಚುರಲ್ ಫೋಟೋಗ್ರಫಿಯಂತೆ, ಕಪ್ಪು ಬಿಳುಪಿನ ಸಹಜ ಛಾಯಾ ಚಿತ್ರದಂತಹ ಚಿತ್ರಣವನ್ನೇ ಕಾಣುತ್ತೇವೆ. ಕಾದಂಬರಿಯ ವಿಶಾಲಭಿತ್ತಿಯಲ್ಲಿ ಮನುಷ್ಯ ಲೋಕದ ವೈಚಿತ್ರ್ಯಗಳು, ವೈವಿಧ್ಯಮಯ ಚಿತ್ತವೃತ್ತಿಗಳು, ಸಂಸ್ಕಾರ ಜನ್ಯವಾದ ಗುಣ ಸ್ವಭಾವಗಳು ವಿಸ್ತೃತವಾಗಿ ಮೂಡಿ ಬಂದಿವೆ.

ಬಂಡಾಯ, ಸ್ತ್ರೀವಾದ ಇತ್ಯಾದಿ ಸೋಗುಗಳು ಇಲ್ಲದೆಯೂ, ಎಂಬತ್ತರ ದಶಕದಲ್ಲಿ ಹೆಚ್ಚಾಗಿ ಕೇಳಿಬಂದ ಸ್ತ್ರೀವಾದದ ತಾತ್ವಿಕ ನೆಲೆಗಳಿಂದಲೂ ಮತ್ತು ಸ್ತ್ರೀವಾದಿ ಚಿಂತನೆಯ ಹಿನ್ನೆಲೆಯಲ್ಲಿಯೂ ಈ ಕಾದಂಬರಿಯ ಸ್ತ್ರೀ ಪಾತ್ರಗಳು ಅಧ್ಯಯನ ಯೋಗ್ಯವಾಗಿವೆ. ಕಾದಂಬರಿಯ ಕಾಲಕ್ಕಿಂತ ಮುಂದುವರೆದ ಮತ್ತು ಸಮಕಾಲೀನ ದೃಷ್ಟಿಗೂ ಪ್ರಸ್ತುತವೆನಿಸುವ ಸ್ತ್ರೀ ಮಾದರಿಗಳು ಇಲ್ಲಿ ಕಾಣಿಸಿಕೊಳ್ಳುತ್ತವೆ. ಇವತ್ತಿನ ಸ್ತ್ರೀವಾದಿ ಬರಹಗಳಲ್ಲಿ ಕಾಣಿಸಿಕೊಳ್ಳುವ, ಕಾಣಿಸಿಕೊಳ್ಳಬೇಕೆಂದು ನಿರೀಕ್ಷಿಸುವ ರೀತಿಯಲ್ಲಿ ಮೂಡಿ ನಿಂತಿರುವ 'ನಂಜಮ್ಮ' ಆಧುನಿಕ ಸ್ತ್ರೀ ಸಮುದಾಯಕ್ಕೆ ಪ್ರತೀಕವಾಗುತ್ತಾಳೆ. ಧೈರ್ಯ, ಆತ್ಮ ವಿಶ್ವಾಸ, ವಿವೇಕಗಳು ನಂಜಮ್ಮನನ್ನು ಕೊನೆಯುಸಿರೆಳೆಯುವ ವರೆಗೂ ನಡೆಸುತ್ತವೆ. ಹೋರಾಟಕ್ಕೆ ಒತ್ತಾಸೆ ನೀಡುತ್ತವೆ.



# ಡಾ. ಯು. ಆರ್. ಅನಂತಮೂರ್ತಿ ಅವರ ಎರಡು ಕಾದಂಬರಿಗಳು 'ಭವ' ಮತ್ತು 'ದಿವ್ಯ' ಓದಿನ ಗ್ರಹಿಕೆಯಲ್ಲಿ

ಸಮಕಾಲೀನ ಸಾಹಿತ್ಯ ಸಂದರ್ಭದಲ್ಲಿ ನವ್ಯದ ಮುಂಚೂಣಿಯಲ್ಲಿನ ಬರಹಗಾರರಲ್ಲಿ ಮತ್ತು ನಮ್ಮ ಸಾಂಸ್ಕೃತಿಕ ಚಿಂತಕರಲ್ಲಿ ಅತ್ಯಂತ ಪ್ರಮುಖವಾದ ಹೆಸರು ಅನಂತಮೂರ್ತಿ ಅವರದು. ಅವರ ಮೊದಲ ಕಾದಂಬರಿ 'ಸಂಸ್ಕಾರ' ದ ಪ್ರವೇಶದೊಂದಿಗೆ, ಅವರ ಬಗ್ಗೆ ಸಹೃದಯರಲ್ಲಿ, ವಿಮರ್ಶಕರಲ್ಲಿ ಒಮ್ಮೆಲೇ ಭರವಸೆಯ ನಿರೀಕ್ಷೆಗಳೂ ಕುತೂಹಲಗಳೂ ಹುಟ್ಟಿಕೊಂಡವು. 'ಸಂಸ್ಕಾರ'ದ ನಂತರ ಬಂದ 'ಭಾರತೀಪುರ' 'ಅವಸ್ಥೆ' ಕಾದಂಬರಿಗಳೂ ಕನ್ನಡ ಸಾಹಿತ್ಯ ಜಗತ್ತಿನಲ್ಲಿ ಹೆಚ್ಚಿನ ಚರ್ಚೆಗೆ ಒಳಗಾದವು. ಹಾಗಾಗಿ ಕೆಲವು ವರ್ಷಗಳ ವಿರಾಮದ ನಂತರ 1994 ರಲ್ಲಿ ಹೊರಬಂದ 'ಭವ'ವೂ ಅನೇಕ ನಿರೀಕ್ಷೆಗಳನ್ನು ಹುಟ್ಟುಹಾಕಿತು. ಕೊಯಿರಾಲ ಫೌಂಡೇಶನ್ ಸಹಕಾರದಿಂದ ಕೇವಲ ಹನ್ನೆರಡು ದಿನಗಳ 'ಏಕಾಂತ'ದಲ್ಲಿ, ಧ್ಯಾನಸ್ಥ ಸ್ಥಿತಿಯಲ್ಲಿ ಈ 'ಭವ' ಹುಟ್ಟಿತು. ಮೊದಲಿನ ಕಾದಂಬರಿಗಳಿಗಿಂತ ಭಿನ್ನವಾದ ವೈಚಾರಿಕ, ತಾತ್ವಿಕ ಚಿಂತನೆಯ ನೆಲೆಯಲ್ಲಿ ಈ ಕಾದಂಬರಿ ಏನು ಹೇಳ ಹೊರಟಿದೆ ಅನ್ನುವುದೂ ಮುಖ್ಯ ಜಿಜ್ಞಾಸೆಯಾಗಿದೆ. ಈ ಕಾದಂಬರಿ 'ಭವ'ವನ್ನು ಮನುಷ್ಯ ಬದುಕಿನ ಸಂದರ್ಭದಲ್ಲಿ ಹೇಗೆ ಗ್ರಹಿಸಿದೆ ಅನ್ನುವುದು ಮುಂದಿನ ವಿಶ್ಲೇಷಣೆಗೆ ಪ್ರಮುಖ ಹಿನ್ನೆಲೆಯಾಗಿದೆ. 'ಭವ' ಎನ್ನುವುದನ್ನು ಸಾಮಾನ್ಯವಾಗಿ ಈ, ಪ್ರಪಂಚ, ಸಂಸಾರ' ಎಂಬೆಲ್ಲ ಅರ್ಥಗಳಲ್ಲಿ ಗ್ರಹಿಸಲಾಗಿದೆ. ಹುಟ್ಟಿದ ಎಲ್ಲ ಮನುಷ್ಯ ಜೀವಿಗಳ ಹಂಬಲ, ಆಸೆಗಳು ಈ 'ಭವ'ದಿಂದ ಬಿಡುಗಡೆ. ಆದರೆ ಮನುಷ್ಯವರ್ಗ ಈ 'ಭವ' ಕ್ಕೆ ಎಷ್ಟು ಗಾಢವಾಗಿ ಅಂಟಿಕೊಂಡು ಬಿಟ್ಟಿರುತ್ತದೆ ಎಂದರೆ ಅದನ್ನು ಬೇರ್ಪಡಿಸಿ ಅದರಿಂದಾಚೆಗೆ ಬರುವುದು ಎಂತಹ ಮಹದ್ಪ್ರಯತ್ನಗಳಿಂದಲೂ ಸಾಧ್ಯವಾಗದು. ದೇಹಕ್ಕಂಟಿದ ಚರ್ಮವನ್ನು ಸುಲಿಯುವುದು ಊಹೆಗೂ ಅಸಾಧ್ಯವಾದ ಎಂತಹ ಯಾತನೆಯೋ ಅದಕ್ಕೂ ಮೀರಿದ ಯಾತನಾಕಾರಕ ಸ್ಥಿತಿ 'ಭವ' ದಿಂದ ನಮ್ಮನ್ನು ಬೇರ್ಪಡಿಸಿಕೊಳ್ಳುವುದು. ಆದರೂ ಬಿಡುಗಡೆಯ ಪ್ರಯತ್ನಗಳು ನಡೆಯುವುದಂತೂ ಸಾಮಾನ್ಯ. ಕಾವ್ಯ ಸಂಗೀತ, ಚಿತ್ರ, ಭಕ್ತಿ ಮುಂತಾದವುಗಳಲ್ಲಿನ ತನ್ಮಯತೆ ಕೆಲ ಕ್ಷಣಗಳ ಮಟ್ಟಿಗಾದರೂ ಬಿಡುಗಡೆಯನ್ನು ಸಾಧ್ಯವಾಗಿಸುತ್ತದೆ. ಆದರೆ ಚಿರಂತನ ಬಿಡುಗಡೆಗೆ ಬಯಸುವಲ್ಲಿ

ಅದಕ್ಕೆ ನಿರ್ದಿಷ್ಟವಾದ ಒಂದು ಮನೋಭೂಮಿಕೆ, ಸಿದ್ಧತೆಗಳು ಅನಿವಾರ್ಯವಾಗುತ್ತವೆ. ಬಿಡುಗಡೆಗೆ ಎಳಸುವ ಮನುಷ್ಯರು ಅಥವಾ ವ್ಯಕ್ತಿಗಳು ಹಿಡಿಯುವ ಹಾದಿಗಳು ಅವರವರ ಗುಣ ಸ್ವಭಾವ ಇತ್ಯಾದಿಯಾಗಿ ವೈಯ್ಯಕ್ತಿಕ ನೆಲೆಗಳನ್ನು ಅವಲಂಬಿಸಿರುತ್ತವೆ.

'ಭವ'ದ ಅರ್ಥ ವಿವರಣೆಗೆ ಹೊರಟಾಗ ಪು. ತಿ. ನ ಅವರು ಕೊಡುವ ಪರಿಭಾಷೆಯನ್ನು ಗಮನಿಸುವುದು ಮುಖ್ಯವಾಗುತ್ತದೆ. 'ರಸಪ್ರಜ್ಞೆ'ಯ ವಿಚಾರವಾಗಿ ಹೇಳುವಾಗ ಸಾಂದರ್ಭಿಕವಾಗಿ 'ಭವ' 'ಭವಜಾಗರ' ಇತ್ಯಾದಿ ಪರಿಕಲ್ಪನೆಗಳಿಗೆ ತುಂಬ ಸಮರ್ಥವಾದ ವಿವರಣೆಯನ್ನು ನೀಡಿದ್ದಾರೆ. ಮಾನವನಲ್ಲಿ ವರ್ತಿಸುವ 'ಕಾಮ'ವನ್ನು ಸ್ಥೂಲವಾಗಿ ಎರಡು ವರ್ಗಗಳಲ್ಲಿ ಗುರುತಿಸುತ್ತಾರೆ, 'ಜೀವಕಾಮ' 'ಆತ್ಮಕಾಮ' ಎಂದು. ಜೀವಕಾಮ ಪ್ರಕ್ರಿಯೆಯಲ್ಲಿ, ''ನಾನು ಬದುಕಬೇಕು ಹೇಗಾದರೂ ಮಾಡಿ ಬದುಕ ಬೇಕು; ಆದಷ್ಟು ನೆಮ್ಮದಿಯಾಗಿ, ಚೆನ್ನಾಗಿ ಬದುಕಬೇಕು, ನನ್ನೀ ಬದುಕು ಸಂತಾನದ ಮೂಲಕ ಸಾತತ್ಯವನ್ನು ಗಳಿಸಬೇಕು; ಅದೂ ಕಾರ್ಪಣ್ಯಕ್ಕೆ ಈಡಾಗಬಾರದು, ಚೆನ್ನಾಗಿಯೆ ಬಾಳಬೇಕು'' ಎಂಬ ಹಂಬಲ. ತುಡಿತಗಳು ಇರುತ್ತವೆ.

ಜೀವಕಾಮ ಸದಾ ಜಾಗೃತವಾಗಿ, ಕ್ರಿಯಾಶೀಲವಾಗಿಇರುವ ಸ್ಥಿತಿಯನ್ನು ಭವವೆಂದು ಗುರುತಿಸುತ್ತಾರೆ, ಪು.ತಿ.ನ. ವ್ಯಕ್ತಿಗೆ ಅಥವಾ ಮನುಷ್ಯನಿಗೆ 'ಭವಸಾಗರ'ವೆಂಬ ಸ್ಥಿತಿಯೊಂದು ಇರುತ್ತದೆ. ಈ ಸ್ಥಿತಿಯಲ್ಲಿ ತಮ್ಮ ಯೋಗಕ್ಷೇಮ ಚಿಂತನೆ, ಅಹಂಕಾರ, ಮಮಕಾರಗಳ ಸೀಮಿತ ಪರಿಧಿಯಲ್ಲಿ ನಿರಂತರವಾಗಿ ನಡೆಯುತ್ತಿರುತ್ತದೆ. ಇದನ್ನೇ 'ಭವಾವಸ್ಥೆ' ಎಂದು ಅರ್ಥೈಸಬಹುದು. ಈ ಅವಸ್ಥೆಯಲ್ಲಿ ನಮ್ಮನ್ನು ಕ್ಷಣಕ್ಷಣವೂ ಕಾಡುವ ಅಹಂಕಾರ ಅರಿಷಡ್ವರ್ಗಾದಿಗಳನ್ನು ಹದ್ದು ಬಸ್ತಿನಲ್ಲಿ ಇರಿಸಿಕೊಂಡಲ್ಲದೆ 'ಭವ'ವನ್ನು ಮೀರಲು, 'ಭವ'ದಿಂದ ಬಿಡುಗಡೆ ಹೊಂದಲು ಸಾಧ್ಯವಾಗುವುದಿಲ್ಲ. 'ಭವ'ವನ್ನು ಮೀರಿ ನಿರ್ಮಾಣದತ್ತ, ವೈರಾಗ್ಯದತ್ತ ಸಾಗಬೇಕೆನ್ನುವವರಿಗೆ ಮೊದಲು ಐಹಿಕ ಕಾಮನೆಗಳ ನಡುವಿದ್ದೂ ಅದನ್ನು ಮೀರಿ ಗೆಲ್ಲುವ, ನಿಲ್ಲುವ ಮನೋಭೂಮಿಕೆ ಪೂರ್ವ ಸಿದ್ಧತೆಗಳು ಬೇಕಾಗುತ್ತವೆ. ಮೀರಿ ಗೆಲ್ಲುವುದೆಂದರೆ ಸಂಪೂರ್ಣವಾಗಿ ದೂರವಿರಬೇಕೆಂದಾಗಲೀ, ಮೂಗು ಮುಚ್ಚಿಕೊಂಡು ಪಲಾಯನ ಮಾಡಿ, ಕಾಡಿನ ನಿರ್ಜನ ಪ್ರದೇಶಗಳಲ್ಲಿ ಅವಿತು ಅಡಗಿ ಹೋಗುವುದೆಂದಾಗಲೀ ಅಲ್ಲ! ಮನುಷ್ಯನ ಸಾರ್ಥಕ ಬಾಳು ಇರುವುದು ಭವನಿಮಜ್ಜನ ಚಾತುರ್ಯ, ಲಘಿಮಾಕೌಶಲಗಳಲ್ಲಿ! ಭವದೊಳಗಿದ್ದೂ 'ಭವ'ದ ಆಚೆ ಜಿಗಿಯಬಲ್ಲ ಚೆಂಡಿನ ಸ್ಥಿತಿ ಮತ್ತು ತಾವರೆಯೆಲೆಯ ಸ್ಥಿತಿಗಳಲ್ಲಿ! ಈ ನೆಲೆಯನ್ನು ರೂಢಿಸಿಕೊಂಡು 'ಭವ'ದ ಬದುಕನ್ನು ಅಪ್ಪಿಕೊಂಡರೆ ಯಾರೂ ಬೇಡವೆನ್ನುವುದಿಲ್ಲ.

ಭವಸ್ತರದಲ್ಲಿನ ಮನುಷ್ಯರು ಕಾಮ, ಕ್ರೋಧ, ಲೋಭ, ಮೋಹ, ಭ್ರಮೆ, ಉದ್ರೇಕ, ಅಸೂಯೆ,ಅಹಂಕಾರ, ದುಃಖಾದಿ ಚಿತ್ತಸ್ಥಿತಿಗಳ ಕಪಿಮುಷ್ಠಿಯಲ್ಲಿ ಸಿಲುಕಿಕೊಂಡಿರುತ್ತಾರೆ. ಅಲ್ಲದೆ ಆಶೆ, ನಿರಾಶೆಗಳಿಂದ ತಾಪಕ್ಕೀಡಾದ ಕೃಪಣಚೇತನರಾಗಿರುತ್ತಾರೆ. ತಾವೂ ಬಳಲುತ್ತಾ ತಮ್ಮ ಸುತ್ತಲಿನವರನ್ನೂ ಬಳಲಿಸುತ್ತಾರೆ. ನಿಜವಾಗಿಯೂ 'ಭವ'ದಿಂದ ಬಿಡುಗಡೆ ಬಯಸುವ ಚೇತನಗಳಿಗೆ ಗೀತೆಯಲ್ಲಿನ ಒಂದು ಎಚ್ಚರಿಕೆಯ ಮಾತಿದೆ.

"ಇಂದ್ರಿಯಸ್ಯೇಂದ್ರಿಯ ಸ್ಯಾರ್ಥೇರಾಗದ್ವೇಷೌ ವ್ಯವಸ್ಥಿತೌ
ತಯೋರ್ನವಶಮಾಗಚ್ಛೇತ್ ತೌಹ್ಯಸ್ಯ ಪರಿಪಂಥಿಸೌ
ರಾಗದ್ವೇಷ ವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್
ಆತ್ಮವಶ್ಯೇರ್ವಿಧೇಯಾತ್ಮಾ ಸ ಶಾಂತಿಮಧಿಗಚ್ಛತಿ"

[ಇಂದ್ರಿಯ ಇಂದ್ರಿಯಗಳಿಗೆ ತಮ್ಮ ವಿಷಯಗಳಲ್ಲಿ ರಾಗವೋ ದ್ವೇಷವೊ ಏರ್ಪಟ್ಟು ಹೋಗಿದೆ. ಅವುಗಳ ಕೈಗೆ ನಾವು ಸಿಕ್ಕಿ ಹಾಕಿಕೊಳ್ಳಬಾರದು. ಅವು ನಮ್ಮನ್ನು ದಾರಿಗೆಡಿಸುತ್ತವೆ... ರಾಗ, ದ್ವೇಷಗಳನ್ನು ಒತ್ತಟ್ಟಿಗಿಟ್ಟು ತಾನು ಹೇಳಿದಂತೆ ಕೇಳುವ ಇಂದ್ರಿಯಗಳ ಮೂಲಕ ಯಾವನು ವಿಷಯಗಳಲ್ಲಿ ಸಂಚರಿಸಬಲ್ಲನೋ ಆತ ಮನಸ್ಸಮಾಧಾನವನ್ನು ಹೊಂದಬಲ್ಲ]

ಮೇಲಿನ ಈ ಎಲ್ಲ ವಿವರಣೆಗಳ ಹಿನ್ನೆಲೆಯಲ್ಲಿ ಗಮನಿಸಿದಾಗ, ಮನಸ್ಸಮಾಧಾನ, ಬಿಡುಗಡೆಗಳು ನಾವು ನಮ್ಮನ್ನು ಹೇಗೆ ನಿಯಂತ್ರಿಸಿ ರೂಪಿಸಿ ಕೊಳ್ಳುತ್ತೇವೆಯೋ. ಯಾವ ಹಾದಿಯಲ್ಲಿ ಮನಸ್ಸನ್ನು ಹರಿಯ ಬಿಡುತ್ತೇವೆಯೋ- ಎನ್ನುವುದರ ಮೇಲೆ ನಿಂತಿರುತ್ತವೆ. ಈ ಕಾದಂಬರಿ 'ಭವ' ದ ಪಾತ್ರಗಳು ಮೂರು ತಲೆಮಾರಿಗೆ ಸೇರಿದವರಾದರೂ ಅವರನ್ನು ತಲೆ ತಲೆಮಾರಿಗೆ ಬೆಸೆದ ವಂಶವಾಹಿನಿಯ ಬಗ್ಗೆ ಅವರಿಗೇ ಅನುಮಾನ, ಗುಮಾನಿಗಳು!

ತಂದೆ ಮಕ್ಕಳ ಸಂಬಂಧವನ್ನು ಒಪ್ಪಿಕೊಳ್ಳಲೂ ಆಗದೆ ಒಪ್ಪಿಕೊಳ್ಳದಿರಲೂ ಆಗದೆ ಹೊಯ್ದಾಟಗಳಲ್ಲಿ ಕಂಗೆಡುತ್ತಾರೆ. ಹೆಣ್ಣು ಗಂಡು ಸಂಬಂಧಗಳ ಸಂದರ್ಭದಲ್ಲಿ ಕಾಡದ ನೈತಿಕತೆಯ ಪ್ರಶ್ನೆ ಮಗನೆಂದು ಒಪ್ಪಿಕೊಳ್ಳುವಲ್ಲಿ ಸಂಕೋಚ, ಹಿಂಜರಿಕೆಗಳನ್ನು ಕೆಲವು ಕ್ಷಣಗಳಾದರೂ ಅವರನ್ನು ಕಂಗೆಡಿಸುತ್ತವೆ.

ಆಕಸ್ಮಿಕವಾಗಿ, ಅಪರಿಚಿತನಾಗಿ ರೈಲು ಪ್ರಯಾಣದಲ್ಲಿ ಮುಖಾಮುಖಿಯಾಗುವ ದಿನಕರ, ವಿಶ್ವನಾಥ ಶಾಸ್ತ್ರಿಗಳು ರಕ್ತ ಸಂಬಂಧದ ಅರಿವಿಲ್ಲದೆ ಆತ್ಮೀಯರಾಗುತ್ತಾರೆ. ದಿನಕರನ ಕೊರಳಲ್ಲಿನ ತಾಯಿತ ಶಾಸ್ತ್ರಿಗಳ ಗತ ಜೀವನದ ಕಡೆಗೆ ಹೊರಳಿಸುತ್ತದೆ. ಆಗಿನಿಂದಲೇ ಅನುಮಾನ ಪಿಶಾಚಿ ಶಾಸ್ತ್ರಿಗಳ ಮನ ಹೊಕ್ಕು ಕಾಡುತ್ತ, ಸಮಾಧಾನ ಬೇಡುತ್ತ ಹೋಗುತ್ತದೆ. ಖಾತ್ರಿಯಾಗಿ ಮಗನೆಂದು ಒಪ್ಪಿಕೊಳ್ಳಲು, ತನ್ನ ಹೆಂಡತಿಯ ಪಂಡಿತನೊಂದಿಗಿನ ಅನೈತಿಕ ಸಂಬಂಧದ ಅನುಮಾನ ಅಡ್ಡಿ ಬರುತ್ತದೆ. ಆದರೂ ಅವನ ಬಗ್ಗೆ ತನಗೇ ಅರಿವಿಲ್ಲದ ವಾತ್ಸಲ್ಯದ ಎಳೆ, 'ನೀನು ನನ್ನ ಮಗ' ಎಂದು ಹೇಳದಿದ್ದರೂ ನೀವು ನನ್ನ ಮಗನಾಗ ಬಹುದಿತ್ತು' ಎಂದು ನುಡಿಸುತ್ತದೆ. ಅಪ್ಪ, ಮಗ ಎಂದು ಸಂಬಂಧ ಬೆಸೆದು ಕೊಳ್ಳದೆ ಚಿಕ್ಕಪ್ಪ, ಪುಟಾಣಿ ಸಂಬಂಧವಾಗಿ ಮುಂದುವರಿಯುತ್ತದೆ. 'ತಾಯಿತ' ಶಾಸ್ತ್ರಿಯ ಮುಂದೆ ಹಿಂದಿನ ಸಂಗತಿಗಳನ್ನೆಲ್ಲ ಬಿಚ್ಚಿಡುವುದರ ಜೊತೆಗೆ 'ಹೆಂಡತಿ'(ಸರೋಜ) ಸಾವಿನ ಬಗ್ಗೆಯೇ ಅನುಮಾನ ಮೂಡುತ್ತದೆ. ದಿನಕರನ ಗತಚರಿತ್ರೆಯ ವಿವರಗಳಲ್ಲಿ ವಿಶ್ವನಾಥ ಶಾಸ್ತ್ರಿಯ ಚರಿತ್ರೆಯೂ ಸೇರಿಕೊಂಡು ಬಿಡುತ್ತದೆ. ನಾರಾಯಣ ತಂತ್ರಿಯ ತಾಯಿ ಸೀತಮ್ಮನ ಮಾತುಗಳಿಂದ ದಿನಕರ ತನ್ನ ಮಗನೇ ಅನಿಸಿದರೂ, ಪಂಡಿತನ ರಕ್ತವಿರಬಹುದೆಂಬ ಶಂಕೆ ಅಸ್ಪಷ್ಟಗೊಳಿಸುತ್ತದೆ.

ಶಾಸ್ತ್ರಿಗಳಿಗಾಗಲೀ, ದಿನಕರನಿಗಾಗಲೀ, ನಾರಾಯಣ ತಂತ್ರಿಗಾಗಲೀ ಹೆಣ್ಣುಗಳ ಜೊತೆಗಿನ ತಮ್ಮ ಸಂಬಂಧಗಳ ಬಗ್ಗೆ ಎಂದಿಗೂ ನೈತಿಕ ಪ್ರಜ್ಞೆ ಕಾಡುವುದಿಲ್ಲ. ಶಾಸ್ತ್ರಿಗಳು ಮೇಲು ನೋಟಕ್ಕೆ ಮಡಿವಂತರೆನಿಸಿದರೂ ಮುಂಬಯಿಯಲ್ಲಿದ್ದು ಎಲ್ಲ ಚಟಗಳನ್ನೂ ಕಲಿತವರು. ಮದುವೆ, ಹೆಂಡತಿ ಇತ್ಯಾದಿ ನಿರ್ಬಂಧಗಳಿಲ್ಲದೆ ಸ್ವೇಚ್ಛೆ, ಸ್ವೈರತ್ವಗಳಿಗೆ ಒಲಿದವರು. ಸೂಳೆಯಾಗಿ ಶಾಸ್ತ್ರಿಗಳ ಬದುಕನ್ನು ಪ್ರವೇಶಿಸಿದ ರಾಧೆಯ ಒತ್ತಾಯಕ್ಕೆ ಕಟ್ಟು ಬಿದ್ದು. ಸಂತಾನದ ಮೂಲಕ ಸಾತತ್ಯತೆಗಳಿಸಲು ಸರೋಜಳನ್ನು ಮದುವೆಯಾದರೂ, ಮನಸ್ಸುಗಳು ಬೆರೆಯದಿದ್ದರೂ ಮೈಗಳು ಬೆರೆಯುತ್ತಿದ್ದರೂ, ಸಂತಾನವಿಲ್ಲದಾಗಲು ವೀರ್ಯವರ್ಧಕ ಲೇಹ್ಯಗಳನ್ನು ಪಡೆಯಬೇಕಾಗುತ್ತದೆ, ಮನೆಯ ಅನಿಷ್ಟ, ಕ್ಷುದ್ರ ಭೂತಗಳ ಉಚ್ಚಾಟನೆಗೆ ಪಂಡಿತನ ಸಲಹೆಯಂತೆ, ತಾಂತ್ರಿಕ ಪೂಜೆ (ಹೆಂಡತಿಯಿಂದ) ಏಕಾಂತದಲ್ಲಿ ನಡೆಯಬೇಕಾಗುತ್ತದೆ.

ಪೂಜೆಯ ನೆವದಲ್ಲಿ ಪಂಡಿತ, ಸರೋಜಳ ನಡುವೆ ಬೆಳೆದ ಸಲುಗೆ, ಸಂಬಂಧಗಳು ಶಾಸ್ತ್ರಿಯ ಮನದಲ್ಲಿ ಅನುಮಾನದ ಪಿಶಾಚಿ, ರೋಷದ ದೆವ್ವ, ರಕ್ತದಾಹದ ದೆವ್ವವನ್ನು ಹೋಗಿಸುತ್ತವೆ. ಮನೆಯ ದೆವ್ವಗಳು ಉಚ್ಚಾಟನೆಯಾದವೋ ಇಲ್ಲವೋ ಆದರೆ ಶಾಸ್ತ್ರಿಯ ಮನಸ್ಸು ಕಾಮ, ಕ್ರೋಧಾದಿ ದೆವ್ವಗಳ ನೆಲೆಮನೆಯಾಗುತ್ತವೆ. ಶಾಸ್ತ್ರಿಯ ಮೇಲೆ ಕಿಡಿ ಕಾರುವಂತಾದರೂ, ಅವನ ಮೋಡಿಗೆ ಮುದುಡಿ ಬುಟ್ಟಿ ಸೇರುವ ಹಾವಾಗುತ್ತಾನೆ.

ಸರೋಜಳ ತಾತ್ಸಾರ, ನಿರ್ಲಕ್ಷ್ಯಗಳಿಂದ ವ್ಯಗ್ರಗೊಂಡಿದ್ದ ಮನಸ್ಸು, ಪಂಡಿತ, ಸರೋಜಳ ಸಂಬಂಧದ ಅನುಮಾನದಿಂದ ಮತ್ತಷ್ಟು ವ್ಯಗ್ರನಾಗಿ, ಉಗ್ರನಾಗಿ, ಪಂಡಿತನ ಮೇಲಿನ ದ್ವೇಷವನ್ನೂ ಸರೋಜಳ ಮೇಲೆ ಲೈಂಗಿಕ ಆಕ್ರಮಣದ ಮೂಲಕ, ಕ್ರೂರ ಮೃಗ ಎರಗುವಂತೆ ಎರಗಿ, ತನ್ನನ್ನು ನಿರಾಕರಿಸಿದ್ದರ ಪ್ರತೀಕಾರವಾಗಿ, ದಿವ್ಯ ನಿರ್ಲಕ್ಷ್ಯವನ್ನು ಹಿಚುಕಿ ಸಾಯಿಸುವಂತೆ ಅವಳನ್ನು ಸಂಭೋಗಿಸುತ್ತಾನೆ. ಸಂಭೋಗದ ಮೂಲಕ ಅವಳ ಆತ್ಮ ಹನನ ಮಾಡಲು ತೊಡಗುತ್ತಾನೆ ಆದರೆ ಸೋಲುತ್ತಾನೆ, ನಿರ್ವೀಯನಾಗುತ್ತಾನೆ. ತನ್ನ ದೌರ್ಬಲ್ಯಗಳನ್ನು ಸಮತೂಗಿಸಲು ಕೊಲೆಗೂ ಮುಂದಾಗುತ್ತಾನೆ. ಬಸಿರಾದ ಸುದ್ದಿ ತಿಳಿದೂ ಪಂಡಿತನಿಗೇ ಬಸಿರಾದ ಹಾದರಗಿತ್ತಿ ಎಂದು ಅವಹೇಳನ ಮಾಡುತ್ತಾನೆ. ಮುಂದೊಂದು ದಿನ ಅವಳನ್ನು ಜಪ್ಪಿಕೊಲೆಮಾಡಿ ಹೂತು' ತಣ್ಣಗೆ ನಡೆದು ಬಿಟ್ಟು, ತನ್ನ ಪಾಪಗಳಿಗೆ ಪರಿಹಾರ ಕಂಡು ಕೊಳ್ಳಲು ಪುರಾಣ ಪ್ರವಚನದ ಕಡೆಗೆ ಹೊರಳುತ್ತಾನೆ. ಅವನ ಎರಡನೇ ಮದುವೆಯೂ ವಿಫಲವಾಗುತ್ತದೆ. ತನಗೇ ಹುಟ್ಟಿದ ಮಗಳನ್ನೂ, ಹೆಂಡತಿಯನ್ನೂ ಬಾಳಿಸಲಾಗದೆ ಹೋಗುತ್ತಾನೆ. ಶಾಸ್ತ್ರಿಗೆ ಸಾಂತ್ವನ ಸಾಧ್ಯವಾಗುವುದು ಗುಪ್ತಭಕ್ತಿಯ'ಭಗವತಿ'ಯ ಆಲಯದಲ್ಲಿ, ಸೂಳೆಯಾದ ರಾಧೆಯಲ್ಲಿ.

ಎಲ್ಲವನ್ನೂ ಬಿಟ್ಟೆನೆಂದೂ ಬಿಡದ ಭವದ ನಂಟು ಸರಿದುಹೋದ ಬದುಕಿನ ನೆನಪುಗಳು, ನಲವತ್ತೈದು ವರ್ಷಗಳೇ ಕಳೆದರೂ, ದಿನಕರ ಕಾಣೆಸಿಕೊಂಡದ್ದೇ ಆತ್ಮಾವಲೋಕನದತ್ತ ದೂಡುತ್ತವೆ. ರಾಧೆಯ ಮುಂದೆ ತನ್ನ ಅಳಲನ್ನು ತೋಡಿಕೊಳ್ಳುತ್ತಾ' ಅವನು ನನ್ನ ಮಗನೋ, ಪಂಡಿತನ ಮಗನೋ ಹೇಗೆ ಹೇಳಲಿ? ಮಹಾದೇವಿಗೆ ಮಗಳು ಹುಟ್ಟಿದ ಮೇಲೆ ನನಗೇ ಸರೋಜ ಬಸಿರಾದ್ದೋ ಏನೋ ಎಂದು ಅನುಮಾನವಾಗಿತ್ತು. ನಾನವಳನ್ನು ಕೊಂದು ನನ್ನ ಮಗುವನ್ನೂ

ಕೊಂದಂತಾಗಿ ರೌರವ ನರಕದಲ್ಲಿ ನರಳ ಬೇಕಾದೀತೆಂದು ಹೀಗೆಲ್ಲ ವೇಷ ಕಟ್ಟಿಕೊಂಡು ಪುರಾಣ ಪ್ರವಚನಗಳಲ್ಲಿ ಜೀವಸವೆಸುತ್ತಾ ಬಂದೆ ಆದರೂ ಈ ದೆವ್ವ ಹೊಕ್ಕ ಶರೀರ ಏನನ್ನೂ ಕಲಿಯದೇ ಉಳಿದುಬಿಟ್ಟಿತು!... ಆದರೆ ನಿನ್ನ ಜೊತೆ ಹೀಗೆ ಮಾತಾಡಿಕೊಂಡಿರುವ ನಾನು ಯಾರು? ಮಗನೆಂದು ಅನುಮಾನವಾಗಿ ಅವನು ಕುಟ್ಟವಲಕ್ಕಿ ತಿನ್ನುವುದು ನೋಡುತ್ತ ಕರುಳು ಹಿಂಡುವಷ್ಟು ವಾತ್ಸಲ್ಯ ಭಾವ ಹುಟ್ಟಿದ ನಾನು ಯಾರು?''-ಎಂದು ಕೇಳಿಕೊಂಡ ಈ ಪ್ರಶ್ನೆಗಳು ಈ ಕಾದಂಬರಿಯಲ್ಲಿ ಸ್ಥಾಯಿಯಾಗಿ ದಿನಕರ, ಪ್ರಸಾದರ ಪ್ರಶ್ನೆಗಳೂ ಆಗಿವೆ. ಮೇಲಿಂದ ಮೇಲೆ ಈ ಮೂವರೂ ಈಪ್ರಶ್ನೆಗಳನ್ನು ಕೇಳಿಕೊಳ್ಳುತ್ತಲೇ ಇದ್ದರೂ ಶಾಸ್ತ್ರಿ ಮತ್ತು ದಿನಕರ ಇವರಿಬ್ಬರಿಗೆ ದೊರೆಯದ ಸಮಾಧಾನ, ಪ್ರಸಾದನಿಗೆ ಸಾಧ್ಯವಾಗುವ ಸೂಚನೆಗಳು ಕಾಣಿಸುತ್ತವೆ.

ಶಾಸ್ತ್ರಿಗಳಿಗೆ ಎಲ್ಲವೂ ಇದ್ದು ಶಾಂತಿ, ಸಮಾಧಾನ, ಸ್ವಸ್ಥ ಚಿತ್ತದೊಂದಿಗೆ ಸುಖವಾಗಿಯೂ ಸಾತ್ವಿಕವಾಗಿಯೂ ಬಾಳಲು ಸಾಧ್ಯವಿದ್ದರೂ, ಎಲ್ಲವನ್ನೂ ತನ್ನ ವೈಯಕ್ತಿಕ ಗುಣ, ಸ್ವಭಾವ, ಕ್ಷುದ್ರ ಮನಸ್ಸು, ಕೆಟ್ಟ ಚಟಗಳು. ಲಂಪಟತನಗಳಿಂದ ವ್ಯಕ್ತಿತ್ವವನ್ನೂ ಬದುಕನ್ನೂ ಛಿದ್ರ ಛಿದ್ರವಾಗಿಸಿ,'' ಇದ್ದುದೆಲ್ಲವ ಬಿಟ್ಟು ಇರದುದರ ಕಡೆಗೆ ತುಡಿವಂತೆ' ಆಗುತ್ತಾನೆ. ಬಿಡುಗಡೆಗೆ ಹಂಬಲಿಸುವ ಜೀವಕ್ಕೆ ಬಿಡುಗಡೆ ಪುರಾಣ ಪ್ರವಚನಗಳಲ್ಲಿ, ದೇವರಲ್ಲಿ ಸಾಧ್ಯವಾಗಬಹುದೇನೋ ಎಂಬ ಭ್ರಮೆಯಲ್ಲಿದ್ದರೂ, ಆ ಭ್ರಮೆಯೂ ಒಂದು ಭ್ರಮೆ ಎನ್ನುವ ಸತ್ಯದ ಅರಿವೇ ಅಂತಿಮಘಟ್ಟವಾಗುತ್ತದೆ. ''ಈ ಭವದಿಂದ ನನ್ನಂಥವರಿಗೆ ಮುಕ್ತಿಯಿಲ್ಲವೆನಿಸುತ್ತದೆ. ಆದರೆ ಸರೋಜ ನನ್ನ ಕೈಯಿಂದ ಸಾಯಲಿಲ್ಲವಲ್ಲ? ನನಗೆ ಮಗಳು ಹುಟ್ಟಿದ್ದೇ ಸರೋಜ ನನ್ನಿಂದಲೇ ಬಸುರಾಗಿರಬೇಕೆಂದು ನಾನು ತುಂಬ ಯಾತನೆ ಪಡುತ್ತ 'ಭವ' ದಿಂದ ಪಾರಾಗಲೆಂದು ದೇವರ ಕಡೆ ತಿರುಗಿದ್ದೆ. ಯಾವ ದೇವರಿಂದ ಸಮಾಧಾನ ಸಿಕ್ಕೀತು ಹೇಳು? ಎಲ್ಲ ಇರುವುದು ಇಲ್ಲಿ''(ಹಣೆಯಲ್ಲಿ)' ಎನ್ನುವ ಮಾತುಗಳಲ್ಲಿ ಶಾಸ್ತ್ರಿಗೆ 'ಬಿಡುಗಡೆ'ಯ ಬಗೆಗೇ ಭ್ರಮನಿರಸನವಾಗಿರುವುದು ಸ್ಪಷ್ಟವಾಗುತ್ತದೆ; ಹಣೆಬರಹವೇ ಅಂತಿಮವಾಗಿ ಮನುಷ್ಯನ ಸ್ಥಿತಿಯನ್ನು ನಿರ್ಧರಿಸುವ ಅಂಶವಾಗುತ್ತದೆ.

ಇದೇ ಪ್ರಶ್ನೆಗಳನ್ನು ದಿನಕರನೂ ಕೇಳಿ ಕೊಳ್ಳುತ್ತಾನೆ. ಹಾಗೆಯೇ ಸಮಾಧಾನವನ್ನೂ ಕಂಡು ಕೊಂಡು ಬಿಡುತ್ತಾನೆ. ಅವನಿಗಿರುವುದು ಅಜ್ಞಾತ ಭೂತ. ಅಪ್ಪ, ಅಮ್ಮ., ಯಾರೆಂದು ತಿಳಿಯದೆ ಹರಿದ್ವಾರದ ತ್ರಿಪಾಠಿಗಳ ನೆರಳಲ್ಲಿ ಚಿಗುರೊಡೆದು ಬೆಳೆದು ವಿದ್ಯಾವಂತನಾಗಿ, ಪ್ರಸಿದ್ಧ ವ್ಯಕ್ತಿಯಾಗಿ, ಮೋಡಿಗಾರನಾಗಿ ರೂಪುಗೊಂಡರೂ, ಜಗತ್ತೇ ತನ್ನ ಸುತ್ತಲಿದ್ದರೂ, ತನ್ನ ಬೇರುಗಳ ಹುಡುಕಾಟ ನಿಷ್ಫಲವಾಗಿ 'ಒಂಟಿತನ'ಗವ್ವೆಂದು ಆವರಿಸಿದಾಗ. ಅದನ್ನು ಕಳೆದುಕೊಳ್ಳಲು ಅವನು ಆಯ್ದುಕೊಳ್ಳುವ ದಾರಿ 'ಲಂಪಟತನ'. ದೇಹದ ಸುಖಕ್ಕಾಗಿ ಹೆಣ್ಣುಗಳನ್ನು ಬಟ್ಟೆಗಳಿಗಿಂತಲೂ ಸಲೀಸಾಗಿ ಬದಲಿಸುತ್ತಾ ಹೋಗುತ್ತಾನೆ. ಹೆಣ್ಣುಗಳು ಹೆಣ್ಣುಗಳೇ ಆದರೂ ಒಂದೊಂದು ಹೆಣ್ಣಿನ ಅನುಭವ ಬೇರೆ ಬೇರೆಯೆನಿಸುತ್ತದೆ. ತಂದೆಯಂತೆ ಮಗ ಹೆಂಡತಿಯನ್ನು ಬಾಳಿಸಿಕೊಳ್ಳದೆ ಬಿಟ್ಟು, ಊರ ತುಂಬ, ದೇಶದ ತುಂಬ, ಪ್ರಪಂಚದ ತುಂಬಾ ಎಲ್ಲೆಲ್ಲೂ ಅವನು ಹೆಣ್ಣುಗಳನ್ನು ಪಡೆದಿರುತ್ತಾನೆ. ಬಿಡುಗಡೆಗೆ ಅಡ್ಡಿಯಾಗುವ ಕಾಮಿನಿ, ಕಾಂಚನಗಳಲ್ಲಿ ಕಾಂಚನವನ್ನು ಸಲೀಸಾಗಿ

ಬಿಟ್ಟು ಕೊಡುತ್ತಾನಾದರೂ 'ಕಾಮಿನಿ'ಯನ್ನು ಬಿಟ್ಟುಕೊಡಲಾಗದ 'ವಾಸನಾ'ಗೆ ಅಂಟಿಕೊಂಡಿರುತ್ತಾನೆ. ತನಗೆ ಹೆಣ್ಣಿನ ಮೊದಲ ಅನುಭವವನ್ನು ದಕ್ಕಿಸಿಕೊಟ್ಟ 'ಗಂಗೂ' ಎಷ್ಟೋ ವರ್ಷಗಳ ನಂತರ ತನ್ನ ಗೆಳೆಯ ನಾರಾಯಣ ತಂತ್ರಿಯ ಮನೆಯಲ್ಲಿ ಮಧ್ಯವಯಸ್ಸಿನ ಪ್ರಾಯದಲ್ಲಿ ಕಂಡಾಗಲೂ ಅವಳ ಮಾಸದಿದ್ದ ಸೌಂದರ್ಯ ಅವನಲ್ಲಿ ಚಿತ್ತ ಸ್ಖಲನಕ್ಕೆ ಚೋದಿಸುತ್ತದೆ.

ನಾರಾಯಣ ತಂತ್ರಿಯ ಮೂಲಕ ಗಂಗೂ, ಪ್ರಸಾದರ ಕತೆ ಕೇಳಿದ ನಂತರ. ಗಂಗೂ ಜೊತೆಗೆ ತಮ್ಮಿಬ್ಬರದೂ ಸಂಬಂಧವಿದ್ದುದು ತಿಳಿದಾಗ, ಶಾಸ್ತ್ರಿಯನ್ನು 'ದಿನಕರ'ನ ವಿಚಾರದಲ್ಲಿ ದಿನಕರನನ್ನು ಕಾಡುತ್ತದೆ. ಹಾಗೆಯೇ ನಾರಾಯಣ ತಂತ್ರಿಯನ್ನೂ ಕಾಡುತ್ತದೆ. ತಾನೊಬ್ಬನೇ ಗಂಗೂವಿನ ಪ್ರೇಮಕ್ಕೆ, ಅವಳ ಬಸುರಲ್ಲಿನ ಕುಡಿಗೆ ನೈತಿಕ ಹಕ್ಕುದಾರ ಎಂಬ ಹುಂಬ ನಂಬಿಕೆ, ಗಂಗೂವಿನ ಪ್ರಾಮಾಣಿಕ ತಪ್ಪೊಪ್ಪಿಗೆ, ತನ್ನ ಬಸಿರಿನ ಬಗೆಗಿನ ಸಂದಿಗ್ಧತೆಗಳು ತಂತ್ರಿಯಲ್ಲಿ ರೋಷ, ಆಕ್ರೋಶಗಳನ್ನು ಮೂಡಿಸಿದರೂ, ಹೆಣ್ಣು(ಗಂಗೂ) ಮಾಯಾವಿ ಎನಿಸಿದರೂ ಕಾಮದ ಸೆಳೆತ, ರತಿಸುಖದ ಮೋಹಕತೆಗಳು ಅವಳನ್ನೂ, ಅವಳ ಮಗುವನ್ನೂ ಒಪ್ಪಿಕೊಳ್ಳುವಂತೆ ಮಾಡುತ್ತದೆ''. ಈ ಮಗು ನನ್ನದಾದರೆ ಏನಂತೆ? ದಿನಕರನದಾದರೆ ಏನಂತೆ? ನಾನು ಒಂದು ಮಗುವಾಗಿ ಇದ್ದಂತೆ ಅದೂ ಒಂದು ಮಗು. ಅವಳ ಗರ್ಭದಲ್ಲಿ ಸಂಚರಿಸುತ್ತ ಬೆಳೆಯುತ್ತಿರುವ ಮಗು- ಅದು. ಅದು ಹುಟ್ಟಿಕೊಂಡು ಬೆಳೆಯಲಿ ನನ್ನದೇ ಎಂದುಕೊಂಡು ಬಿಡುತ್ತೇನೆ'' ಎಂದು ಸಮಸ್ಯೆಯನ್ನು ಸರಳಗೊಳಿಸಿ ಗಂಗೂ ಮಗುವನ್ನು ತನ್ನ ಮಗುವೆಂದು ಸ್ವೀಕರಿಸಿದಷ್ಟು ಸುಲಭವಾಗಿ ಸ್ವೀಕರಿಸಲು ಶಾಸ್ತ್ರಿಗೆ ಮಾತ್ರ ಸಾಧ್ಯವಾಗುವುದಿಲ್ಲ. ಅಂತರಂಗದಲ್ಲಿ ಒಪ್ಪಿಕೊಳ್ಳಲು ಒತ್ತಾಯವಿದ್ದರೂ ನೇರವಾಗಿ ಯಾರ ಮುಂದೆಯೂ ಒಪ್ಪಿಕೊಳ್ಳುವುದು ಕಾಣುವುದಿಲ್ಲ.

ಪ್ರಸಾದನ ಬೇಸರ,ವೈರಾಗ್ಯ, ಸಂನ್ಯಾಸಗಳಿಗೆ ಗಂಗೂ ಮತ್ತು ತಂತ್ರಿಯ ಗುಪ್ತ ಸಂಬಂಧ ಕಾರಣವಾಗುತ್ತದೆ.

ಪ್ರಸಾದ ಸಂನ್ಯಾಸದ ಬೆದರಿಕೆ ತಪ್ಪಿಸಲು, ಗಂಗೂವಿಗೆ ತಾಳಿಕಟ್ಟಿ ಸಾರ್ವಜನಿಕವಾಗಿ ಹೆಂಡತಿಯೆಂದು ಒಪ್ಪಿಕೊಳ್ಳುವುದೊಂದೇ ದಾರಿ ಎನಿಸಿ, ತಂತ್ರಿ ಅದಕ್ಕೇ ಸಮ್ಮತಿಸಿ ಮುಂದುವರೆಯಲು ನಿರ್ಧರಿಸಿದಾಗ, ಅವನ ಆ ನಿರ್ಧಾರ ದಿನಕರನಿಗೆ, ತಂತ್ರಿಯ 'ಬಿಡುಗಡೆ' ಅದಾಗಿ ಕಾಣಿಸುತ್ತದೆ. ಇವೇ ಕ್ಷಣಗಳು ದಿನಕರನಿಗೆ ಆತ್ಮಾವಲೋಕನ, ಆತ್ಮವಿಶ್ಲೇಷಣೆಯ ಕ್ಷಣಗಳೂ ಆಗುತ್ತವೆ. ತನ್ನ ಅನಾಥತೆ, ಅತಂತ್ರಸ್ಥಿತಿ, ಏಕಾಕಿತನಗಳು ನೆನಪಿಗೆ ಬಂದು ಕೊರಗುವಂತೆ ಆಗುತ್ತದೆ ಮತ್ತು ತನ್ನ ವಿಚಾರದಲ್ಲಿ ಕಟ್ಟ ಕಡೆಯ ಸತ್ಯದ ಅರಿವೂ ಮೂಡುತ್ತದೆ''. ನಾರಾಯಣನ ಜೀವನದಲ್ಲಿ ತಾನು ಪಾಲುದಾರ. ಆದರೆ ಅವನ ಬಿಡುಗಡೆಯಲ್ಲಿ ತನಗೆ ಯಾವ ಪಾತ್ರವೂ ಇಲ್ಲ. ನಾರಾಯಣನಿಗೆ ಸಂಸಾರದ ಚೌಕಟ್ಟಿದೆ; ಆದರೆ ತನಗೆ ಇಲ್ಲ. ಅವನಿಗೆ ಹೇಳಿ ಕೇಳುವವರೂ ಇದ್ದಾರೆ. ಸಮಾಜದ ಭಯವಿದೆ. ಅಲ್ಲೊಂದು ಅವನಿಗೆ ನಿಶ್ಚಿತ ಪಾತ್ರವಿದೆ. ಆದರೆ ತನಗೆ ಇಲ್ಲ. ಅವನಿಂದ ನೋಯುವವರು ಇದ್ದಾರೆ. ನಿರೀಕ್ಷಿಸುವವರು ಇದ್ದಾರೆ. ಆದರೆ ತನಗೆ ಇಲ್ಲ. ಪ್ರಸಾದ ನಾರಾಯಣನಿಗೆ ಇದ್ದಾನೆ, ತನಗೆ ಇಲ್ಲ. ತನ್ನಿಂದ ಅವನು ಹುಟ್ಟಿರಬಹುದು, ಇಲ್ಲದೆ ಇರಬಹುದು ಆದರೆ ತಾನು ಆ ಬಗ್ಗೆ ಏನೂ ಮಾಡುವುದೂ ಇಲ್ಲ. ದಿಗ್ಭ್ರಮೆ ಮಾತ್ರ ತನ್ನ ಪಾಲಿಗೆ, ಈ ದೇಹ ಅಂಥ

ದಿಗ್ಭ್ರಮೆಯನ್ನು ಹೆಚ್ಚು ಕಾಲ ಧಾರಣ ಕೂಡ ಮಾಡಲಾರದು. ತನ್ನಂಥ ಅತಂತ್ರನಿಗೆ ಸಂಸಾರವೂ ಇಲ್ಲ; ಸನ್ಯಾಸವೂ ಇಲ್ಲ. ತನಗೆ ನೆಲೆಯೇ ಇಲ್ಲ. ತಾನು ಯಾರೆಂದು ಹುಡುಕಿದರೂ ಏನೂ ಸಿಗುವುದಿಲ್ಲ" ಎಂಬ ನಿಲುವಿಗೆ ಬಂದು ತಲುಪಿದ ಮೇಲೆ ಪ್ರಸಾದನಿಗಾಗಲೀ, ಶಾಸ್ತ್ರಿಗಾಗಲೀ ಇನ್ನು ಮುಂದೆ ಬಿಡುಗಡೆಯ ಪ್ರಯತ್ನಗಳ ಅಗತ್ಯವೇ ಇರುವುದಿಲ್ಲ. 'ಭವ' ದ ಬಿಡುಗಡೆಯಾಗ ಬೇಕಾದಲ್ಲಿ ಪ್ರಸಾದನಂತೆಎಲ್ಲ ಸಂಬಂಧಗಳನ್ನು ತಾತ್ವಿಕ ನೆಲೆಯಲ್ಲಿಯಾದರೂ ಕಳಚಿಕೊಂಡು ನಿಲ್ಲಬೇಕು. ಬಿಡುಗಡೆ, ಬಿಡುಗಡೆ ಎಂದು ಬೊಬ್ಬೆಹಾಕಿ ಪುರಾಣ ಪ್ರವಚನಗಳಲ್ಲಿ ತೊಡಗಿಸಿಕೊಂಡರೆ, ಭಗವತಿಯ ಮುಂದೆ ಏಕಾಂತದಲ್ಲಿ ಅಳಲನ್ನು ತೋಡಿಕೊಂಡರೆ, ಅಯ್ಯಪ್ಪ ಸ್ವಾಮಿಯಾದೆನೆಂದು ಬಟ್ಟೆ ಬದಲಾಯಿಸಿಕೊಂಡರೆ 'ಬಿಡುಗಡೆ' ಕೈ ಗೆಟುಕುವುದಿಲ್ಲ. ಗತ ಜಿವನದ ಪಾಪಗಳನ್ನು ಕಳೆದುಕೊಳ್ಳಲು ಬಾಹ್ಯದಲ್ಲಿ ವೇಷಾಂತರಗೊಂಡರೆ ಸಾಲದು ಪಶ್ಚಾತ್ತಾಪ, ಪರಿತಾಪ ದಗ್ಧರಾಗಬೇಕು. ಒಳಗಿನ ರಾಗ ದ್ವೇಷಾದಿಗಳನ್ನು ಆಮೂಲಾಗ್ರವಾಗಿ ಕಿತ್ತೆಸೆಯ ಬೇಕು. ಶುದ್ಧಾಂತಃ ಕರಣರಾಗಬೇಕು, ಪೂರ್ವಾಶ್ರಮದ ಅನೈತಿಕ ಬದುಕಿನ ವಿಚಾರದಲ್ಲಿ ಪೂರ್ಣ ವಿಸ್ಮೃತಿ ಅನಿವಾರ್ಯ. ಬಿಡುಗಡೆಯ ಕಡೆಗೆ ಮುಖಮಾಡಿ ಸಾಗುವ ಮನಸ್ಸಿನಲ್ಲಿ ಅನುಮಾನ, ಸಂದೇಹಗಳಿಗೆ ಎಡೆಯಾಗಬಾರದು. ಆದರೆ ಶಾಸ್ತ್ರಿ ದಿನಕರ ಇಬ್ಬರೂ ಬಿಡುಗಡೆಗೆ ತುಡಿದರೂ ಅವರಲ್ಲಿನ ಮೂಲಭೂತ ಪ್ರವೃತ್ತಿಗಳು ಮಾತ್ರ ಸಾಯಲಿಲ್ಲ. ಮತ್ತೆ ಮತ್ತೆ ಅವರಲ್ಲಿ ಕಾಣಿಸಿಕೊಳ್ಳುವುದು ಜೀವಕಾಮ, ಭವಜಾಗರ ಸ್ಥಿತಿಗಳೇ ಹೊರತು ಆತ್ಮಕಾಮವಲ್ಲ. ಗೀತೆಯೂ ಕೂಡಾ,

> **ನಾಯಮಾತ್ಮಾ ಪ್ರವಚನೇನ ಲಭ್ಯೋ**
> **ನ ಮೇಧಯಾ ನ ಬಹುಶ್ರುತೇನ"**

[ಬರಿ ಪ್ರವಚನ ಪಟುವಿಗೂ, ಮೇಧಾವಿಗೂ ಮತ್ತು ಬಹುಶ್ರುತನಿಗೂ ಆತ್ಮವು ಲಭಿಸುವುದಿಲ್ಲ] ಎಂದೇ ಹೇಳುತ್ತದೆ.

ಒಂದು ಹಂತದಲ್ಲಿ ನಾರಾಯಣ ತಂತ್ರಿಯೇ ಮೇಲೆನಿಸುತ್ತದೆ. ದೇಹಸುಖ, ವ್ಯವಹಾರ, ಸಂಸಾರ, ಸಂಬಂಧಗಳ ನಂಟುಗಳೆಲ್ಲವನ್ನೂ ಇರಿಸಿಕೊಂಡು ಪರಿಸ್ಥಿತಿಗಳನ್ನು ಬಂದಂತೆ ಒಪ್ಪಿಕೊಂಡು ಅವುಗಳೊಂದಿಗೆ ಹೊಂದಿಕೊಂಡು ಹೋಗುತ್ತಾನೆ. 'ಬಿಡುಗಡೆ' ಎಂಬ ಮರೀಚಿಕೆಯ ಬೆನ್ನಹಿಂದೆ ಹೋಗುವುದಿಲ್ಲ. ಶಾಸ್ತ್ರಿ ದಿನಕರರಾದರೋ ನೆಮ್ಮದಿಯ ಬಾಳಿನಿಂದ ವಂಚಿತರಾಗಿದ್ದಾರೆ. ಎಂದೂ ಬದ್ಧತೆಯೊಂದಿಗೆ ಬಿಡುಗಡೆಗೆ ಹವಣಿಸದೆ ಕೇವಲ ವಿಕೃತ ಕಾಮ ಪಿಪಾಸಿಗಳಂತೆ ಸುರತ ಕಾಮ್ಯರಂತೆ ಹೆಣ್ಣುಗಳನ್ನು ತಮ್ಮ ಮನೋ ದೌರ್ಬಲ್ಯಗಳಿಂದಾಗಿ ಲೈಂಗಿಕ ಆಕ್ರಮಣಗಳಿಗೆ ಒಳಗಾಗಿಸಿ ಒಂದು ಬಗೆಯ ವಿಚಿತ್ರ ಮೃಗ ತೃಪ್ತಿಗೆ ಒಳಗಾಗುತ್ತಾರೆ. ಹೆಣ್ಣುಗಳನ್ನು ಮನುಷ್ಯರಾಗಿ, ಮಾನವೀಯ ಸಂಬಂಧಗಳಲ್ಲಿ ಅನಿವಾರ್ಯವಾದ ಭಾವಸ್ಥಿತಿಗಳಲ್ಲಿ ಗ್ರಹಿಸುವುದೇ ಇಲ್ಲ. ಸರೋಜಳನ್ನು ಸೇಡಿನಿಂದ ಸಂಭೋಗಕ್ಕೆ ಎಳೆದುಕೊಳ್ಳುವ ಶಾಸ್ತ್ರಿಯ ರೀತಿ, ಒಂಟಿತನದ ತನ್ನ ಭಯಂಕರ ಸ್ಥಿತಿಯಿಂದ ಪಾರಾಗಲು ಲೋಲುಪನಾಗಿ 'ಒಂದು ಪ್ರೀತಿಯಿಂದ ಇನ್ನೊಂದನ್ನು ಮುಚ್ಚಿಡುತ್ತಾ ಒಟ್ಟಾಗಿ ಹಲವು ಹೆಣ್ಣುಗಳನ್ನು ನಿರ್ವಹಿಸುತ್ತಾ ಒಂದೊಂದು ಹೆಣ್ಣಿನ ಜೊತೆಗೆ ನಡೆಸಿದ ಕಾಮ ಕ್ರೀಡೆಗಳ ರೀತಿ ಜಿಗುಪ್ಸೆ ಬೇಸರಗಳನ್ನು ಬರಿಸುತ್ತದೆ. ಅವರ ಮನಸ್ಸುಗಳೇ

ಕೊಳೆತಂತೆ ಎನಿಸುತ್ತದೆ. ತಾನು ಭೋಗಿಸಿದ ಹೆಣ್ಣು ಮತ್ತೊಂದು ಗಂಡಿನ ಜೊತೆಗೆ ಹೇಗೆ, ಎಲ್ಲಿ. ಯಾವಾಗ, ಯಾವ ಯಾವ ರೀತಿಯಲ್ಲಿ ಸಂಭೋಗಕ್ಕೆ ಒಳಗಾದಳು? ಅವನ ಮಿಂಡ ಎಲ್ಲೆಲ್ಲಿ ಹರಿದಾಡಿದ' ಎನ್ನುವುದನ್ನೆಲ್ಲ ಊಹೆಯಿಂದ ಚಿತ್ರಿಸಿಕೊಂಡು ನರಳುವ ಸ್ಥಿತಿಯಂತೂ'ಬಿಡುಗಡೆ'ಯ ಬಯಕೆಗೂ ಅನರ್ಹವಾಗಿಸುತ್ತದೆ. ಇಲ್ಲಿನ ನಾಯಕರಿಗೆ ಅಥವಾ ಕಥಾ ಪಾತ್ರಗಳಿಗೆ 'ಭವ'ವೆಂದರೆ 'ಲೈಂಗಿಕತೆ'ಯ ಪರಿಭಾಷೆಯಲ್ಲಿ ಮಾತ್ರವೇ ಅರ್ಥವಾಗುತ್ತದೆ; ಮತ್ತು ಅವರ ಗ್ರಹಿಕೆಯೂ ಅದೇ ಆಗಿದೆ. ಹೆಣ್ಣಿನ ಆರಾಧನೆಯಾಗಿ ಯೋನಿ ಪೂಜೆ ಕೆಲವು ತಾಂತ್ರಿಕ 'ಪೂಜಾ ಪದ್ಧತಿಗಳಲ್ಲಿ ಇರಬಹುದು. ಆದರೆ ಈ ಪಾತ್ರಗಳು ತಾಂತ್ರಿಕ ಆರಾಧಕರೇನು ಅಲ್ಲ. ಒಂದು ವೇಳೆ ಆರಾಧನೆಯೇ ಆಗಿದ್ದ ಪಕ್ಷದಲ್ಲಿ ಭಕ್ತಿ ತನ್ಮಯತ್ವಗಳು ಇರಬೇಕಾಗುತ್ತದೆ. ಆದರೆ ಇವರ ಸ್ತ್ರೀ ಭೋಗ, ಸಂಭೋಗಗಳ ಮೂಲದಲ್ಲಿ ಸೇಡು, ರೋಷ, ರೊಚ್ಚು, ಅನುಮಾನ, ಜೊತೆಗೆ ಶಾಸ್ತ್ರಿಯಲ್ಲಿ ಕಾಣುವಂತೆ ಕೊಲ್ಲುವ ಪ್ರವೃತ್ತಿ (killing instinct) ಮೊದಲಾದವುಗಳೇ ವಿಜೃಂಬಿಸಿವೆ. ದಿನಕರನಂತೂ ಯಾವ ಹೆಣ್ಣಿಗೂ ಬದ್ಧನಾಗಿ ಉಳಿಯುವುದೇ ಇಲ್ಲ. ತನ್ನ ಆಕರ್ಷಕ ವ್ಯಕ್ತಿತ್ವ ಮೈ ಮಾಟಗಳನ್ನು ಹೆಣ್ಣುಗಳ ಶೋಷಣೆಗೆ ಬಳಸಿಕೊಳ್ಳುತ್ತಾನೆ. ಇವರಿಗೆ ಕಾಮದ, ಸಂಭೋಗದ ಉತ್ಕಟ ಕ್ಷಣಗಳೇ 'ಬಿಡುಗಡೆ'ಯ ಕ್ಷಣಗಳಾಗ ಬಹುದೆ ಎಂಬ ಅನುಮಾನವೂ ಉಂಟಾಗುತ್ತದೆ.

ಉತ್ಕಟ ಪ್ರೀತಿ, ಕಾಮಗಳು ಒಂದು ಹೆಣ್ಣಿಗೋ ಒಂದು ಗುರಿಗೋ ಮೀಸಲಾಗಿ ಬದ್ಧವಾಗಿ ಉಳಿದಾಗ ಮತ್ತು ಅದನ್ನು ಸರ್ವ ಸಮರ್ಪಣ ಭಾವದಿಂದ ಭಗವಂತನಿಗೇ ಅರ್ಪಿಸಿದಾಗ, ಕಾಮ ಕ್ರೀಡೆಯನ್ನೂ ಭಕ್ತಿಯೊಂದಿಗೆ ಅನನ್ಯವಾಗಿಸಿದಾಗ ಬಿಡುಗಡೆ ಸಾಧ್ಯವಾಗುತ್ತದೆ. ಹರಿಹರನ ಕಾವ್ಯಗಳಲ್ಲಿ ಬರುವ ಅಲ್ಲಮ ಪ್ರಭು,-ಕಾಮಲತೆ, ಮಲುಹಣ-ಮಲುಹಣೆ ಹಾಗೆಯೇ ತುಳಸೀದಾಸ-ರತ್ನಾವಳಿ- ಸಂಬಂಧಗಳನ್ನು ಗಮನಿಸಿದಾಗ ರತಿ ಸುಖ, ಸುರತ ಸುಖದ ಉತ್ಕಟತೆಗಳು ಇವರ ಬದುಕುಗಳಲ್ಲೇ ಮಹತ್ವದ ತಿರುವನ್ನು ತಂದು ಕೊಟ್ಟವು.

ಕಾಮಲತೆಯೇ ತನ್ನ ಸರ್ವಸ್ವವೆಂದು ನಂಬಿದ್ದ ಅಲ್ಲಮನಿಗೆ, ಅವಳ ಸಾವು ದೊಡ್ಡ ಆಘಾತವಾಗಿ ಅನುಭಾವ, ಅಧ್ಯಾತ್ಮದ ಹಾದಿಗೆ ಹೊರಳಿಸುತ್ತದೆ; ಮಲುಹಣನಂತೂ "ಕಾಮಮುಂ ಪ್ರೇಮಮುಂ ಕಾಮಾರಿಗರ್ಪಿತಂ" ಎಂಬಂತೆ ತನ್ನ ಕಾಮ, ಪ್ರೇಮಗಳನ್ನೂ ತಾನು ನಂಬಿದ ಶಿವನಿಗೇ ಅರ್ಪಿಸಿದ್ದ. ನಶ್ವರವಾದ ತನ್ನದೇಹಕ್ಕೆ ಕೊಡುವ ಮಹತ್ವವನ್ನು ಶಿವನಿಗೆ ನೀಡುವಂತೆ "ಎನ್ನ ಮೇಲಿಕ್ಕುವಾ ಚಿತ್ತದಾತುರತೆಯಂ| ಪನ್ನಗಾಭರಣನೊಳು ಮಾಳ್ಪುದೆನ್ನೊಲುಮೆಯಂ" ಎಂದು ಹೇಳಿದ್ದೇ, ಆ ಮಾತಿನ ಅರ್ಥಗ್ರಹಿಸಿ ಭವದೂರನಾಗಿ ಭವದ ಬಂಧಗಳಿಂದ ಬಿಡಿಸಿಕೊಂಡು ಶಿವಮುಖಿಯಾಗುತ್ತಾನೆ. ಇಂಥದೇ ಸನ್ನಿವೇಶ ತುಳಸೀದಾಸನನ್ನು ರಾಮ ಭಕ್ತನನ್ನಾಗಿಸುತ್ತದೆ. ನಂಬಿಯಣ್ಣ ಸ್ತ್ರೀ ಸುಖವನ್ನು ಅನುಭವಿಸಲೆಂದೇ ಭೂ ಲೋಕದಲ್ಲಿ ಹುಟ್ಟುತ್ತಾನೆ.

ಪ್ರೀತಿ, ಪ್ರೇಮ, ಕಾಮಗಳು ಯಾರಿಗೂ ವರ್ಜ್ಯವಲ್ಲ. ಆದರೆ ಭವದ ಬದುಕಿನಲ್ಲಿ ಅಥವಾ'ಭವ'ದ ಕಲ್ಪನೆಯಲ್ಲಿ ಅದೂ ಒಂದು ಅಂತರ್ಗತಭಾಗವಾಗಿ ಬರುತ್ತದೆ. ಶಾಸ್ತ್ರಿಗೆ, ದಿನಕರನಿಗೆ ಇನ್ನಿತರ ವ್ಯವಹಾರಗಳೂ ಇವೆ. ಆದರೆ ಈ ಕಾದಂಬರಿಯಲ್ಲಿ ಲೇಖಕರು ಅವರ

ಬಿಡುಗಡೆಯ ಕನಸುಗಳು 'ಕಾಮೋತ್ಕಟ'ತೆಯಲ್ಲಿರುವ ಸಾಧ್ಯತೆಗಳನ್ನು ಕಾಣಿಸಿದ್ದಾರೆ. ಇಲ್ಲಿನ ಪಾತ್ರಗಳಿಗೆ ವೈವಾಹಿಕ ಸಂಬಂಧಗಳಿಗಿಂತ ವಿವಾಹಬಾಹಿರ ಸಂಬಂಧಗಳಲ್ಲಿ ಹೆಚ್ಚಿನ ತೃಪ್ತಿ. ಸಮಾಧಾನಗಳು ಸಿಗುತ್ತವೆ. ದಿನಕರನಿಗೆ ಹೆಂಡತಿಯ ಕಾಂಚನ ಭ್ರಮೆಯ ಉತ್ಕಟತೆಯಲ್ಲಿ, ತನ್ನ ಪ್ರೇಮೋತ್ಕಟತೆಗಳಲ್ಲಿ ವೈರಾಗ್ಯ ಅರಳ ಬಹುದೆಂಬ ಭರವಸೆ ಕಾಣಿಸಿಕೊಳ್ಳುತ್ತದೆಯಾದರೂ ನಿಜವಾಗಿಯೂ ವೈರಾಗ್ಯ ಸಾಧ್ಯವಾಗುವುದಿಲ್ಲ. ತನ್ನ ಪ್ರೇಯಸಿಯೊಬ್ಬಳು ಮಹಾಮಾತೆ ಆಗಿರುವುದನ್ನು ಅರಿತು ಪತ್ರ ಬರೆದು ತನಗೆ ಮುಕ್ತಿಯ ಸಾಧ್ಯತೆಯಿದೆಯೋ ಅಥವಾ ಮುಕ್ತಿಯ ಬಯಕೆ ಹುಟ್ಟಾ ಅನುಮಾನಿಯಾದ ತನಗೆ ಕೇವಲ ಕುತೂಹಲದ್ದೋ, ತಿಳಿಯ ಬಯಸುತ್ತಾನೆ. ಯಾವ ವಿಚಾರದಲ್ಲಿಯೂ ಅವನಿಗೆ ಬದ್ಧತೆಯಿಲ್ಲ. ತಾನು ತೊಟ್ಟ ಸ್ವಾಮಿಯ ವೇಷ ಕೇವಲ ತೋರಿಕೆ ಎನಿಸುತ್ತದೆ;ಶಬರಿಮಲೆ ಯಾತ್ರೆ ಪಿಕ್‌ನಿಕ್ ಎನಿಸುತ್ತದೆ.

ಪ್ರಯತ್ನಗಳಿಲ್ಲದ ಬಯಕೆಗಳು, ಬದ್ಧತೆಯಿಲ್ಲದ ವಿಕೃತ ಕಾಮಕೇಳಿಗಳು. ಅನುಮಾನಗಳು, ಗುಮಾನಿಗಳು ಕಠೋರ ಸತ್ಯಗಳನ್ನು ಒಪ್ಪಿಕೊಳ್ಳುವಲ್ಲಿ ಅಡ್ಡಗೋಡೆಗಳಾಗಿ ನಿಲ್ಲುತ್ತವೆ. ತಮ್ಮ ಅನುಮಾನಗಳಿಂದ ತಾವೇ ನರಳುತ್ತಾರೆ. ಹಿಂಸೆಗೆ ಒಳಗಾಗುತ್ತಾರೆ. ವೇದನೆಯಿಂದ ಅಧೀರರಾಗುತ್ತಾರೆ.ತಮ್ಮೊಳಗಿನ ಕ್ರೋಧಾದಿರಾಗಭಾವಗಳು ನಂಬಿದ ದೈವದ ಮೂಲಕವೇ ದೂರವಾಗಲು ಸಾಧ್ಯವೆಂದು, ಶಾಸ್ತ್ರಿಯಂತೂ ಭಗವತಿಯ ಎದುರು ನಿಂತು ಆರ್ತವಾಗಿ ಬೇಡುತ್ತಾನೆ.

ತಮ್ಮ ಅನೈತಿಕ ನಡವಳಿಕೆಯ ಬಗ್ಗೆ ಅರಿವಿದೆ. ಮಾಯೆಯಿಂದ ಬಿಡುಗಡೆ ಪಡೆಯಲು ಸಾಧ್ಯವಿಲ್ಲ ಎಂಬುದೂ ತಿಳಿದಿದೆ. ಆದರೂ ಅವರಿಂದ ದೂರ ಉಳಿಯುವುದು ಹೇಗೆಂದು ಮಾತ್ರ ತಿಳಿಯುವುದಿಲ್ಲ. ಪ್ರಸಾದನಿಗೆ 'ತಾನು ಯಾರು?' ಎಂಬುದನ್ನು ತಿಳಿಯಲು ಸಂಗೀತೋಪಾಸನೆ, ಸನ್ಯಾಸಗಳಿಂದ ಸಾಧ್ಯವಾಗುತ್ತದೆ. ಅವನ ದಿವ್ಯ ನಿರ್ವಿಕಾರದ ನೋಟ, ಶಾಂತ ಮುಖ ಮುದ್ರೆ ಆ ಅಲೌಕಿಕ ತನ್ಮಯತೆ ಸೂಚಿಸಲು ಮುಚ್ಚಿದ ಕಣ್ಣು,... ನೋಡ ನೋಡುತ್ತಿದ್ದಂತೆ ದಿನಕರನಿಗೆ ಭವದಲ್ಲಿದ್ದೂ ಭವದ ಎಗ್ಗಿಲ್ಲದಂತೆ ಇರುವುದು ಸಾಧ್ಯವೆಂಬ'' ಸತ್ಯವನ್ನು ಹೊಳೆಸುತ್ತದೆ.

ಒಟ್ಟಿನಲ್ಲಿ ಶಾಸ್ತ್ರಿ ದಿನಕರರು 'ಭವ'ದ ಬಿಡುಗಡೆಗೆ ಬಯಸಿ ಬಯಸಿ 'ಭವ' ಸ್ಥಿತಿಗೇ ಮರಳಿದರು. ಬದುಕಿನ ಶೈಲಿಗಳನ್ನು ಬದಲಾಯಿಸಿದರೂ. ಬಿಡುಗಡೆಗೆ ಹಂಬಲಿಸಿದರೂ'ಭವ'ಕ್ಕೇ ಮರಳಿ ಉಳಿಯುವಂತಾಗುತ್ತದೆ. ಭವನಿಮಜ್ಜನತೆಯನ್ನು ಸುಲಭವಾಗಿ ರೂಢಿಸಿಕೊಂಡರೂ ಲಘಿಮಾಕೌಶಲವಿಲ್ಲದೆ, ಸರಿಯಾದ ಮಾರ್ಗಗಳು ಹೊಳೆಯದೆ, ಅದಕ್ಕೆ ಬೇಕಾದ ಬದ್ಧತೆ, ಸಿದ್ಧತೆಗಳಿಲ್ಲದೆ. 'ಭವ' ವೇ ಅವರ ಪಾಲಿನ ಅನುಭವ ಸತ್ಯವಾಗುತ್ತದೆ. ಗಟ್ಟಿಯಾದ ಅಂತರಂಗ ಪರಿವೀಕ್ಷಣೆ, ತುಡಿತಗಳಿಲ್ಲದೆ ಹತಾಶೆ, ನಿರಾಶೆಗಳಲ್ಲಿಯೇ ಉಳಿದು ಸೋಲುತ್ತಾರೆ. ಕಟ್ಟ ಕಡೆಯದಾಗಿ ಲೇಖಕರು 'ಭವ'ವನ್ನು ಮೀರುವ ಪ್ರಯತ್ನಗಳಾಚೆಗೂ'ಭವ' ಅಥವಾ ಸಂಸಾರದಲ್ಲೇ ಉಳಿಯುವಂತಹ ಸ್ಥಿತಿಯಲ್ಲಿ 'ಭವ-ವೈರಾಗ್ಯ' 'ಸಂಸಾರ-ನಿರ್ವಾಣ' ಇವೆರಡರ ಅನನ್ಯತೆಯನ್ನು ಒಪ್ಪಿಕೊಂಡು ಹೋಗುವುದೇ ಬದುಕು ಎನ್ನುವ ನೆಲೆ ತಲುಪಿದಂತೆನಿಸುತ್ತದೆ.

ಇದಾದ ನಂತರ ಏಳು ವರ್ಷಗಳಾದ ಮೇಲೆ 2001ರಲ್ಲಿ ಮತ್ತೊಮ್ಮೆ ಬಹುನಿರೀಕ್ಷೆಗಳ ನಡುವೆ'ದಿವ್ಯ' ಕಾದಂಬರಿ ಪ್ರಕಟವಾಯಿತು. 'ಭವ'ಮತ್ತು 'ದಿವ್ಯ' ಎರಡೂ ಕಾದಂಬರಿಗಳಲ್ಲಿ

ಮೊದಲ ಬರವಣಿಗೆಗಳಲ್ಲಿ ಅಥವಾ ಕಥೆ, ಕಾದಂಬರಿಗಳಲ್ಲಿ ಕಾಣಿಸಿದ ತಾತ್ವಿಕ ಚಿಂತನೆಗಳಿಗಿಂತ ಭಿನ್ನವಾಗಿ ವೈರಾಗ್ಯ. ಬಿಡುಗಡೆ, ಅಧ್ಯಾತ್ಮ, ಅಲೌಕಿಕತೆ, ದೈವೀಶಕ್ತಿ ಇತ್ಯಾದಿಗಳನ್ನು ಬದುಕಿನ ಸಂದರ್ಭಗಳ ಮೂಲಕ ನಡೆಸುವ ಅನುಸಂಧಾನ, ಧ್ಯಾನಸ್ಥ ಸ್ಥಿತಿಯಲ್ಲಿ ನಡೆಸುವ ಚಿಂತನೆ. ಆಧುನಿಕ ವೈಚಾರಿಕತೆಯ ಜೊತೆ ಜೊತೆಗೇ ಮುಖಾ ಮುಖಿಯಾಗಿಸುತ್ತ ಹೋಗುವ ಸಂಕ್ರಮಣಾವಸ್ಥೆಯನ್ನು ಕಾಣುತ್ತೇವೆ.

ಸಾಮಾನ್ಯ ಮನುಷ್ಯನ ಕಟ್ಟಕಡೆಯ ಸತ್ಯ 'ಭವ' ಎನ್ನುವುದು 'ಭವ'ದ ಹೃದ್ಯಸ್ಥ ಆಶಯವಾದರೆ 'ದಿವ್ಯ' ಸಾಮಾನ್ಯ ಹೆಣ್ಣು ಮಗಳೊಬ್ಬಳು 'ದಿವ್ಯ'ದ ನೆಲೆಗೇರುವುದನ್ನು, ಆಕೆ ಸಾಕ್ಷಾತ್‌ಕಾರಕ್ಕೆ ಒಳಗಾಗುವುದನ್ನೂ ಸ್ಥಾಪಿಸುವ ಪ್ರಯತ್ನವಿರುವುದು ಗಮನಕ್ಕೆ ಬರುತ್ತದೆ. 'ದಿವ್ಯ'ದ ಅರ್ಥವಿಶ್ಲೇಷಣೆಗೆ ಹೊರಟಾಗ ಅದಕ್ಕೆ 'ದಿವ್ಯ' ದಿಬ್ಬ ಪರೀಕ್ಷೆ, brillant, heavenly celestial, charming, beautiful, excellent ಇತ್ಯಾದಿ ಹಲವಾರು ಅರ್ಥಛಾಯೆಗಳಿವೆ. ಇವುಗಳಲ್ಲಿ ಲೇಖಕರು ಕಾದಂಬರಿಯ ವಸ್ತುವನ್ನು ಯಾವ ಅರ್ಥದ ಹಿನ್ನೆಲೆಗೆ ವಿಸ್ತರಿಸಿದ್ದಾರೆಂದು ಕೊಂಡಾಗ, ಮುಖ್ಯವಾಗಿ ಪಣ, ಪರೀಕ್ಷೆ, ಸಾಕ್ಷಾತ್ಕಾರ ಇತ್ಯಾದಿ ಅರ್ಥಗಳಲ್ಲಿ. ಸಾಕ್ಷಾತ್ಕರವೆಂದಾದರೆ ಯಾರಿಗೆ ಸಾಕ್ಷಾತ್ಕಾರ? ಎಂಬ ಪ್ರಶ್ನೆಎದುರಾಗುತ್ತದೆ. ಪರೀಕ್ಷೆ ಎಂದರೂ 'ಪಣ' ಎಂದರೂ ಯಾರಿಗೆ ಎಂಬ ಪ್ರಶ್ನೆ ಮುಂದೆ ನಿಲ್ಲುತ್ತದೆ. ಗೌರಿಗೆ ಆಗುವ ದೈವ ಸಾಕ್ಷಾತ್ಕಾರವೂ ಆಗಬಹುದು ಅಥವಾ ಕಾದಂಬರಿಯಲ್ಲಿ ಬರುವ ಅಕ್ರಮ ಪ್ರಣಯ ಸಂಬಂಧಗಳಲ್ಲಿನ ರತಿಸುಖದ ಅಥವಾ ಉತ್ಕಟಕಾಮಾನುಭೂತಿಯ ಸಾಕ್ಷಾತ್ಕಾರವೂ ಆಗಬಹುದು. ಏಳು ವರ್ಷಗಳ ಅಂತರದಲ್ಲಿ ಬಂದರೂ 'ಭವ' ಮತ್ತು 'ದಿವ್ಯ' ಎರಡೂ ಕಾದಂಬರಿಗಳಲ್ಲಿ ಅಕ್ರಮ ಲೈಂಗಿಕ ಸಂಬಂಧಗಳು ವೈಭವೀಕರಣದೊಂದಿಗೇ ಬಂದಿವೆ. ಲೈಂಗಿಕ ಕ್ರಿಯೆಗಳ ಢಾಳಾದ ವರ್ಣನೆಗಳು ಕೆಲವೊಮ್ಮೆ ಬೇಸರವೆನಿಸುವಂತೆಯೂ ಇವೆ. ಕಾಮ, ರತಿಸುಖ, ಸಂಭೋಗಗಳ ಉತ್ಕಟ ಸ್ಥಿತಿಯಲ್ಲಿ ಮಾತ್ರ 'ಬಿಡುಗಡೆ' ಅಥವಾ ದೈವೀಸಾಕ್ಷಾತ್ಕಾರಗಳು ಸಾಧ್ಯವೆಂಬ ತಾತ್ವಿಕ ನಂಬಿಕೆಯಲ್ಲಿ ಇಂತಹ ವಿವರಗಳು ಬಂದಿರಬೇಕೆನಿಸುತ್ತವೆ. ಅಕ್ರಮ ಸಂಬಂಧಗಳಿಗೆ ಹೊರತಾದ 'ಧರ್ಮ ಸಂಯಮಿತ ದಾಂಪತ್ಯ' ಸಾಧ್ಯವೇ ಇಲ್ಲವೆನ್ನುವ ನೆಲೆಯ ತಾತ್ವಿಕ ಬದ್ಧತೆ ಬಹುಶಃ ಇಂತಹ ವಸ್ತು, ಪಾತ್ರಗಳ ಸೃಷ್ಟಿಗೆ ಕಾರಣವಾಗಿರಬೇಕು.

ಮೂರು ಭಾಗಗಳಲ್ಲಿ ಹಂಚಿಕೊಂಡು ಈ ಕಾದಂಬರಿ ಒಂದೊಂದು ಭಾಗದಲ್ಲಿಯೂ ನಿರ್ದಿಷ್ಟ ಪಾತ್ರಗಳ ಮತ್ತು ಕಥಾ ಘಟ್ಟಗಳ ಮೇಲೆ ವಿಶೇಷವಾದ ಒತ್ತನ್ನು ನೀಡುತ್ತದೆ. ಮೊದಲ ಭಾಗದಲ್ಲಿ ಗಂಗೆ, ಗೌರಿ, ಕೇಶವ ಅಕ್ಕು ಪಾತ್ರಗಳು ಪ್ರಮುಖವಾಗಿ ಅವರವರ ಗುಣ ಸ್ವಭಾವಗಳ ಸೂಕ್ಷ್ಮ ನೋಟವೊಂದನ್ನು ಸಾಧ್ಯವಾಗಿಸಿದರೆ, ಎರಡನೇ ಭಾಗದಲ್ಲಿ ಮಂಜಯ್ಯನ ಪುರಾಣವೇ ಮುಖ್ಯವಾಗುತ್ತದೆ. ಮೂರನೇ ಅಥವಾ ಕಡೆಯ ಭಾಗದಲ್ಲಿ ಗೌರಿಯ ಭವಿಷ್ಯದಲ್ಲಿ ಕಾಣಿಸಿಕೊಂಡಿದ್ದ ಗಂಧರ್ವ ಘನಶ್ಯಾಮ ತನ್ನ ಆದರ್ಶಗಳ ಕನಸುಗಳೊಂದಿಗೆ, ಅನುಷ್ಠಾನದೊಂದಿಗೆ ಅವತರಿಸುತ್ತಾನೆ. ಅಲ್ಲದೆ ಕೃಷ್ಣಶಾಸ್ತ್ರಿಗಳು ನುಡಿದ ಭವಿಷ್ಯದ

ಸಾಕ್ಷಾತ್ಕಾರ(ಗಂಧರ್ವನೊಂದಿಗೆ ಗೌರಿಯ ಮದುವೆಯಾಗುವುದೆಂಬ ಭವಿಷ್ಯ)ವಾಗುವುದರೊಂದಿಗೆ ಕಾದಂಬರಿಯ ಮೊದಲ ಭಾಗದೊಂದಿಗೆ ಬೆಸೆದು ಕೊಳ್ಳುತ್ತದೆ.

ದಯಿನೆಯಲ್ಲಿರುವ ಒಂಟಿ ಬ್ರಾಹ್ಮಣ ಕುಟುಂಬದಲ್ಲಿ ಕೇಶವ, ಅಕ್ಕು, ಗಂಗೆ, ಗೌರಿ ವಿಭಿನ್ನ ಸಂಬಂಧಗಳ ನೆಲೆಯಲ್ಲಿದ್ದೂ ಆತ್ಮೀಯವಾಗಿ ಬೆಸೆದುಕೊಂಡಿದ್ದಾರೆ. ಮೇಲು ನೋಟಕ್ಕೆ ಅಕ್ಕು, ಕೇಶವ ಸಂಪ್ರದಾಯ ಶೀಲ, ಮಡಿವಂತಿಕೆಯ ಜನರಂತೆ ಕಾಣಿಸಿಕೊಳ್ಳುತ್ತಲೇ ಅತ್ಯಂತ ಆಧುನಿಕ ವಿಚಾರಗಳಿಗೂ ಮಾನವೀಯ ಭಾವನೆಗಳಿಗೂ ತೆರೆದು ಕೊಂಡವರಾಗಿದ್ದಾರೆ. ಆಧುನಿಕ ವಿಚಾರ, ಕಾವ್ಯ, ಪುರಾಣ, ಭಾಗವತರಾಟದ ಬಗೆಗಿನ ಆಸಕ್ತಿಯನ್ನೂ ಉಳಿಸಿಕೊಂಡು ಅದರೊಟ್ಟಿಗೇ ರಹಸ್ಯವಾಗಿ ಕಾಮದ ಬಗ್ಗೆ ಚರ್ಚಿಸುತ್ತಲೇ ಯಾವುದೋ ಒಂದು ದಿವ್ಯ ಚಿಂತನೆಯತ್ತ ಹೊರಳುವ ಸೂಚನೆಯೂ ಕಾದಂಬರಿಯ ಮೊದಲಿಗೆ ಕಾಣಿಸಿಕೊಳ್ಳುತ್ತದೆ. ಕೇಶವ, ಗಂಗೆ, ಗೌರಿಯರ ನಡುವೆ ಕೀಟಲೆ, ಹಾಸ್ಯ, ಹುಡುಗಾಟದ ಚರ್ಚೆ, ಪ್ರಶ್ನೋತ್ತರಗಳಲ್ಲಿ, "ಯಾಕೆ ದೇವರು ದೇವತೆಗಳ ಪರಾನೇ ವಹಿಸೋದು? ಇವುಗಳ(ನಾಯಿಗಳ) ಅಂಡು ಯಾಕೆ ಗಂಟು ಹಾಕಿಕೊಂಡಿದೆ? ಮಕ್ಕಳನ್ನು ಮಾಡಲು ಋಷಿಗಳು ಯಾಕೆ ಮೃಗಗಳಾಗಿ ಕಾಡಿನಲ್ಲಿ ಕೂಡಬೇಕು?' ಎನ್ನುವ ಮುಗ್ಧ, ಕುತೂಹಲದ ಗಂಗೆಯ ಪ್ರಶ್ನೆಗಳಿಗೆ ಗಂಭೀರ ಜಿಜ್ಞಾಸೆಯ ಅರ್ಥ ವಿವರಣೆಯೇ ಬೇಕಾಗುತ್ತದೆ. ಗೌರಿ ಮುಂದೆ ದೈವೀ ಆವಾಹನೆಗೆ ಒಳಗಾಗಲಿರುವವಳು ಗಂಗೆಯ ಪ್ರಶ್ನೆಗಳಿಗೆ ತನ್ನ ಓದಿನಿಂದ ತಿಳಿದುಕೊಂಡ ವಿವರಣೆ ನೀಡುತ್ತಾಳೆ. ಅವಳ ಗ್ರಹಿಕೆಯ ಮೂಲದ ತರ್ಕದ ಪ್ರಕಾರ'ಈ ಮನುಷ್ಯ ದೇಹದಲ್ಲಿರುವಾಗ ನಮಗೆ ಪರಮಸುಖ ಸಾಧ್ಯವಿಲ್ಲ... ಅದಕ್ಕೇ ಋಷಿಗಳು ಮೃಗಗಳಾಗಿ ಕೂಡುತ್ತಾರೆ ಎನ್ನುವುದು ಗೌರಿಯ ವಿವರಣೆಯನ್ನು ತಲೆಯಲ್ಲಿ ತುಂಬಿಸಿಕೊಂಡಿರುವ ಗಂಗೆಗೆ ಹಾವು, ನಾಯಿ-ಹೀಗೆ ಯಾವುದೇ ಪ್ರಾಣಿಗಳು ಸಂಭೋಗದಲ್ಲಿ ಇರುವ ದೃಶ್ಯವನ್ನು ನೋಡಿದಾಗಲೆಲ್ಲ ರತಿಸುಖದ ಆಸೆಯ ಋಷಿಗಳೇ ಇರಬಹುದೆನ್ನುವ ನಂಬಿಕೆಯೇ ಬಲಗೊಳ್ಳುತ್ತಾ ಹೋಗುತ್ತದೆ.

ಒಮ್ಮೆ ಕಾಡಿನಲ್ಲಿ ಸಿಕ್ಕ ಜಿಂಕೆ ಮರಿಯೊಂದಿಗೆ ಅತಿಯಾದ ಸ್ನೇಹ ಬೆಳೆದು. ಇದ್ದಕ್ಕಿದ್ದಂತೆ ಒಂದು ದಿನ ಅದು ಕಾಡಿನಲ್ಲಿ ಮರೆಯಾಗಲು ಅದಕ್ಕಾಗಿ ಮುಗ್ಧ ಗಂಗೆ ಚಿಂತೆಗೊಳಗಾಗಿ ಕಡೆಗೆ ಅದರದೇ ಧ್ಯಾನದಲ್ಲಿ ಸಾವನ್ನಪ್ಪುತ್ತಾಳೆ. ಗಂಗೆಯ ಸಾವಿನ ಕ್ಷಣದಿಂದ ಗೌರಿಯಲ್ಲಿ ಆಕಸ್ಮಿಕ ಪರಿವರ್ತನೆ ಕಾಣಿಸಿಕೊಳ್ಳುತ್ತದೆ. ಇದರೊಂದಿಗೆ ಯಾವುದೋ ಒಂದು ಅಲೌಕಿಕ ಸನ್ನಿವೇಶ, ಪರಿವೇಶದ ನಿರ್ಮಾಣಕ್ಕೆ ಸಿದ್ಧತೆಯಾಗುತ್ತಿದೆ ಎಂದು ಎನಿಸಿದರೂ ಅಂತಹ ಸಂಗತಿಗಳೇನೂ ಕಾಣಿಸಿಕೊಳ್ಳುವುದಿಲ್ಲ. ಗೌರಿಯ ಮೌನ. ಕಪ್ಪುಬೆಕ್ಕಿಗೆ ಹಾಲು ಕುಡಿಸುವುದು, ಆಗಾಗ ಯಾವುದೋ ಪಾರವಶ್ಯಕ್ಕೆ ಒಳಗಾಗಿ ಹೇಳದೆ ಕೇಳದೆ ತನ್ನ ಪಾಡಿಗೆ ತಾನು ಗುಡ್ಡದ ಕಡೆಗೆ ನಡೆದು ಹೋಗುವುದು ಇತ್ಯಾದಿ ಕ್ರಿಯೆಗಳು ಅಥವಾ ನಡವಳಿಕೆ ಗೌರಿಯ ಬಗ್ಗೆ ಅಚ್ಚರಿ, ಅನುಮಾನ, ಆತಂಕ, ಭಯ ಮೂಡಿಸುವ ಹಾಗೆ ಕಾಣಿಸುತ್ತದೆ. ಅವಳ ವಿಚಿತ್ರ ನಡವಳಿಕೆಯ ಬಗ್ಗೆ ಅಕ್ಕು ಮತ್ತು ಕೇಶವರ ತರ್ಕ, ವಿವರಣೆಗಳು ಬೇರೆ ಬೇರೆ ಆಗುತ್ತವೆ. ಸ್ಮೃತಿ, ಪುರಾಣ, ವೇದಗಳನ್ನು ಓದಿಕೊಂಡ, ದೈವ, ದೇವರು ದೈವತ್ವ. ದೈವ ಸಾಕ್ಷಾತ್ಕಾರಗಳ ಬಗ್ಗೆ ವ್ಯಾಖ್ಯಾನಿಸಬಲ್ಲ, ತರ್ಕಿಸಬಲ್ಲ ಕೇಶವನಿಗೆ

ಗೌರಿಗೆ ದೈವ ಸಾಕ್ಷಾತ್ಕಾರ ಅಥವಾ ಅವಳಲ್ಲಿ ಯಾವುದೋ ಒಂದು ಅಲೌಕಿಕ ಶಕ್ತಿಯ ಆವಾಹನೆ ಆಗಿರಬೇಕೆಂದು ಎನಿಸಿದರೆ ಅಕ್ಕುವಿಗೆ, 'ಅವಳಿಗೆ ದೆವ್ವ, ಪಿಶಾಚಿ ಹಿಡಿದಿರಬೇಕೆನಿಸುತ್ತದೆ. ಇಂಥ ನಂಬಿಕೆಯಲ್ಲಿರುವ ಅಕ್ಕುವಿಗೆ ಗೌರಿಯ ಅಲೌಕಿಕ ಶಕ್ತಿ ಬಗ್ಗೆ ತಿಳಿಸಿ ಹೇಳುವುದು, ನಂಬಿಸುವುದು ಕೇಶವನಿಗೆ ಸಾಧ್ಯವಾಗುವುದಿಲ್ಲ ವಾಸ್ತವವಾಗಿ ಗೌರಿಯ ಈ ನಡವಳಿಕೆ ಅತಿಮಾನವ ಶಕ್ತಿಗಳ ಬಗ್ಗೆ ಯೋಚಿಸುವಷ್ಟು ಗಂಭೀರವಾದ್ದೇನೂ ಅಲ್ಲ. ತೀರಾ ಹಚ್ಚಿಕೊಂಡ ವ್ಯಕ್ತಿಗಳ ಸಾವಿನ(ಆಕಸ್ಮಿಕ) ಆಘಾತ ಮನಸ್ಸಿನ ಮೇಲೆ ವಿಚಿತ್ರ ಪರಿಣಾಮವನ್ನು ಬೀರುವುದರಿಂದ ಹೀಗೆ ಅನ್ಯಮನಸ್ಕತೆಯಲ್ಲಿರುವುದು, ತಾವೇನು ಮಾಡುತ್ತಿದ್ದೇವೆಂಬುದನ್ನು ಗ್ರಹಿಸಿದ ಸ್ಥಿತಿಗೆ ತಲುಪುವುದನ್ನು ಅನೇಕರ ವಿಷಯದಲ್ಲಿ ಕಾಣಿಸುವಂಥಾದ್ದೇ ಆಗಿದೆ. ಹಾಗಿರುವಾಗ ಗಂಗೆಯ ಸಾವಿನ ಆಘಾತ ಕಾರಣವೇ ಹೊರತಾಗಿ ಕೇಶವ ಭಾವಿಸುವಂತೆ ಅಲೌಕಿಕವಾದ, ಅವ್ಯಕ್ತವಾದ ಅಂಶಗಳನ್ನು ಆರೋಪಿಸುವ ಅಗತ್ಯ ಕಾಣಿಸುವುದಿಲ್ಲ. ಅಲ್ಲದೆ ಆ ಅಲೌಕಿತೆ, ದಿವ್ಯತೆ ಸಾಕ್ಷಾತ್ಕಾರವಾಗಿದೆ ಎಂದು ನಂಬುವುದೂ ಸಾಮಾನ್ಯ ಗ್ರಹಿಕೆಗೆ ಅತೀತವೆನಿಸುತ್ತದೆ. ಗೌರಿಯ ಈ ವಿಚಿತ್ರವರ್ತನೆಗೆ ಕಾರಣ ಹುಡುಕಿದಷ್ಟೂ ನಿಗೂಢಗೊಳ್ಳುವ ಸಾಧ್ಯತೆಗಳೇ ಹೆಚ್ಚಾಗುತ್ತವೆ. ಆದ್ದರಿಂದಲೇ ಕೇಶವನ ಭಾವನೆಯಲ್ಲಿ, ನಿಸರ್ಗದಲ್ಲಿ ಭೌತ ಜಗತ್ತಿನಲ್ಲಿ ನಡೆಯುವ ಹಲವು ಕ್ರಿಯೆಗಳಿಗೆ ಕಾರಣ ಹೇಳುವುದು ಕಷ್ಟವಾದಂತೆ ಗೌರಿಯ ವರ್ತನೆಗೂ ತರ್ಕಬದ್ಧವಾಗಿ ಎಲ್ಲರ ಗ್ರಹಿಕೆಗೆ ಬರುವಂತೆ ಹೇಳುವುದು ಸಾಧ್ಯವಾಗುವುದಿಲ್ಲ.

'ಎಲ್ಲಿಗೋ ಹೋಗುತ್ತಾಳೆ, ಗೂಢವನದೇವತೆಹಾಗೆ ಕಾಣಿಸುತ್ತಾಳೆ. ಕಲ್ಲು ಮುಳ್ಳು ನೋಡದೆ ತನಗೆ ತಾನೇ ಹಾಗೇ ಗಾಳೀಲಿ ತೇಲಿ ಹೋದಂತೆ ನಡೆದು ಸಾಗುತ್ತಾಳೆ... ಹೀಗಿರುವ ಗೌರಿ ಕಾಣುವವರಿಗೆ ಅಪರೂಪವೆನಿಸಿದರೂ ತನಗೆ ತಾನು ಸಹಜವೆಂಬಂತೆ ವರ್ತಿಸುವುದು ಕೇಶವನ ಅಚ್ಚರಿಗೆ, ಬೆರಗಿಗೆ ಕಾರಣ, ಕೇಶವ, ಅಕ್ಕು, ಗಂಗೆ ಇವರೆಲ್ಲರ ಜೊತೆಗೆ ಜೀವಂತಿಕೆಯಿಂದ, ಉತ್ಸಾಹ ಹುಡುಗಾಟಗಳಿಂದ ನಡೆದು ಕೊಳ್ಳುತ್ತಿದ್ದ ಗೌರಿಯಲ್ಲಿ ಗಂಗೆಯ ಸಾವಿನ ನಂತರವೇ ದಿಢೀರನೆ ಬದಲಾವಣೆ ಕಾಣಿಸಿ ಕೊಳ್ಳುವುದಕ್ಕೆ ಕಾರಣ, ಕೃಷ್ಣಶಾಸ್ತ್ರಿಗಳು ಬರುವವರೆಗೆ ಸ್ಪಷ್ಟವಾಗಿ ತಿಳಿದಿರುವುದಿಲ್ಲ. ಕೇಶವ, ಅಕ್ಕು, ಗೌರಿ ಪಾಲಿಗೆ ಅವಧೂತರಂತೆ ಕಾಣಿಸುವ ಕೃಷ್ಣಶಾಸ್ತ್ರಿಗಳಿಗೆ ಗೌರಿಯ ಮುಖ ನೋಡುತ್ತಿದ್ದಂತೆಯೇ ಅವಳಲ್ಲಿ ದಿವ್ಯತೆ, ಅಲೌಕಿಕತೆಗಳು ಮನೆ ಮಾಡಿರುವುದು ತಟ್ಟನೆ ಹೊಳೆದು ಬಿಡುತ್ತದೆ. ಅವಳಲ್ಲಿ ಮಂಗಳ ಗೌರಿ ನೆಲೆಸಿರುವುದನ್ನು ಮತ್ತು ಮೂರು ಲೋಕಗಳ ವಿದ್ಯಮಾನಗಳನ್ನು ಅರಿಯಬಲ್ಲ ಅಸಾಮಾನ್ಯ ವ್ಯಕ್ತಿತ್ವವನ್ನು ಗುರುತಿಸಿದ್ದೇ ಅಲ್ಲದೇ ಸಾವಿಗೀಡಾದ ಗಂಗೆಯೇ ವಿದ್ಯಾರೂಪಿಣಿಯಾಗಿ ಇವಳಲ್ಲಿ ನೆಲೆಸಿರುವ ವಿಚಾರವನ್ನೂ ತಿಳಿಯ ಹೇಳುತ್ತಾರೆ. ಅದ್ಭುತ ಅಲೌಕಿಕ ಶಕ್ತಿಗಳನ್ನು ಒಳಗೊಂಡ ಗೌರಿಗೆ ಸಾಕ್ಷಾತ್ ಶಿವರೂಪಿ ಗಂಡನೇ ಹುಟ್ಟಿಬರುತ್ತಾನೆ; ಅವನು ಪುರುಷ ಗಂಧರ್ವನೂ ಆಗಿರುತ್ತಾನೆ. ಹುಟ್ಟಿ ಬರುವಂತಹವನು ಇವಳಂತಹವಳನ್ನು ಪಡೆಯುವ ಅದೃಷ್ಟ ಜಾತಕನೂ ಆಗಿರುತ್ತಾನೆ' ಎಂದು ಇವಳ ಮತ್ತು ಇವಳ ಭಾವಿ ಗಂಡನ ಬಗ್ಗೆ ಎಲ್ಲವನ್ನೂ ತಿಳಿಸುತ್ತ, ಇನ್ನೂ ಮುಂದೆ ಹೋಗಿ, "ದನಗಾಹಿವನದೇವತೆಯೊಂದು

ಇವಳಲ್ಲಿ ಮೋಹಿತವಾಗಲಿದೆ... ಗ್ರಹಗಳ ಗತಿ ಈಗಿರುವಂತೆ ನೋಡಿದರೆಇವಳ ವಿಕಾಸಕ್ಕೆ ಅನುಗುಣವಾಗಿ ಗ್ರಹಗಳೇ ತಮ್ಮ ಗತಿಯಲ್ಲಿ ಬದಲಾಗಬಹುದು. ನಿತ್ಯ ಸತ್ತು ಹುಟ್ಟುವ ನಿತ್ಯರಿದ್ದಾರೆ ಎಂದು ಯೋಗಿಗಳು ಒಬ್ಬರು ನನಗೆ ಹೇಳಿದ್ದರು. ಇವಳು ಅಂತಹ ನಿತ್ಯೆ. ಲಜ್ಜಾರೂಪಿಯಾಗಿ ದೇವಿ ಇವಳಲ್ಲಿ ನೆಲೆಸಿರುತ್ತಾಳಾದ್ದರಿಂದ ಇವಳು ಮಾತಾಡಿ ಏನನ್ನೂ ಬಹಿರಂಗ ಪಡಿಸುವುದಿಲ್ಲ. ತನ್ನ ಶಕ್ತಿಯನ್ನು ತಾನೇ ಅರಿತವಳಂತೆ ವರ್ತಿಸಳು'' ಹೀಗೆ ಕೃಷ್ಣಶಾಸ್ತ್ರಿಗಳಿಂದ ಗೌರಿಯ ದಿವ್ಯತೆ, ಅತಿಮಾನವ ಶಕ್ತಿಗಳು, ಅಲೌಕಿಕ ವ್ಯಕ್ತಿತ್ವಗಳು ನೆಲೆಗೊಂಡಿರುವ ಮತ್ತು ಮುಂದೆ ಅವಳು ಮದುವೆ ಆಗಲಿರುವ ಪುರುಷನ ವಿಚಾರವಾಗಿಯೂ ಭವಿಷ್ಯದ ರೂಪದಲ್ಲಿ ಬಹಿರಂಗಗೊಳ್ಳುತ್ತವೆ. ಅವಳಿಂದ ಲೋಕ ಕಲ್ಯಾಣವಾಗುತ್ತದೆ. ಶಾಪ ವಿಮುಕ್ತಿಗಾಗಿ ನರಮನುಷ್ಯರನ್ನು ಕೂಡ ಬೇಕಾಗಿ ಬರುವ ಸೀತೆ, ಅಹಲ್ಯೆ, ತಾರಾ ಮೊದಲಾದವರಂತೆ ಇವಳು!' ಎಂದು ಹೇಳುವ ಮಾತಿನಲ್ಲಿ ಸೀತೆ, ತಾರಾ, ಅಹಲ್ಯೆಯರು ಮಾತ್ರ ದಿವ್ಯ ವ್ಯಕ್ತಿತ್ವ ಉಳ್ಳವರು. ದೇವತೆಗಳು, ರಾಮ, ವಾಲಿ, ಗೌತಮ ಮೊದಲಾದವರು ನರಮನುಷ್ಯರು ಎಂದು ಅರ್ಥವೇ? ಲೋಕಕಲ್ಯಾಣದ ನಿರೀಕ್ಷೆಗೆ ಓದುಗರ ಮನಸ್ಸು ಸಿದ್ಧ ಗೊಳ್ಳುತ್ತದೆ. ಅವಳ ವರ್ತನೆಯಲ್ಲಿ, ಮಾತಿನಲ್ಲಿ. ಪರಿಣಾಮಗಳಲ್ಲಿ ಏನನ್ನೂ ಅಸಾಮಾನ್ಯವಾದುದನ್ನು ಕಾಣುವುದಕ್ಕೇ ಆಗದೆ ಕೇಶವ, ಕೃಷ್ಣಶಾಸ್ತ್ರಿಗಳ ಅಭಿಪ್ರಾಯ, ನಂಬಿಕೆಗಳನ್ನು ನೆಚ್ಚಿಕೊಂಡು, ಕಾದಂಬರಿಯ ಕಟ್ಟಕಡೆಯವರೆಗೆ ಅದ್ಭುತ ತಿರುವುಗಳಿಗಾಗಿ, ಗೌರಿಯ ದಿವ್ಯತೆಯ ಅಭಿವ್ಯಕ್ತಿಗಾಗಿ ಕಾಯಬೇಕಾಗುತ್ತದೆ. ಅವಳ ಬಗ್ಗೆ ಕೃಷ್ಣಶಾಸ್ತ್ರಿಗಳು ಹೇಳಿರುವ ಎಲ್ಲ ಮಾತುಗಳು, ಮಾತುಗಳಾಗಿಯೇ ಉಳಿಯುತ್ತವೆಯೇ ಹೊರತಾಗಿ ಆ ದಿವ್ಯ ವ್ಯಕ್ತಿತ್ವ ಕಾರ್ಯಗತವಾಗಿ ಪ್ರಕಟವಾಗುವ ಸನ್ನಿವೇಶ,ಸಂದರ್ಭಗಳೊಂದೂ ಎದುರಾಗುವುದಿಲ್ಲ.ಲೇಖಕರ ಅಭಿಪ್ರಾಯದಲ್ಲಿಯಂತೆ ದಿವ್ಯತೆಯನ್ನು, ಅಲೌಕಿಕತೆಯನ್ನು ಒಳಗೊಂಡ ಗೌರಿಗೆ ತಕ್ಕನಾದ ಸಾಕ್ಷಾತ್ ಶಿವಸ್ವರೂಪಿ, ಪುರುಷಗಂಧರ್ವರ ಆಗಮನಕ್ಕೆ ಮನಸ್ಸನ್ನು ಸಿದ್ಧಗೊಳಿಸಿಕೊಳ್ಳುವಂತೆ ಅಕ್ಕುವಿಗೆ ಪುತ್ರ ಸಂತಾನದ ಭವಿಷ್ಯವಾಣಿಯ ಸಾಕ್ಷಾತ್ಕಾರಕ್ಕೂ, ವಿಧವೆಯಾದ ಅಕ್ಕುವಿನಿಂದ ಪುತ್ರ ಸಂತಾನಕ್ಕೂ ದಿಗ್ಭ್ರಮೆ, ಕುತೂಹಲಗಳೊಂದಿಗೆ ಮನಸ್ಸನ್ನು ಸಿದ್ಧಗೊಳಿಸಿ ಕೊಳ್ಳಬೇಕಾಗುತ್ತದೆ.

ಗೌರಿಗೆ ಸಮಾಜದಲ್ಲಿನ ತನ್ನ ಸುತ್ತಲಿನ ಕೆಳವರ್ಗದ ಕೆಳಜಾತಿಯವರ ಸಮಸ್ಯೆಗಳು, ಹೆಣ್ಣು ಗಂಡು ಸಂಬಂಧಗಳು ಅರಿವಿಗೆ ಬರುವುದು, ಮೂರು ಲೋಕಗಳ ವಿದ್ಯಮಾನಗಳನ್ನು ಅರಿಯಬಲ್ಲ ಸಾಮರ್ಥ್ಯದಿಂದಲ್ಲ; ತಾನು ಸಾಕಷ್ಟು ಓದಿಕೊಂಡಿದ್ದ ಕುವೆಂಪು, ಕಾರಂತ, ಬಂಕಿಮಚಂದ್ರ, ಗಳಗನಾಥ ಮೊದಲಾದವರ ಕಾದಂಬರಿಗಳಿಂದ;ಲೈಂಗಿಕ ಸಂಬಂಧ ವಿಚಾರಗಳ ಬಗ್ಗೆ ಲೇಖಕರೇ ಹೇಳುವಂತೆ'ಮೈನೆರೆದ ಮೇಲೆ ಗೌರಿ ತನ್ನ ದೇಹದಲ್ಲಿ ಕುತೂಹಲಿಯಾಗಿ ಮನೆಯಲ್ಲಿ ಇದ್ದ ಪುಸ್ತಕಗಳನ್ನೆಲ್ಲ ಓದಿದ್ದಳು. ಅವಳ ಗತಿಸಿದ ತಂದೆ ಜ್ಯೋತಿಷಿ ಮಾತ್ರವಲ್ಲದೆ ಆಯುರ್ವೇದ ಪಂಡಿತರೂ ಆಗಿದ್ದುದ್ದರಿಂದ ಅವರ ಮನೆಯಲ್ಲಿ ಆರೋಗ್ಯ ಮಾಹಿತಿಗೆ ಸಂಬಂಧಪಟ್ಟ ಪುಸ್ತಕಗಳೂ, ಗೋಪಾಲ ಕೃಷ್ಮರಾಯರು ಸಂಪಾದಿಸಿ ತರುತ್ತಿದ್ದ ಕಾಮ ಜೀವನಕ್ಕೆ ಸಂಬಂಧಿಸಿದ 'ಕಲಿಯುಗ' ಪತ್ರಿಕೆಯ ಸಂಚಿಕೆಗಳೂ ಇದ್ದು ಅವುಗಳನ್ನೆಲ್ಲಾ ಓದಿ ತಿಳಿದು ಕೊಂಡಿದ್ದರಿಂದ ಎಲ್ಲ ಪ್ರಾಣಿಗಳಿಗೂ

ಮಕ್ಕಳಾಗುವುದು ಹೇಗೆ? ಅದರ ಸುಖವೇನು? ಕಷ್ಟವೇನು? ಎಂಬುದನ್ನೆಲ್ಲ ಗಂಗೆಗೆ ವಿವರಿಸಿ ಹೇಳುತ್ತಿದ್ದಳು. ಕೆಳವರ್ಗದ ಹೆಣ್ಣುಗಳ ಮೇಲೆ ಬ್ರಾಹ್ಮಣ ಪುರುಷರ ಲೈಂಗಿಕ ಆಕ್ರಮಣಗಳು, ಅವರ ಶೋಷಣೆ, ಜಾತಿ ಸಂಬಂಧವಾದ ವಿಚಾರಗಳು ಎಲ್ಲವನ್ನು ತನ್ನ ಓದಿನ ಮೂಲಕ ಗ್ರಹಿಸಿ ಚಿಂತೆ, ಚಿಂತನೆಗಳನ್ನು ಮಾಡುತ್ತಿದ್ದಳು; ಊರಿನ ಹಲವಾರು ಬ್ರಾಹ್ಮಣ ಗಂಡುಗಳು ಶೂದ್ರ ಪ್ರಪಂಚದಲ್ಲಿ ಬದುಕುತ್ತಿದ್ದರೂ ತಮ್ಮ ತಮ್ಮ ಗುಟ್ಟುಗಳನ್ನು ಕಾಪಾಡಿಕೊಳ್ಳುತ್ತಿದ್ದ ಮೇಲು ಜಾತಿಯ (ಬ್ರಾಹ್ಮಣ) ಪುರುಷರ ಚಾಣಾಕ್ಷತೆಗೆ ಅಚ್ಚರಿ ಪಡುತ್ತಿದ್ದಳು. ಪ್ರತ್ಯಕ್ಷವಾಗಿ ತನ್ನ ಕಣ್ಣ ಮುಂದೆಯೇ ಕಾಣುವ ಗಂಡು ಹೆಣ್ಣುಗಳ ಸಂಬಂಧದ ರೀತಿಗಳು ತಾನು ಓದುವ ಕಾದಂಬರಿಗಳಲ್ಲಿ ಅವತರಿಸಿದಂತೆ ಅವಳಿಗನಿಸುತ್ತಿತ್ತು. ಒಂದು ನೆಲೆಯಲ್ಲಿ ತೀರಾ ಸಾಮಾನ್ಯ, ಸಹಜವೆಂಬಂತೆ ವರ್ತಿಸುತ್ತಿದ್ದ ಗೌರಿ ಕರಿಯ, ಕರಿಯನ ತಾಯಿ, ಘನಶ್ಯಾಮನ ತಂಗಿ ಮೊದಲಾದವರೆಲ್ಲರಿಗೂ ಇವಳು ದೇವತೆಯಾಗಿ, ಇವಳ ಸ್ಪರ್ಷಮಾತ್ರದಿಂದ ಎಲ್ಲ ಕಷ್ಟಗಳ ನಿವಾರಣೆಯಾಗುತ್ತದೆ ಎಂಬ ಬಲವಾದ ನಂಬಿಕೆಗೆ, ಆ ನಂಬಿಕೆಯ ಚಲಾವಣೆಗೆ ಯಾವುದೇ ಅಲೌಕಿಕ ಸನ್ನಿವೇಶವಾಗಲೀ, ಪವಾಡ ಸದೃಶ ಘಟನೆಯಾಗಲೀ ಸಂದರ್ಭವಾಗಲಿ ನಿದರ್ಶನವಾಗಿ ಕಾಣಿಸಿ ಕೊಳ್ಳುವುದಿಲ್ಲ. 'ಗುಡೀವಳಗಿನ ದೇವೀ ಥರ; ಮರಗಿಡ ಪಶುಪಕ್ಷಿ' ಅವಳೊಂದಿಗೆ ಮಾತನಾಡುತ್ತವೆ' ಅನ್ನುವ ವದಂತಿಗಳು, ಪುಕಾರುಗಳು ಅವಳ ಸುತ್ತ ಒಂದು ದಿವ್ಯತೆಯ ಪ್ರಭಾವಲಯದ ಭ್ರಮೆಯನ್ನು ಹುಟ್ಟಿಸುತ್ತದೆ. ಇವರ ಹೊರತಾಗಿ ಯಾರಿಗೂ ಅವಳ ದಿವ್ಯತೆಯು ಪ್ರತ್ಯಕ್ಷವಾಗಿ ಗ್ರಹಿಕೆಗೆ ಬರುವುದೇ ಇಲ್ಲ. ದಿವ್ಯತೆ ಅವಳ ವ್ಯಕ್ತಿತ್ವದ ಅಂತರ್ಗತ ಭಾಗವಾಗಿ ಪ್ರಕಟಗೊಳ್ಳುವುದೇ ಇಲ್ಲ. ದಿವ್ಯದ ಮೊದಲ ಭಾಗವೆಲ್ಲವೂ ಗೌರಿಯ ದಿವ್ಯತೆ ಅಲೌಕಿಕ ವ್ಯಕ್ತಿತ್ವಗಳನ್ನು ಸ್ಥಾಪಿಸುವ ಪ್ರಯತ್ನದಲ್ಲಿಯೇ ಮುಗಿಯುತ್ತದೆ. ಎರಡನೇ ಭಾಗದಲ್ಲಿ ಅಕ್ಕುವಿನ ಪುತ್ರ ಸಂತಾನದ ಭವಿಷ್ಯ ಸಾಕ್ಷಾತ್ಕಾರಗೊಳ್ಳುತ್ತದೆ. ಇದರ ಸಾಧ್ಯತೆಯ ಬಗ್ಗೆ ಮೂಡಿದ ಕುತೂಹಲಕ್ಕೆ ಸಮಾಧಾನ ದೊರೆಯುತ್ತದೆ. ಬಚ್ಚಲ ಮನೆಯಲ್ಲಿ ಒಲೆಯ ಪಕ್ಕದಲ್ಲಿ ತೊಟ್ಟಿಲಲ್ಲಿ ಹಣ, ಹಾಲಿನ ಪುಡಿಯ ಡಬ್ಬಗಳೊಂದಿಗೆ ಪ್ರತ್ಯಕ್ಷವಾಗುವ ಮಗು, ಮಡಿ ಹೆಂಗಸಾಗಿರುವ ಅಕ್ಕುವಿನ ಔದಾರ್ಯ, ಜಾತ್ಯಾತೀತ ಮನೋಭಾವದೊಂದಿಗೆ ಮಿಡಿಯುವ ಮಾವೀಯತೆಗಳಿಂದಾಗಿ ಅವಳ ಮಡಿಲ ಕೂಸಾಗುತ್ತದೆ. ಆಚಾರದಲಿ ಮಡಿವಂತಿಕೆ ಇದ್ದರೂ ವಿಚಾರದಲ್ಲಿ ಆಧುನಿಕಳಾಗುತ್ತಾಳೆ. ಜಾತಿ, ಕುಲಗಳ ಬಗ್ಗೆ ತಲೆ ಕಡಿಸಿಕೊಳ್ಳದೆ ಶಾಸ್ತ್ರಿಗಳುನುಡಿದ ಭವಿಷ್ಯವನ್ನು ನಿಜವಾಗಿಸುತ್ತಾಳೆ. ಅಕ್ಕುವಿನ ವಿಚಾರದಲ್ಲಿ ಭವಿಷ್ಯ ನಿಜವಾಗುತ್ತಿದ್ದಂತೆ ಗೌರಿಯ ಭವಿಷ್ಯದ ಬಗ್ಗೆ ನಂಬಿಕೆಗಳು ಬಲವಾಗುತ್ತವೆ; ಭರವಸೆಗಳು ಮೊಳೆಯ ತೊಡಗುತ್ತವೆ. ಮಗುವಿನೊಂದಿಗೆ ಪ್ರಾರಂಭವಾಗುವ ಕುತೂಹಲ ಮಂಜಯ್ಯ ಸಾಹುಕಾರರ ಮನೆಯ ಕತೆಯೊಂದಿಗೆ ಹೆಣೆದು ಕೊಂಡು ಮುಂದುವರೆಯುತ್ತದೆ. ಈ ಭಾಗದ ತುಂಬೆಲ್ಲ ಮಂಜಯ್ಯನವರ ರಾಜಕೀಯ ಸಿದ್ಧಾಂತಗಳು, ಗಾಂಧೀತತ್ವದಲ್ಲಿನ ನಂಬಿಕೆಗಳು, ಜಮೀಂದಾರರಾಗಿಯೂ ಫ್ಯೂಡಲ್ ಮನೋಧರ್ಮಕ್ಕಿಂತ ಬೇರೆಯಾಗಿ ತಳೆದ ಉದಾರ ಮನೋಭಾವ, ಗೇಣಿದಾರರ ಬಗ್ಗೆ ತಳೆದ ಉದಾರ ನೀತಿಗಳು ಆಧುನಿಕ ವಿಚಾರಗಳು, ಜೊತೆ ಜೊತೆಗೇ ರೂಢಿಸಿಕೊಂಡ ಧರ್ಮನಿಷ್ಠೆ;

ಅಲ್ಲದೆ ಇವೆಲ್ಲಕ್ಕೂ ಕಿರೀಟಪ್ರಾಯವೆಂಬಂತೆ ಇದ್ದ ರಸಿಕತೆ- ಮುಂತಾದವುಗಳಿಂದ ವರ್ಣರಂಜಿತವಾದ ವ್ಯಕ್ತಿತ್ವದ ಅನಾವರಣವಿದೆ. ಆದರ್ಶಗಳು ಆತ್ಮಲಾಭಗಳು ಎರಡನ್ನೂ ಸಮಾಳಿಸಕೊಂಡು ಹೋಗುವ ಜಾಣ್ಮೆ ಮಂಜಯ್ಯನವರದು. ಅತ್ಯಂತ ಪ್ರಗತಿಪರ ಆಧುನಿಕವಾದ ವಿಚಾರಗಳಿಂದಾಗಿಯೇ ವಿಧವೆಯಾದ ಮಗಳನ್ನು ಜನಾಭಿಪ್ರಾಯಕ್ಕೆ ಹೆದರದೆ ಓದಿಗೆ ಹಚ್ಚಿದರು, ಮಗನನ್ನು ವಿದೇಶಗಳಿಗೆ ಕಳಿಸಿದರು.

ಗಾಂಧೀಜಿಯ ಆದರ್ಶಗಳು ವಿಚಾರಗಳು ಹರಿಜನೋದ್ಧಾರ ಸಮಾಜಸೇವಾ ಕಾರ್ಯಗಳೆಲ್ಲವೂ ಮಂಜಯ್ಯನವರಿಗೆ ಸುಲಭಸಾಧ್ಯವಿಚಾರಗಳಾದವು. ತನ್ನ ವರ್ಗ, ಜಾತಿ, ಸಮುದಾಯಗಳಿಂದ ಆಗಾಗ ಎದುರಾಗುತ್ತಿದ್ದ ವಿರೋಧ, ಸಂಘರ್ಷಗಳು, ಅವರ ಬಲವಾದ ತಾತ್ವಿಕ ನಂಬಿಕೆಗಳು, ರಾಜಕೀಯ ಮುತ್ಸದ್ದಿತನ, ವ್ಯಕ್ತಿತ್ವದ ವರ್ಚಸ್ಸಿನಿಂದಾಗಿ, ಸಮಸ್ಯೆಗಳಾಗಿ ಉಳಿಯದೆ ಸುಲಭವಾಗಿ ಪರಿಹಾರವಾಗುತ್ತಿದ್ದವು. ಆದರೆ ಇಂತಹ ಅದ್ಭುತವಾದ, ಗಟ್ಟಿಯಾದ ವ್ಯಕ್ತಿತ್ವ ವನ್ನು ರೂಢಿಸಿಕೊಂಡು ಬಂದಿದ್ದ ಮಂಜಯ್ಯ ಗಣಪಯ್ಯನ ಪರವಾಗಿ ಯಾವುದೋ ಒಂದು ದುರ್ಬಲ ಕ್ಷಣದಲ್ಲಿ ಸುಳ್ಳು ಸಾಕ್ಷ್ಯವನ್ನು ಹೇಳುವುದರ ಮೂಲಕ, ಕೀರ್ತಿಯ, ಮೆಚ್ಚುಗೆಯ ಔನ್ನತ್ಯದಲ್ಲಿದ್ದವರು ತಮ್ಮ ನೈತಿಕ ಪತನಕ್ಕೆ ಕಾರಣರಾಗುತ್ತಾರೆ. ರಸಿಕತೆಯ, ಸ್ತ್ರೀ ವ್ಯಾಮೋಹದ ಪರಿಣಾಮವಾಗಿ ಗುಪ್ತ ರೋಗಗಳನ್ನು ತರಿಸಿಕೊಂಡು ಹಾಸಿಗೆ ಹಿಡಿದು ನರಳುವಂತಾಗುತ್ತದೆ.

ದಿವ್ಯಳೂ, ಶಕ್ತಿರೂಪಿಣಿಯೂ ಆದ ಗೌರಿಯ ಲೋಕಕಲ್ಯಾಣದ ಕಾರ್ಯ ಬಹುಶಃ ಇಲ್ಲಿಂದಲೇ ಪ್ರಾರಂಭವಾಗುತ್ತದೆನಿಸುತ್ತದೆ. 'ಲೋಕಕಲ್ಯಾಣ' ಲೋಕದ ಜನ ಸಮುದಾಯಕ್ಕೆ ಒಳ್ಳೆಯದಾಗುವ ಯಾವುದೇ ಪ್ರಯತ್ನಗಳು ಎಂದು, ಅರ್ಥೈಸುವುದಾದರೆ ಅಂತಹುದೇನೂ ಕಾಣುವುದಿಲ್ಲ. ಮಂಜಯ್ಯನ ಸೇವೆ, ಮಂಜಯ್ಯನ ಕುಟುಂಬದ ಸಮಸ್ಯೆಗಳಿಗೆ ಪರಿಹಾರಗಳು ಇವಳಿಂದಾಯಿತೆಂಬುದಂತೂ ಅಲ್ಲಗಳೆಯಲಾಗದ ಸತ್ಯವೇ ಆದರೂ ಅದನ್ನು 'ಲೋಕಕಲ್ಯಾಣ'ವೆಂದು ಭಾವಿಸುವುದಕ್ಕೆ ಮನಸ್ಸು ಹಿಂಜರಿಯುತ್ತದೆ. ಮಂಜಯ್ಯನ ಅಹರ್ನಿಶಿ ಸೇವೆ, ಅವರೊಂದಿಗೆ ಬೆಳೆಸಿಕೊಂಡ ಸಲಿಗೆಯಿಂದ ಗಳಿಸಿಕೊಂಡ ಅಧಿಕಾರವಾಣಿ, ಅಕ್ಕುವಿನ ಆರೈಕೆಯಲ್ಲಿ ಬೆಳೆಯುತ್ತಿದ್ದ ಮಗುವನ್ನು ಅದರ ಸ್ವಂತ ತಾಯಿಯ ಮಡಿಲಿಗೆ ಸೇರಿಸುವ ಪ್ರಯತ್ನ, ವಿಮಲ-ಮಿಂಗೇಲಿಯ ಸಂಬಂಧ ಸಾಮಾಜಿಕವಾಗಿ ಸ್ವೀಕೃತವಾಗುವಂತೆ ಮಾಡುವ ವ್ಯವಸ್ಥೆ, ಮಂಜಯ್ಯನವರ ಕುಟುಂಬ ಮೀನಾಕ್ಷಿ ಮತ್ತು ಮಗಳು ವಿನೋದಿನಿಯರಿಗೆ ನ್ಯಾಯಸಮ್ಮತ ಹಕ್ಕುಗಳನ್ನು ದೊರಕಿಸಿಕೊಡುವುದು- ಇವೆಲ್ಲವೂ ಒಂದು ಕುಟುಂಬದ ವಲಯಕ್ಕೆ ಮಾತ್ರ ಸೀಮಿತಗೊಂಡ ಪ್ರಯತ್ನಗಳೇ ಹೊರತು ಇದರಿಂದ ಆ ಕುಟುಂಬದ ಆಚೆಗಿನ ಯಾರಿಗೂ ಪ್ರಯೋಜನವಾಗುವಂತಹುಗಳಲ್ಲ. ಗೌರಿಯ ಕಾರ್ಯ ಕ್ಷೇತ್ರ ಸಂಪೂರ್ಣವಾಗಿ ಮಂಜಯ್ಯನವರ ಮನೆಗೆ ಸೀಮಿತಗೊಳ್ಳುತ್ತದೆ. ಮಂಜಯ್ಯನ ಮನೆಯ ಪರಿಧಿಯಲ್ಲಿ ಅವಳ ದಿವ್ಯವ್ಯಕ್ತಿತ್ವದ ನಂಬಿಕೆ ಹೆಚ್ಚಾಗುತ್ತ ಹೋಗುವುದರಿಂದ ಆ ಮನೆಯಲ್ಲಿ ಹೆಚ್ಚಿನ ಅಧಿಕಾರ ಮಾನ್ಯತೆಗಳು ಲಭಿಸುತ್ತವೆ. ಬಹುಶಃ ಆ ಮನೆ ತನ್ನ ಭಾವಿಗಂಡ, ಪುರುಷ ಗಂಧರ್ವನ ಜನ್ಮ ತಾಣವಾಗಿರುವುದರಿಂದಲೋ ಏನೋ ಆ ಮನೆಯ ಜೊತೆಗೆ ಒಂದು ಬಗೆಯ ಅವಿನಾಭಾವ ಸಂಬಂಧ ಏರ್ಪಡುತ್ತದೆ!

ತಂದೆ ಸಾವಿನ ಕ್ಷಣಗಳಲ್ಲಿ ಇಂಗ್ಲೆಂಡಿನಿಂದ ಅವತರಿಸಿದ ಘನಶ್ಯಾಮ ವಿಚಾರವಾದಿ. ಸಮಾಜವಾದಿ ಧೋರಣೆಗಳನ್ನು ಇರಿಸಿಕೊಂಡವನು ಸಣ್ಣ ಪ್ರಾಯದಿಂದಲೂ ರಾಜಕೀಯದಲ್ಲಿ ಮತ್ತು ನಂತರ ಜಯಪ್ರಕಾಶ್ ಮತ್ತು ನೆಹರೂ ಅವರ ಚಿಂತನೆಗಳಲ್ಲಿ ನಂಬಿಕೆ ಇಟ್ಟವನು ಅಪ್ಪನನ್ನೂ ಜಮೀಂದಾರಿ ವಿಚಾರಗಳಲ್ಲಿ ವಿರೋಧಿಸಿದ್ದವನು, ಜನ ಜೀವನದ ಸಮಸ್ಯೆಗಳಲ್ಲಿ ಭಾಗಿಯಾಗಲು ಬಿಡದ ಗೊಡ್ಡು ಬ್ರಾಹ್ಮಣ್ಯವನ್ನು ವಿರೋಧಿಸುತ್ತಲೇ ಬ್ರಾಹ್ಮಣ ಮಹಾಸಭೆಯ ಅಧ್ಯಕ್ಷನಾದುದನ್ನು ಘನ ಶ್ಯಾಮ ಖಂಡಿಸುತ್ತಾನೆ. ಇಂತಹ ಘನಶ್ಯಾಮನಿಗೆ ಗೌರಿಯಲ್ಲಿನ 'ದಿವ್ಯತೆ'ಗಳು ಕೇವಲ ಅಬ್ಸರ್ಡ್ ಎನಿಸುತ್ತದೆ. ಆದರೆ ಅವಳ ಆ ವರ್ತನೆ ಯಾವುದೋ ಒಂದು ಸ್ಥಿತಿಯಲ್ಲಿ ಆಗಬಹುದಾದ 'ಸ್ಪಿರಿಚ್ಯುಯಲ್' ಅನುಭೂತಿ ಇರಬಹುದೆಂದು ತರ್ಕಿಸುತ್ತಾನೆ.

ಕೃಷ್ಣಶಾಸ್ತ್ರಿಗಳ ಭವಿಷ್ಯವಾಣಿಯಲ್ಲಿನ ಗಂಧರ್ವ, ಗೌರಿಯಂತಹ ದೇವತೆಗೆ, ಈ ಹಳ್ಳಿಗಾಡಿನವರೆಗೆ ಯಾವ ಆಧುನಿಕ ಗಂಧರ್ವತಾನೇ ಬಂದಾನು? ಎಂಬ ಅನುಮಾನಕ್ಕೆ ಉತ್ತರವೆಂಬಂತೆ ಘನಶ್ಯಾಮನ ಪ್ರವೇಶವಾಗುತ್ತದೆ. ಕೃಷ್ಣಶಾಸ್ತ್ರಿಗಳ ಅಂತರ್ದೃಷ್ಟಿಗೆ ಕಾಣಿಸಿದ ಗಂಧರ್ವ ಇವನೇ ಆಗಿರುತ್ತಾನೆ. ಕಾದಂಬರಿಯ ನಿಜವಾದ ಬೀಜ ಕೇಂದ್ರವಿರುವುದು ಇಲ್ಲಿಯೇ? ಅಲೌಕಿಕ ವ್ಯಕ್ತಿತ್ವದ ಗೌರಿ ಮತ್ತು ಅತಿವಾಸ್ತವದ ನೆಲೆಯಲ್ಲಿನ ಆದರ್ಶ ಸಮಾಜ ವ್ಯವಸ್ಥೆಯ ನಿರ್ಮಾಣಕ್ಕೆ ತುಡಿವ ಘನಶ್ಯಾಮ. ಇವರಿಬ್ಬರ ಸಂಯೋಗದ ಮಹತ್ವದ ಸನ್ನಿವೇಶಗಳು ನಿರ್ಮಾಣವಾಗುತ್ತವೆ. ಪರಸ್ಪರ ವಿರದ್ಧವೆನಿಸುವ ಅಂತರ್ಮುಖಿ ಗೌರಿ ಮತ್ತು ಅಬ್ಬರ, ಪ್ರಚಾರಪ್ರಿಯನಾದ ಘನಶ್ಯಾಮರ ವಿವಾಹ ಒಂದು ಬಗೆಯ 'ಜೋಲ್ಟ್'ಗೆ ದಾರಿ ಮಾಡುತ್ತದೆ. ಮಾತುಕತೆ, ವಿರೋಧಗಳಿಲ್ಲದ ಘನಶ್ಯಾಮನ ಕೈ ಹಿಡಿಯಲು ಒಪ್ಪುವ ಗೌರಿಯ ಬಗ್ಗೆ ಆಶ್ಚರ್ಯವೆನಿಸಿದರೂ ಅವಳ ದಿವ್ಯ ದೃಷ್ಟಿಗೆ ಇವನೇ ಗಂಧರ್ವ ಪುರುಷ. ಇವನ ಮೂಲಕವೇ ಲೋಕ ಕಲ್ಯಾಣ ಸಾಧ್ಯ ಎಂದು ಹೊಳೆದಿರಬೇಕು!... ಇಲ್ಲವೆ ಈ ಮೊದಲು ಪ್ರಸ್ತಾಪವಾಗಿರುವಂತೆ ಸೀತೆ, ಅಹಲ್ಯೆ, ತಾರೆಯರು ಶಾಪದಿಂದಾಗಿ ನರಮನುಷ್ಯರ ಕೈ ಹಿಡಿಯಬೇಕಾಗಿ ಬಂದ ದೇವತೆಯರಂತೆ, ಇವಳಿಗೂ ಘನಶ್ಯಾಮನನ್ನು ವಿವಾಹವಾಗಬೇಕಾದ ವಿಧಿ ಲಿಖಿತವಿರಬೇಕು! ಸಾಕ್ಷಾತ್ ಶಿವನೇ ಮನುಷ್ಯರೂಪಿನಲ್ಲಿದ್ದಾನೆ; ಪುರುಷಗಂಧರ್ವನೇ ಇವನಾಗಿದ್ದಾನೆ! ಎಂದುಕೃಷ್ಣ ಶಾಸ್ತ್ರಿಗಳ ದೃಷ್ಟಿಯಲ್ಲಿ ಅಸಾಮಾನ್ಯವಾಗಿದೆ. ಘನಶ್ಯಾಮನಲ್ಲಿರುವ ಆದರ್ಶಗಳ ಕನಸು, ಲೋಕಹಿತಕ್ಕಾಗಿ ದುಡಿಯಬೇಕೆಂಬ ಅದಮ್ಯ ತುಡಿತಗಳು, ಜಾತ್ಯಾತೀತ, ಸರ್ವಸಮಾನತಾ ಸಮಾಜ ನಿರ್ಮಾಣ, ಪಿಡುಗು, ಅನಿಷ್ಟವಾಗಬಲ್ಲ ಮೂಢ ನಂಬಿಕೆ, ಸಾಂಪ್ರದಾಯಿಕತೆ, ಮುಂತಾದವುಗಳನ್ನು ವಿರೋಧಿಸಬೇಕೆಂಬ ಮನೋಭಾವ ಇರಿಸಿಕೊಂಡಿರುವ ಘನಶ್ಯಾಮ ಕೃಷ್ಣಶಾಸ್ತ್ರಿಗಳ ಪರಿಭಾಷೆಯಲ್ಲಿ ಲೋಕಹಿತ ಚಿಂತಕ. ಗೌರಿಯ ದಿವ್ಯ ವ್ಯಕ್ತಿತ್ವಕ್ಕೆ ಸರಿತೂಗಬಲ್ಲ ವ್ಯಕ್ತಿತ್ವದ ವ್ಯಕ್ತಿಯಾಗಿದ್ದಾನೆ. ಲೇಖಕರ ದೃಷ್ಟಿಯಲ್ಲಂತೂ ರಾಜತ್ವದ ಬಯಕೆ ಈಡೇರಿಸಬಲ್ಲ ಧೀರೋದಾತ್ತ ನಾಯಕನಾಗಿದ್ದಾನೆ ಘನಶ್ಯಾಮ: ಅಷ್ಟೇ ಅಲ್ಲ ಅವನು ಪರಮ ಸುಖಿ, ಕಷ್ಟಪಟ್ಟು ಕೆಲಸ ಮಾಡಬಲ್ಲವ; ಉದಾರಿ: ಜಾಣ. ನಿಲುವಿನಲ್ಲಿ ಬಲು ಸುಂದರ. ಆದರೆ ವೇಷ ಭೂಷಣಗಳಲ್ಲಿ ಸರಳ. ಯೂರೋಪಿನ ಜ್ಞಾನದಲ್ಲಿ ಪರಮಾಸಕ್ತ ಆದರೆ ದೇಶಪ್ರೇಮಿ... ಕ್ರಾಂತಿಕಾರಿ ನಿಲುವಿನ ಕಾಂಗ್ರಿಸ್ಸಿನ ಬೆಂಬಲಿಗ...'

ಇತ್ಯಾದಿ ಇತ್ಯಾದಿಯಾಗಿ ಘನಶ್ಯಾಮನನ್ನು ಸಕಲಗುಣ ಸಂಪನ್ನನಾಗಿ ವಿವರಿಸುವುದರ ಮೂಲಕ 'ಆಧುನಿಕ ಗಂಧರ್ವ' ಪರಿಕಲ್ಪನೆಯನ್ನು ಸಮರ್ಥಿಸಲು ಪ್ರಯತ್ನಿಸಿದ್ದಾರೆ. ಇದಕ್ಕಿಂತ ಹೆಚ್ಚಿನ ನಿರೀಕ್ಷೆಗಳು ಗೌರಿಯಂತಹ ದೇವತೆಯನ್ನು ಮದುವೆಯಾಗಲು ಇನ್ನೇನು ತಾನೇ ಬೇಕಾದೀತು? ಎನ್ನುವ ಸಮಾಧಾನ ಇಲ್ಲಿ ಅನಿವಾರ್ಯವಾಗುತ್ತದೆ.

ತನ್ನ ನಂಬಿಕೆ, ಆದರ್ಶ, ಕನಸುಗಳೆಲ್ಲವನ್ನೂ ಸಾಕಾರ ಗೊಳಿಸುವ ಭರದಲ್ಲಿ ಅನೇಕರ ಭಾವನಾತ್ಮಕ ನಂಬಿಕೆಗಳಿಗೆ ಆಘಾತವುಂಟು ಮಾಡುತ್ತಾನೆ. 500 ವರ್ಷಗಳ ಹಿಂದಿನ ಭೂ ವರಾಹಸ್ವಾಮಿ ಮೂರ್ತಿಯನ್ನು ಕೀಳಿಸಿ ತನ್ನ ಕೊಠಡಿಯಲ್ಲಿ ಅಲಂಕಾರವಸ್ತುವಾಗಿ ಇರಿಸಿಕೊಳ್ಳುತ್ತಾನೆ. ಪರಿಣಾಮವಾಗಿ ಗೌರಿಯಿಂದ ಛೀಮಾರಿ ಹಾಕಿಸಿಕೊಳ್ಳುತ್ತಾನೆ. ಮಲಸೋದರಿ ವಿನೋದಿನಿಯಿಂದಲೂ ಟೀಕೆಗೆ ಗುರಿಯಾಗುತ್ತಾನೆ. ಆದರೂ ಅವನ ರಭಸದ ತೀರ್ಮಾನಗಳಲ್ಲಿ ಜನಹಿತ, ವ್ಯಕ್ತಿಕ್ಷೇಮ, ಅಭ್ಯುದಯಗಳು ಕಾಣಿಸಿಕೊಳ್ಳುವುದರಿಂದ ಅವನ ಯಾವುದೇ ಕ್ರಾಂತಿಕಾರಕ ತೀರ್ಮಾನಗಳಿಗೆ, ಕಾರ್ಯಾಚರಣೆಗಳಿಗೆ ಸಾಮುದಾಯಕ ವಿರೋಧವಾಗಲೀ, ಪ್ರತಿಭಟನೆಯಾಗಲೀ ಎದುರಾಗುವುದಿಲ್ಲ. ಪ್ರಚಾರಪ್ರಿಯ ಪ್ರವೃತ್ತಿಯಿಂದಾಗಿ ತನ್ನ ವಿಚಾರ, ನಿಲುವುಗಳನ್ನು ಪತ್ರಿಕೆಗಳಲ್ಲಿ ಸುದ್ದಿಯಾಗಿಸಿ ಪ್ರಚಾರ ಪಡೆಯುತ್ತಾನೆ.ತಂದೆಯಿಂದಾದ ತಪ್ಪುಗಳನ್ನು ತಿದ್ದಿ ಸುಲಿಗೆಗೆ ದಾರಿ ಮಾಡುವ ಮೂಢ ಸಂಪ್ರದಾಯಗಳನ್ನು ಹತ್ತಿಕ್ಕಿ ವೈಚಾರಿಕ ಪ್ರಜ್ಞೆ, ಸಾಂಸ್ಕೃತಿಕ ವಿಕಾಸಗಳಿಗೆ ದಾರಿಯಾಗಬಲ್ಲ ವಿಧಾನಗಳನ್ನು ಹುಟ್ಟುಹಾಕುತ್ತಾನೆ. ಅಹಿಂಸಾತ್ಮಕ ನೆಲೆಯಲ್ಲಿ ಸಮಾಜ ಸುಧಾರಣೆಗೆ ಮುಂದಾಗುತ್ತಾನೆ. ಉಳುವವನಿಗೇ ಭೂಮಿಯ ಒಡೆತನವೆಂದು ಘೋಷಿಸುತ್ತಾನೆ. ಟ್ರಸ್ಟೊಂದರ ಸ್ಥಾಪನೆಯ ಮೂಲಕ ಸಮಾಜ ಹಿತ ಕಾರ್ಯಗಳಿಗೆ, ತಾಳಮದ್ದಲೆ ಕಲೆಯ ಅಕಾಡೆಮಿ ಸ್ಥಾಪನೆಯ ಮೂಲಕ ಸಂಸ್ಕೃತ ಕಲಿಕೆ, ಸಂಶೋಧನೆಗೆ ದಾರಿಮಾಡುತ್ತಾನೆ. ಮಡಿವಂತಿಕೆಯ ಕೇಶವನ ಹೊಸ ಅವತರಣದೊಂದಿಗೆ, ಬದಲಾವಣೆಯ ಸ್ವರೂಪದ ಕಲ್ಪನೆಯಾಗುತ್ತದೆ. ಘನಶ್ಯಾಮನನ್ನು ಇಲ್ಲಿಯವರೆಗೆ ಒಂದು ಪಾಸಿಟೀವ್ ಕ್ಯಾರೆಕ್ಟರ್ ಆಗಿ ಕಾಣಿಸುತ್ತ ಬಂದ ಲೇಖಕರು, ನಂತರ ಕೃಷ್ಣಶಾಸ್ತ್ರಿಗಳ ಮೂಲಕವೇ ಅವನ ಈ ಸಜ್ಜನಿಕೆ , ಸುಧಾರಣೆ ಇತ್ಯಾದಿ ಇತ್ಯಾದಿ ವಿಚಾರಗಳಲ್ಲಿ ಅನುಮಾನ, ಗುಮಾನಿ, ಮತ್ತು ಅವನ ತ್ಯಾಗ ಮಹತ್ವಾಕಾಂಕ್ಷೆಯ ಮೆಟ್ಟಿಲಾಗ ಬಹುದೆಂಬ ಆತಂಕಗಳು ಮೂಡುವಂತೆ ವಿವರಿಸಿದ್ದಾರೆ. ಆದರೆ ಈ ಅನುಮಾನಗಳು, ಆತಂಕಗಳು ನಿಜವಾಗದಿರಲಿ; ಅವನ ಅಧಿಕಾರದಿಂದ ಲೋಕಕ್ಕೆ ಒಳ್ಳೆಯದಾಗಲಿ' ಎಂದು ಪ್ರಾರ್ಥಿಸುತ್ತಾರೆ.

ಗೌರಿ ಘನಶ್ಯಾಮರು ಮೇಲು ನೋಟಕ್ಕೆ ವಿರುದ್ಧ ಮುಖಿಗಳಾಗಿ ಕಂಡರೂ ಆಂತರ್ಯದ ವಿಚಾರಗಳು, ಆಶಯಗಳು ಒಂದೇ ಆದರ್ಶದ ಸ್ಥಾಪನೆಯತ್ತ ಸಾಗುತ್ತದೆ. ಹೊಸ ಸಮಾಜದ, ಆದರ್ಶಸಮಾಜದ ನಿರ್ಮಾಣಕ್ಕೆ ಮನುಷ್ಯ ಪ್ರಯತ್ನಗಳ ಜೊತೆಗೆ ದೈವ ಪ್ರೇರಣೆ, ದೈವ ಸಹಾಯವೂ ಬೇಕೆಂಬ ಸತ್ಯದ ಸಾಕ್ಷಾತ್ಕಾರಕ್ಕೆ ಗೌರಿ ಘನಶ್ಯಾಮರು ಪರಸ್ಪರ ಪೂರಕ ತತ್ವಗಳಾಗಿ ಪರಿಣಮಿಸುತ್ತಾರೆ. ಘನಶ್ಯಾಮ, ಗೌರಿಯರಿಂದ ಎಲ್ಲವೂ ಬದಲಾಗುತ್ತದೆ. ಕೃಷ್ಣಶಾಸ್ತ್ರಿಗಳು ಗೌರಿಯ ವಿಚಾರದಲ್ಲಿ ಹೇಳಿದ ಲೋಕಕಲ್ಯಾಣ ಈ ರೀತಿಯಿಂದ ಎಂದು, ಸಮಾಧಾನದ ನಿಟ್ಟುಸಿರು ನಮ್ಮದಾಗುತ್ತದೆ. ವ್ಯಷ್ಟಿ ಸಮಷ್ಟಿಯ ನೆಲೆಯಲ್ಲಿ ಎಲ್ಲವೂ ಒಳಿತಾಗುತ್ತದೆ, ಕಾದಂಬರಿಯೂ ಸುಖಾಂತವಾಗುತ್ತದೆ.

ಕುಟುಂಬದವರೆಲ್ಲರಿಗೂ ಅವರವರಿಗೆ ಸಲ್ಲಬೇಕಾದ ನ್ಯಾಯಸಲ್ಲುತ್ತದೆ. ಕೇಶವ ಹೊಸ ವಿಚಾರ-ಹೊಸ ಅವತಾರಗಳೊಂದಿಗೆ ರೂಪಾಂತರಗೊಂಡು ವಿನೋದಿನಿಯನ್ನು ಮದುವೆಯಾಗುತ್ತಾನೆ. ಎಲ್ಲರ ವಿವಾಹಕ್ಕೂ ಕೃಷ್ಣಶಾಸ್ತ್ರಿಗಳೇ ಪ್ರತ್ಯಕ್ಷ ಸಾಕ್ಷಿಯಾಗುತ್ತಾರೆ.

ಇಲ್ಲಿ ಪ್ರಶ್ನೆ ಏಳುವುದು 'ದಿವ್ಯ'ದ ಶೀರ್ಷಿಕೆಗೂ, ಈ ಕಾದಂಬರಿಯ ಒಳ ಹೂರಣಕ್ಕೂ ಏನು ಸಂಬಂಧ? ಎನ್ನುವ ವಿಚಾರದಲ್ಲಿ 'ದಿವ್ಯ' ನಿಗೂಢ ಶಕ್ತಿಯಾಗಿರುವ ಗೌರಿ ಇಲ್ಲಿನ ಕೇಂದ್ರಪಾತ್ರ. ಅವರಿವರು ಅವಳ ಬಗ್ಗೆ ಹೇಳುವ ಮಾತುಗಳಿಂದ, ಕೃಷ್ಣಶಾಸ್ತ್ರಿಗಳ ಗ್ರಹಿಕೆಯಿಂದ 'ಗೌರಿ'ಗೆ 'ದಿವ್ಯತೆ' ಅಲೌಕಿಕತೆಗಳು ಆರೋಪಿತವಾಗಿವೆಯೇ ಹೊರತಾಗಿ ಇಡೀ ಕಾದಂಬರಿಯಲ್ಲಿ, ಅವಳ ನಡವಳಿಕೆ ಅತಿ ಸಹಜವೂ ಮಾನವೀಯವೂ ಆಗಿದೆ. ತಂಗಿಯ ಸಾವಿನ ಆಘಾತದಿಂದ ಮನಸ್ಸಿನ ಸ್ಥಿತಿಯಲ್ಲಿ ಸ್ವಲ್ಪ ಏರುಪೇರಾಗಿ. ದುಃಖ ಉಮ್ಮಳಗಳಿಂದ ವ್ಯಗ್ರವಾಗಿ ಮಾತು ಅಸಹನೀಯವಾಗಿ ಏಕಾಂತವನ್ನು ಬಯಸಿ ಪರಧ್ಯಾನದಲ್ಲಿ ಗುಡ್ಡದ ಕಡೆಗೆ ಆಗಾಗ ನಡೆದು ಹೋಗಿರಬಹುದು. ಇದು ಅತಿಮಾನುಷವೂ ಅಲ್ಲ, ಅಸಹಜವೂ ಅಲ್ಲ. ಮರ, ಗಿಡ, ಬಳ್ಳಿ, ಹಕ್ಕಿ ಪಶು, ಇತ್ಯಾದಿಗಳೊಂದಿಗೆ ಮಾತನಾಡಬಲ್ಲಳು ಎಂಬುದಕ್ಕಾಗಲೀ, ಅವಳ ಮೇಲೆ ಆರೋಪಿತನಾದ 'ದಿವ್ಯ' ವ್ಯಕ್ತಿತ್ವಕ್ಕೆ ಪೂರಕವಾಗುವ ಸನ್ನಿವೇಶ, ಸಂದರ್ಭಗಳಾಗಲೀ ನಿರ್ಮಾಣವಾಗುವುದಿಲ್ಲ. ಜಾತಿ-ಗೀತಿ, ಮಡಿ-ಮೈಲಿಗೆ ಯಾವುದನ್ನೂ ಪರಿಗಣಿಸುವುದಿಲ್ಲ. ಏಕೆಂದರೆ ಕೇಶವ ಗ್ರಹಿಸಿದಂತೆ ''ಈ ಲೋಕ ಮಾತ್ರ ಇದೆ. ಇದೆ ಎನ್ನಿಸುತ್ತಾ ಹೋದಾಗ, ಈ ಲೋಕವೇ ನಾನು ಎನ್ನಿಸಿದಾಗ ನನ್ನಲ್ಲೇ ಈ ಲೋಕ ಎನ್ನಿಸಿದಾಗ ಯಾವುದೂ ಇಲ್ಲ; ಎಲ್ಲವೂ ಇದೆ. ತನ್ಮಯವಾಗಿರುವುದೇ, ತುಂಬಿಕೊಂಡಿರುವುದೇ ಶೂನ್ಯವಿರಬಹುದು' ಎನ್ನುವ ಗಂಭೀರ ತರ್ಕ, ಚಿಂತನೆ ಸಮರ್ಥನೆಯಾದರೆ, ಕರಿಯನ ಅಸ್ಪೃಶ್ಯತೆಯನ್ನೇಕೆ ಉದಾರವಾಗಿ ತೆಗೆದುಕೊಳ್ಳುವುದಿಲ್ಲ. ಕರಿಯನಿಗೆ ಅನ್ನಹಾಕುವಾಗ ಮೆಟ್ಟಿಲ ಮೇಲಿಂದಲೇ ಅವನ ಕೈಗೆ ಭಾರಿಸುತ್ತಾಳೆ. ಗೌರಿ ತನ್ನ ಬದುಕಿನಲ್ಲಿ ಎಂದಿಗೂ ಜಾತಿ, ವರ್ಗ ತಾರತಮ್ಯಗಳ ಬಗ್ಗೆ ಮಾತುಗಳಿಂದಾಗಲೀ, ನಡವಳಿಕೆಯಿಂದಾಗಲೀ ತನ್ನ ವಿಚಾರಗಳನ್ನು ನಿಲುವುಗಳನ್ನು ವ್ಯಕ್ತಪಡಿಸುವುದಿಲ್ಲ. ಕಡೆಯ ಪಕ್ಷ 'ಘನಶ್ಯಾಮ' ತಂದೆಯ ಶ್ರಾದ್ಧದಲ್ಲಿ 'ಸಹಪಂಕ್ತಿ' ವ್ಯವಸ್ಥೆಯ ಮೂಲಕ ತನ್ನ ಕ್ರಾಂತಿ ಧೋರಣೆಯನ್ನು ಕಾರ್ಯಗತಗೊಳಿಸುತ್ತಾನೆ. ಗೌರಿಯಲ್ಲಿ ಲೋಕಕಲ್ಯಾಣದ ಅಂತರ್ನಿಹಿತ ಶಕ್ತಿ ಯಾವ ರೀತಿಯಿಂದಲೂ ಕಾಣಿಸಿ ಕೊಳ್ಳುವುದಿಲ್ಲ.

ಕಾದಂಬರಿಯ ಕೇಂದ್ರ ಪಾತ್ರಕ್ಕೂ, ಆಶಯಕ್ಕೂ ಸಂಬಂಧ ಪಡದ ಅನೇಕ ಸನ್ನಿವೇಶಗಳೂ, ಪಾತ್ರಗಳೂ ಧಾರಾಳವಾಗಿ ಕಾಣಿಸಿಕೊಂಡು ಮರೆಯಾಗುತ್ತವೆ. ಜಾತಿ ಸಂಘರ್ಷ, ವರ್ಗ ಸಂಘರ್ಷಕ್ಕೆ ದಾರಿಯಾಗಬಲ್ಲ ಲೈಂಗಿಕ ಸಂಬಂಧದ ಸನ್ನಿವೇಶಗಳಲ್ಲಿ ಅಸಹಾಯಕ ಕೆಳಜಾತಿಯ ವ್ಯಕ್ತಿಗಳು ಮೇಲು ವರ್ಗದವರ ಕ್ರೌರ್ಯಕ್ಕೆ ಬಲಿಯಾಗುತ್ತಾರೆ. ಕರಿಯ ಜಲಜ, ಸರಸ್ವತಿ-ದುರುಗಪ್ಪ, ವಿಮಲ-ಮಿಂಗೇಲಿ, ಮಂಜಯ್ಯ, ಮೀನಾಕ್ಷಿ, ತಾರಾ- ಇವರೆಲ್ಲರ ಹಾದರದಲ್ಲಿ ಕರಿಯ, ದುರುಗಪ್ಪ ಕೊಲೆಯಾಗುತ್ತಾರೆ. ದಿವ್ಯಶಕ್ತಿ ರೂಪಿಣಿಯಾದ ಗೌರಿಯ ವರದ ಹಸ್ತ, ವಿಮಲ-ಮಿಂಗೇಲಿ, ಮೀನಾಕ್ಷಿ, ವಿನೋದಿನಿ ಮುಂತಾದವರ ಮೇಲಿದ್ದು ಅವರೆಲ್ಲರಿಗೂ ಒಳಿತು ಮಾಡುತ್ತಾಳೆಯೇ

ಹೊರತಾಗಿ ಅಸಹಾಯಕ, ಜಾತಿಹೀನರ ವಿಚಾರದಲ್ಲಿ 'ದಿವ್ಯ' ಶಕ್ತಿ ಉದಾರವಾಗುವುದಿಲ್ಲವೇಕೆ? ಎಲ್ಲವನ್ನು ಗ್ರಹಿಸಬಲ್ಲ ದಿವ್ಯ ದೃಷ್ಟಿ ಸಾಮರ್ಥ್ಯಗಳಿರುವಾಗ ಆಗುವ ಅನಾಹುತಗಳನ್ನೇಕೆ ತಪ್ಪಿಸುವುದಿಲ್ಲ? ಇದಕ್ಕೆಲ್ಲ ಕಾದಂಬರಿಯಲ್ಲಿ ನಮಗೆ ಉತ್ತರ ಸಿಗುವುದಿಲ್ಲ.

ಕಾದಂಬರಿಕಾರರ ಬೌದ್ಧಿಕ ಜಗತ್ತಿನ ವ್ಯಾಪ್ತಿಯೊಳಗಿನ ಎಲ್ಲ ಇಸಂಗಳು ಸಾಕಷ್ಟು ಚರ್ಚೆಯಾಗುತ್ತವೆ. ಆದರೆ ಚರ್ಚೆಗೆ ಅನಿವಾರ್ಯವಾಗುವ ಗಂಭೀರ ಸನ್ನಿವೇಶಗಳೇ ನಿರ್ಮಾಣವಾಗುವುದಿಲ್ಲ. ಪುಟ್ಟೆ ಗೌಡರ ಸ್ನೇಹದ ಮಾತುಕತೆಗಳಲ್ಲಿ ಮತ್ತು ಘನಶ್ಯಾಮನ ಇಂಗ್ಲಿಷ್ ವಿದ್ಯಾಭ್ಯಾಸದಿಂದ ಮೂಡಿದ ಅರಿವಿನಿಂದಾಗಿ, ಮಂಜಯ್ಯನವರ ರಾಜಕೀಯ ವ್ಯಕ್ತಿತ್ವದಿಂದಾಗಿ ಗಾಂಧಿವಾದ ಸಮಾಜವಾದ, ಮಾರ್ಕ್ಸ್‌ವಾದ, ಲೋಹಿಯಾವಾದ ದೇಸೀವಾದ ಬ್ರಾಹ್ಮಣವಾದ, ಜಾತಿವಾದ, ಅಧ್ಯಾತ್ಮ, ಸ್ಮೃತಿ, ಪುರಾಣ, ಸಂಪ್ರದಾಯ, ಆಧುನಿಕತೆ ಇತ್ಯಾದಿ ಎಲ್ಲ ತಾತ್ವಿಕ ಬೌದ್ಧಿಕ ಚರ್ಚೆಗಳು ಕಾಣಿಸಿಕೊಳ್ಳುವುದಾದರೂ, ಎಲ್ಲವನ್ನೂ ಹೇಳ ಹೊರಟು ಕಡೆಗೆ ಏನನ್ನೂ ಹೇಳದೆ ಗೊಂದಲದೊಂದಿಗೆ ನಿಂತುಬಿಡುತ್ತದೆ. ಲೇಖಕರ ಬೌದ್ಧಿಕ ಹಸಿವನ್ನು ತಣಿಸಿಕೊಳ್ಳಲು ಒಂದು ವೇದಿಕೆಯಾಗಿ ಈ ಕಾದಂಬರಿಯ ಭಿತ್ತಿ ನಿರ್ಮಾಣವಾಗಿದೆ ಎನಿಸುತ್ತದೆ. ಕಥೆಯ ಬೆಳವಣಿಗೆ, ಪಾತ್ರಗಳ ಬೆಳವಣಿಗೆಯಲ್ಲಿ ಸಹಜತೆ ಕಾಣಿಸುವುದಿಲ್ಲ. ಬೆನ್ನುಡಿಯಲ್ಲಿ ಹೇಳಿಕೊಂಡಿರುವಂತೆಇಲ್ಲಿ ಯಾವುದೇ ಬಗೆಯ ಅಲೌಕಿಕ ಸಾಕ್ಷಾತ್ಕಾರವಾಗಲೀ, ಪಣ ಪರೀಕ್ಷೆಗಳ ಸಂಘರ್ಷವಾಗಲೀ ಕಾಣಿಸಿವುದಿಲ್ಲ. ಚರ್ವಿತ ಚರ್ವಣವಾಗಿ ಕೇಳಿಸುವ ವಿಚಾರಗಳು, ಅಪೂರ್ವವಲ್ಲದ ಅಪರಿಚಿತವಲ್ಲದ ಲೋಕದ ಪುನದರ್ಶನವಷ್ಟೇ ಈ ಕಾದಂಬರಿಯ ಅಂತರಾರ್ಥವಾಗಿ ಕಾಣಿಸುತ್ತದೆ. ಪಾತ್ರಗಳಲ್ಲಿ ಗಟ್ಟಿತನವಾಗಲೀ ವಿಚಾರಗಳಿಗೆ ಬದ್ಧತೆಯಾಗಲೀ ಕಾಣಿಸುವುದಿಲ್ಲ. ಮಂಜಯ್ಯv/sಘನಶ್ಯಾಮ, ಗೌರಿv/s ಘನಶ್ಯಾಮ ಮುಖಾ ಮುಖಿಯಾಗಿ ಸಂಘರ್ಷಕ್ಕೆ ಒಳಗಾಗಬಹುದಾಗಿದ್ದ ಎಲ್ಲ ಸಾಧ್ಯತೆಗಳಿದ್ದರೂ ಎಲ್ಲವೂಸಲಿಸಾಗಿ, ಘರ್ಷಣೆಯೇ ಇಲ್ಲದೆ compromise ಆಗಿ ಬಿಡುತ್ತದೆ.

ಭವ ಮತ್ತು 'ದಿವ್ಯ' ಅವರ ಕಡೆಯ ಕಾದಂಬರಿಗಳು ಅತಿ ಹೆಚ್ಚಿನ ನಿರೀಕ್ಷೆ, ಭರವಸೆಗಳನ್ನು ಹುಟ್ಟಿಸಿ ಕಡೆಗೆ ನಿರಾಶೆಗೊಳಿಸಿರುವುದಂತೂ ಸತ್ಯ. ಅತಿಯಾದ ರತಿ ಸುಖ, ಕಾಮೋತ್ಕಟ ಸ್ಥಿತಿಯಲ್ಲಿಯೇ ಬಿಡುಗಡೆ ಬಯಸಿ ಸೋಲುವ ಚಿತ್ರ ಭವದಲ್ಲಿ ಕಾಣಿಸಿದರೆ, ಯಾವುದೇ ದಿವ್ಯದ ಅನುಭೂತಿಯನ್ನು ಮೂಡಿಸುವಲ್ಲಿ ವಿಫಲವಾಗಿ ಅರ್ಥದ ಹುಡುಕಾಟವೇ ಓದುಗರಿಗೆ ಒಂದು ದಿವ್ಯವಾಗಿ ಪರಿಣಮಿಸಿದೆ 'ದಿವ್ಯ'- ಕಾದಂಬರಿ.



# ಮಲೆಗಳಲ್ಲಿ ಮದುಮಗಳು - ಒಂದು ವಿಶ್ಲೇಷಣೆ

ಕುವೆಂಪು 'ಮಹಾಕವಿ' ಯೂ ಹೌದು; ಮಹಾಕಾದಂಬರಿಕಾರರೂ ಹೌದು, ಕಾವ್ಯ ಸಂದರ್ಭದಲ್ಲಿ ಅವರನ್ನು ಗುರುತಿಸಿಕೊಳ್ಳುವುದಕ್ಕಿಂತಲೂ 'ಕಾದಂಬರಿ' ಪ್ರಕಾರದ ಮೂಲಕ ಗದ್ಯ ಸಾಹಿತ್ಯಕ್ಕೆ ಅವರು ಸಲ್ಲಿಸಿದ ಕೊಡುಗೆಯಿಂದಾಗಿ, ಹೆಚ್ಚಿನ ಅಧ್ಯಯನ ಅನುಸಂಧಾನಗಳಿಗೆ ಒಳಗಾಗಿಸಿ ಕೊಳ್ಳುವುದು ಮುಖ್ಯವಾಗುತ್ತದೆ. ಮಹಾಕಾವ್ಯ ಮತ್ತು ಮಹಾಕಾದಂಬರಿಗಳು ಅವರ ದೈತ್ಯ ಪ್ರತಿಭೆಗೆ ಸಾಕ್ಷಿಯಾಗಿದೆ. ಬರೆದದ್ದು ಎರಡೇ ಕಾದಂಬರಿಗಳಾದರೂ ಅವುಗಳಲ್ಲಿನ ವಸ್ತುವಿಸ್ತಾರ, ಸಂವಿಧಾನ, ಕೇಂದ್ರದ ಆಶಯಗಳು ಅನನ್ಯವೆನಿಸುತ್ತವೆ.

ಕುವೆಂಪು ಅವರು ಬರೆದ 'ಮಲೆಗಳಲ್ಲಿ ಮದುಮಗಳು' 'ಕಾನೂರು ಹೆಗ್ಗಡತಿ'- ಎರಡೂ ಕಾದಂಬರಿಗಳ ಕ್ರಿಯಾಕ್ಷೇತ್ರ ಮಲೆನಾಡು ಪ್ರದೇಶದ ಹಿಂದುಳಿದ 'ಹಳ್ಳಿಗಳು'. 1930ರ ದಶಕದಲ್ಲಿಯೇ ಎರಡೂ ಕಾದಂಬರಿಗಳ ರಚನೆ ಪ್ರಾರಂಭವಾಗಿದ್ದರೂ, ಬೇರೆ ಬೇರೆ ಕಾಲಘಟ್ಟಗಳನ್ನು ಒಳಗೊಂಡಿದ್ದರೂ, ಪ್ರಾದೇಶಿಕತೆಯ ವಿವರಗಳನ್ನು ಕಟ್ಟಿಕೊಡುವಲ್ಲಿ ಅವರ ಪ್ರತಿಭೆ ಸಮಾನವಾಗಿ ದುಡಿದಿದೆ. 'ಮಲೆಗಳಲ್ಲಿ ಮದುಮಗಳು' 19 ನೇ, ಶದ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯ ಸುತ್ತಮುತ್ತಲಿನ ಮಲೆನಾಡಿನ ಪರಿಸರಕ್ಕೆ ಸಂಬಂಧ ಪಟ್ಟಿದ್ದರೆ, 'ಕಾನೂರು ಹೆಗ್ಗಡತಿ' 20ನೇ ಶ ದ ಮೊದಲ ಭಾಗದ ಮಲೆನಾಡಿನ ಪರಿಸರವನ್ನು ಚಿತ್ರಿಸುತ್ತದೆ. 'ಕಾನೂರು ಹೆಗ್ಗಡತಿ' ಮೊದಲು ಪ್ರಕಟವಾಗಿದ್ದರೂ, 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಮುಂದುವರಿಕೆಯಾಗಿದೆ. ಆದರೂ'ಮಲೆಗಳಲ್ಲಿ ಮದು ಮಗಳು' ಕಾದಂಬರಿಯು ಅತ್ಯಂತ ವ್ಯಾಪಕವಾದ ಕಥಾ ಭಿತ್ತಿಯನ್ನು ಹೊಂದಿದ್ದು, ಅಲ್ಲಿ ಚಿತ್ರಿತವಾದ ಬದುಕು ಒಂದು 'ಪ್ರವೇಶ' ಒಂದು ಸನ್ನಿವೇಶ, ಒಬ್ಬವ್ಯಕ್ತಿ, ಒಂದು ಕುಟುಂಬಕ್ಕಷ್ಟೇ ಸೀಮಿತವಾಗದೆ, ಮಾನವ ಸಮಾಜವೇ ಇಡಿಯಾಗಿ, ಸಮಗ್ರವಾಗಿ, ದಟ್ಟ ಪ್ರಕೃತಿಯ ಹಿನ್ನೆಲೆಯೊಳಗೆ ಕಾಣಿಸಿಕೊಳ್ಳುತ್ತದೆ. ತೀರಾ ಹಿಂದುಳಿದ ಹಳ್ಳಿಯೊಂದರಲ್ಲಿ, ರೂಢಿಗತ ಬದುಕಿಗೆ ಸಹಜವಾಗಿ ಹೊಂದಿಕೊಂಡು ಬಾಳುತ್ತಿದ್ದ ಅನೇಕ ಜನ ಜಾತಿ ಸಮುದಾಯಗಳು, ಕುಟುಂಬಗಳು ಬಾಹ್ಯ ಪ್ರಕೃತಿ, ಅಂತ; ಪ್ರಕೃತಿಯಲ್ಲಿನ ಸ್ಥಿತ್ಯಂತರಗಳಿಂದಾಗಿ ಅನುಭವಿಸುವ ಕಷ್ಟ ಕಾರ್ಪಣ್ಯಗಳು, ಸಮಸ್ಯೆಗಳು, ಸವಾಲುಗಳು ಮುಂತಾದವುಗಳ ಸೂಕ್ಷ್ಮ ವಿವರಗಳು ಈ ಕಾದಂಬರಿಯ ಸಂಕೀರ್ಣತೆಯನ್ನು ಗಹನವಾಗಿಸಿದೆ.

ವಸಾಹತುಶಾಹಿ ಅವಧಿಯಲ್ಲಿ ಬರೆದ 'ಕಾದಂಬರಿ' ವಸಾಹತೀಕರಣದಿಂದಾದ ಪರಿಣಾಮಗಳಿಗೆ ನಿಸ್ಪಂದವಾಗಿರಲು ಸಾಧ್ಯವಿಲ್ಲ. ಮಿಶನರಿಗಳ ಮೂಲಕವಾಗಿ ಪಾಶ್ಚಿಮಾತ್ಯ ಸಂಸ್ಕೃತಿಯು ಅನೇಕ ಮುಖಗಳಲ್ಲಿ ತೀರಾ ತೀರಾ ಹಿಂದುಳಿದ ಹಳ್ಳಿಗಳನ್ನು ಪ್ರವೇಶಿಸುತ್ತಿದ್ದಂತೆ, ಮಲೆನಾಡಿನ ತೀರ್ಥಹಳ್ಳಿಯ ಸುತ್ತ ಮುತ್ತಲ ಹಳ್ಳಿಗಳನ್ನೂ ಪ್ರವೇಶಿಸುವುದರ ಮೂಲಕ, ಅಲ್ಲಿನ ಬದುಕಿನಲ್ಲಿಯೂ ಸಾಕಷ್ಟು ಬದಲಾವಣೆಗಳು ಆದ ವಾಸ್ತವ ಸಂಗತಿಗಳ ಹಿನ್ನೆಲೆಯಲ್ಲಿ, ಕುವೆಂಪು ಅವರು 'ಆಧುನಿಕತೆ'ಯ ಬಗೆಗಿನ ವಿಚಾರಗಳನ್ನು ಪ್ರತಿಕ್ರಿಯೆಗಳನ್ನು. ಪಾತ್ರಗಳ ಮೂಲಕ ಅಭಿವ್ಯಕ್ತಿಸಿದ್ದಾರೆ, ಒಂದು ಪ್ರದೇಶದ ಸಮಾಜವೇ ಆದರೂ ಅದು ಇಡೀ ಮಾನವ ಸಮಾಜದ ಸಂಕೀರ್ಣ ಬದುಕನ್ನು ಪ್ರತಿನಿಧಿಸುತ್ತದೆ.

'ಮಲೆಗಳಲ್ಲಿ ಮದು ಮಗಳು' ಕಾದಂಬರಿಯಲ್ಲಿ ಯಾವುದೇ ಒಂದು ಸೀಮಿತ'ಕೇಂದ್ರ ಪ್ರಶ್ನೆ'ಯಿಲ್ಲ. ಇಲ್ಲಿ ಒಬ್ಬ ವ್ಯಕ್ತಿಯ ಕತೆಯಾಗಲೀ, ಒಂದು ಕುಟುಂಬದ ಚರಿತ್ರೆಯಾಗಲೀ ಮುಖ್ಯವಾಗುವುದಿಲ್ಲ. ಲೇಖಕರೇ ತಮ್ಮ ಕಾದಂಬರಿಯಲ್ಲಿ, ತಮ್ಮ ಮೊದಲನುಡಿಯಲ್ಲಿ ಹೇಳಿ ಕೊಂಡಿರುವಂತೆ" ಇಲ್ಲಿ ಯಾರೂ ಮುಖ್ಯರಲ್ಲ, ಅಮುಖ್ಯರಲ್ಲ. ಯಾವುದೂ ಯಃ ಕಶ್ಚಿತವಲ್ಲ. ಇಲ್ಲಿ ಯಾವುದಕ್ಕೂ ಮೊದಲಿಲ್ಲ; ಯಾವುದಕ್ಕೂ ತುದಿಯಿಲ್ಲ; ಯಾವುದೂ ಎಲ್ಲಿಯೂ ನಿಲ್ಲುವುದಿಲ್ಲ; ಕೊನೆಮುಟ್ಟುವುದೂ ಇಲ್ಲ".- ಎಂಬ ಈ ಮಾತುಗಳು ಮಾನವ ಜನಾಂಗದ ಜೀವನ ಚರಿತ್ರೆ ಯಾವುದೇ ಒಂದು ಕಾಲಘಟ್ಟಕ್ಕೆ ಸೀಮಿತವಾಗದೆ, ಸಾರ್ವತ್ರಿಕತೆ ಸಾರ್ವಕಾಲಿಕತೆಯೊಂದಿಗೆ ಅದರ ನಿರಂತರ ಚಲನಶೀಲತೆಗಳನ್ನು ಸೂಕ್ಷ್ಮವಾಗಿ ಧ್ವನಿಸಿದ್ದಾರೆ.

ವಸ್ತುವಿನ ಹರಹು ವಿಶಾಲವಾಗಿದ್ದು ಹೊಸಗನ್ನಡ ಸಾಹಿತ್ಯದಲ್ಲಿ ಮೊದಲಿನದಾಗಿದೆ. ಮಲೆನಾಡಿನ ಸೃಷ್ಟಿಯ ಸಾರವನ್ನು ಪ್ರಾದೇಶಿಕ ಜೀವನದ ವೈವಿಧ್ಯತೆ, ಸಂಕೀರ್ಣತೆಗಳೆಲ್ಲವನ್ನು ಕಾಣಿಸಿದ್ದಾರೆ. ಸಮಷ್ಟಿ ಬದುಕಿನ ಅತ್ಯಂತ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನೂ ಸಮಗ್ರವಾಗಿ, ಸಹಜವಾಗಿ ಕಟ್ಟಿಕೊಟ್ಟಿದ್ದಾರೆ. ಮಲೆನಾಡಿನ ನೆಲದ ಅಂತಸ್ಸತ್ವವನ್ನು ಅರಗಿಸಿಕೊಂಡ ಇಲ್ಲಿನ ಪಾತ್ರಗಳು ಒಂದು ಜನಾಂಗದ ಸಮಗ್ರ ಜೀವನದರ್ಶನ, ಬದುಕಿನ ಸಂಕೀರ್ಣತೆಯ ನಿರೂಪಣೆ ಮೊದಲಾದವು ಕಾದಂಬರಿಕಾರನ ಅದ್ಭುತ ನಿರೀಕ್ಷಣಾ ಸಾಮರ್ಥ್ಯಕೆ, ಹಿಡಿದ ಕನ್ನಡಿಯಾಗಿದೆ.

ಕೇಂದ್ರ ಪಾತ್ರವೆಂದು ಇಲ್ಲದಿದ್ದರೂ ಮದುಮಗಳಾದ ಚಿನ್ನಮ್ಮನ ಕಡೆಗೇ ಹೆಚ್ಚಿನ ನಿರ್ದೇಶವಿದೆ. ಅವಳು ಮದುಮಗಳಾಗುವ ಹಿನ್ನೆಲೆಯಲ್ಲಿ ಅನೇಕ ಘಟನೆಗಳು ಸಂಭವಿಸುತ್ತವೆ. ನೇರವಾಗಿ ಅದಕ್ಕೆ ಸಂಬಂಧಿಸಿದವು ಕೆಲವು ಘಟನೆ, ವ್ಯಕ್ತಿಗಳಿದ್ದರೆ, ಮತ್ತೆ ಕೆಲವು ಘಟನೆಗಳು, ವ್ಯಕ್ತಿಗಳು ಯಾವುದೇ ಸಂಬಂಧವನ್ನು ಹೊಂದಿವೆಯೆಂದು ಅನಿಸದಿದ್ದರೂ ಎಲ್ಲಿಯೋ ಒಂದೆಡೆಯಲ್ಲಿನ ಸೂಕ್ಷ್ಮಸಂಬಂಧ ಗೋಚರಿಸುತ್ತದೆ. ಚಿನ್ನಮ್ಮ ಮದು ಮಗಳಾಗುವುದರಲ್ಲಿನ ಸಮಸ್ಯೆಗಳು, ಸಾಹಸಗಳ ಜೊತೆಗೆ ಮಲೆನಾಡಿನ ಹಲವು ಜಾತಿ, ವರ್ಗಗಳಿಗೆ, ಧರ್ಮಗಳಿಗೆ, ವಿಭಿನ್ನ ಸ್ವಭಾವ, ಮನೋಧರ್ಮಗಳಿಗೆ ಸಂಬಂಧಿಸಿದ ವ್ಯಕ್ತಿಗಳ, ಕುಟುಂಬಗಳ ಮತ್ತುಬದುಕಿನ ಮೂಲಭೂತ ಸಮಸ್ಯೆಗಳಾದ ಹೆಣ್ಣು, ಗಂಡು ಸಂಬಂಧ,[ದಾಂಪತ್ಯದ ಚೌಕಟ್ಟಿನ ಒಳಗೆ, ಮತ್ತು

ಸಂಚಾರ ಹೊರಗೆ! ಮುಂತಾದವುಗಳೆಲ್ಲ ಇಲ್ಲಿ ಚರ್ಚಿತವಾಗುತ್ತವೆ. ಹೆಣ್ಣು ಗಂಡುಗಳ ಪ್ರೀತಿಯ ಸೆಳೆತ, ಕಾಮ, ಲೈಂಗಿಕ ಚಟುವಟಿಕೆಗಳು, ವ್ಯಭಿಚಾರ, ಅತ್ಯಾಚಾರ ಇತ್ಯಾದಿ ವಿವರಗಳು ಹೇರಳವಾಗಿ ಕಾಣಿಸಿಕೊಂಡಿವೆ.

ಇದರ ಜೊತೆಗೆ ಹೊರಗಿನ ಪ್ರಭಾವಗಳು ಈ ಕೊಂಪೆಯೊಳಗಿನ ಜಡವಾದ ಬದುಕುಗಳಲ್ಲಿ ಒಂದು ಬಗೆಯ ಸಂಚಲನಕ್ಕೂ ಈ ಲೈಂಗಿಕ ಸಂಬಂಧಗಳು ಕಾರಣವಾಗುವುದನ್ನು ಮತ್ತು ಅವರ ಬದುಕಿನಲ್ಲಿನ ಜೀವನ ಕ್ರಮದ ಬದಲಾವಣೆ ಮತ್ತು ಆಲೋಚನೆಗಳಲ್ಲಿಯೂ ವ್ಯತ್ಯಯವಾಗುವುದನ್ನು ನಿರೂಪಿಸುತ್ತವೆ.

ವಿಸ್ತೃತವಾದ ವಾಸ್ತವ ಸಂಗತಿಗಳ ನಡುನಡುವೆ ಅವಾಸ್ತವ ಸಂಗತಿಗಳು ಸುಳಿಯುವುದಕ್ಕೆ ಸರಿಯಾದ ಸಮರ್ಥನೆ ಈ ಕಾದಂಬರಿಯಲ್ಲಿ ಸಾಧ್ಯವಾಗದೆ ಹೋಗಿದೆ.ಗಡ್ಡದಯ್ಯನ ಪ್ರಸಂಗ, ವಿವೇಕಾನಂದರ ವಿಚಾರ, ದಕ್ಷಿಣೇಶ್ವರದಲ್ಲಿನ ತರುಣ ಸನ್ಯಾಸಿಗಳಿಗೆ ಆಗುವ ಅತಿಮಾನುಷ ದರ್ಶನ ಇವೆಲ್ಲವುಗಳು, ಜೊತೆಗೆ ಚಿನ್ನಮ್ಮನಿಗೆ ಭಾವ ಮುಕುಂದಯ್ಯನ ಜನ್ಮ ಜನ್ಮಾಂತರದ ಗಂಡನೆಂಬುದರ ಅರಿವು ಮೊದಲಾದ ವಿವರಗಳು ತೀರಾ ಅಸಂಗತ ಮತ್ತು ಅವಾಸ್ತವವಾಗಿ ಕಾಣುತ್ತವೆ. ಇವು ಕಾದಂಬರಿಕಾರರಾದ ಕುವೆಂಪು ಅವರ ಮೂಲಭೂತ ಆಶಯಕ್ಕೆ ಎಷ್ಟು ಪೂರಕವಾಗಬಹುದು ಎನ್ನುವುದೂ ಒಂದು ಪ್ರಶ್ನೆಯಾಗುತ್ತದೆ. ಬಹುಶಃ ವಿವಿಧ ಮನೋಧರ್ಮದ, ಆಲೋಚನಾಸ್ತರಗಳ ವ್ಯಕ್ತಿಗಳಿರುವಾಗ, ಸನಾತನ ನಿಷ್ಠೆ, ಪವಾಡಗಳಲ್ಲಿ, ಅತಿ ಮಾನುಷ ಅನುಭವಗಳಲ್ಲಿ ನಂಬಿಕೆಯಿಟ್ಟಿರುವಂತಹವರೂ ಇರುವ ಸಾಧ್ಯತೆಯ ಹಿನ್ನೆಲೆಯೇ ಇದಕ್ಕೆ ಸಮರ್ಥನೆಯಾಗಬಹುದು. ಈ ಕಾದಂಬರಿಯ ಕತೆ ಗುತ್ತಿ ಎಂಬ ಹೊಲೆಯನ ಪ್ರಯಾಣದೊಂದಿಗೆ ಪ್ರಾರಂಭವಾಗುತ್ತದೆ. ಅವನ ಪ್ರಯಾಣ ಮುಂದುವರೆದಂತೆ ಕಾದಂಬರಿಯ ಉಳಿದ ಪಾತ್ರಗಳು ಅವನ ಮೂಲಕ ಪರಿಚಯಗೊಳ್ಳುತ್ತಾ ಹೋಗುತ್ತವೆ. ಗುತ್ತಿ ಹಲವು ಕುಟುಂಬಗಳ ಗುಟ್ಟುಗಳನ್ನು ಬಲ್ಲವನು. ಅವನ ಅಕ್ಕರೆಯ ಆತ್ಮೀಯ ಸಹಚರ ಮನುಷ್ಯರು ಯಾರೂ ಅಲ್ಲ. ಅವನ ನಾಯಿ ಹುಲಿಯನೇ ಅವನ ಗೆಳೆಯ. ಈ ಗುತ್ತಿ ಮತ್ತು ನಾಯಿಯ ಜೋಡಿ ಸುತ್ತಮುತ್ತಲಿನ ಹಳ್ಳಿಗಳಾದ ಬೆಟ್ಟಳ್ಳಿ, ಕೋಣೂರು, ಹೂವಳ್ಳಿ, ಮೇಗಳ್ಳಿ ಮುಂತಾದವುಗಳ ಜೊತೆಗೆ ಸಂಪರ್ಕ ಮಾಧ್ಯಮವಾಗುತ್ತದೆ. ಸೇಸನಾಯ್ಕ, ತಿಮ್ಮನಾಯ್ಕ, ಕಣ್ಣಾಪಂಡಿತರು, ಹಳೆಮನೆ ಸುಬ್ಬಣ್ಣ ಹೆಗ್ಗಡೆ, ಸಿಂಬಾವಿ ಭರಮ ಹೆಗ್ಗಡೆ ಮೊದಲಾಗಿ ಅಂತಕ್ಕ ಸೆಟ್ಟಿಯವರೆಗೆ ಎಲ್ಲರೂ 'ಗುತ್ತಿ'ಗೆ ಪರಿಚಿತರು. ಅವರೆಲ್ಲರ ಬದುಕಿನ ರಹಸ್ಯಗಳನ್ನು ಬಲ್ಲವನಾಗಿದ್ದಾನೆ. ಹೀಗೆ ಗುತ್ತಿ ಒಂದು ಅಪ್ರಮುಖ ಪಾತ್ರವಾದರೂ ಕಾದಂಬರಿಯ ಉದ್ದಗಲಕ್ಕೂ ಅವನೇ ವ್ಯಾಪಿಸಿ ಕೊಂಡಿದ್ದಾನೆ. ಅವನಿಗೆ ತಿಳಿಯದ ವ್ಯಕ್ತಿಗಳಿಲ್ಲ. ತಿಳಿಯದ ಸಂಗತಿಗಳಿಲ್ಲ. ಎಲ್ಲರಿಗೂ ಒಂದಲ್ಲ ಒಂದು ರೀತಿಯಲ್ಲಿ 'ಗುತ್ತಿ' ಬೇಕಾದವನೇ ಆಗಿದ್ದಾನೆ. ಸುದ್ದಿಗಳನ್ನು ಮುಟ್ಟಿಸಲು, ಗುಟ್ಟಿನ ಕೆಲಸಗಳನ್ನು ಮಾಡಲು, ಬಿಟ್ಟಿ ಚಾಕರಿ ಪಡೆಯಲು ಗುತ್ತಿ ಎಲ್ಲರಿಗೂ ಬೇಕೇ ಬೇಕಾಗುತ್ತಾನೆ. ವಾಸ್ತವವಾಗಿ ಅವನ ಪ್ರಯಾಣ ಮೊದಲಿಗೆ ಕಾಣಿಸುವುದು, ಒಂದು ಅತಿರಹಸ್ಯವಾದ ಕೆಲಸದ ನಿಮಿತ್ತ. ಸಿಂಬಾವಿಯ ಜಟ್ಟಮ್ಮ

ಹೆಗ್ಗಡತಿಗೆ ಕಣ್ಣಾಪಂಡಿತರಿಂದ ಔಷಧಿತೆಗೆದುಕೊಂಡು ಹೋಗಲು ಮತ್ತು 'ತಿಮ್ಮಿ'ಯನ್ನು ವಶೀಕರಣ ಮಾಡಿಕೊಳ್ಳಲು 'ಯಂತ್ರ'ಒಂದನ್ನು ಬೇಡಿ ಪಡೆಯಲು ಹೊರಟಿದ್ದಾನೆ. ಭರಮ್ಮೆ ಹೆಗ್ಗಡೆ ಜಟ್ಟೆಮ್ಮನಿಂದ ಮಕ್ಕಳನ್ನು ಪಡೆಯದಿದ್ದ ಕಾರಣ ಸುಬ್ಬಣ್ಣ ಹೆಗ್ಗಡೆಯ ಮಗಳು ಮಂಜಮ್ಮನನ್ನು ಎರಡನೇ ವಿವಾಹಕ್ಕೆ ಒಪ್ಪಿಸುವ ಪ್ರಯತ್ನಗಳು ನಡೆಯುತ್ತಿರುವುದರ ಸೂಕ್ಷ್ಮ ಜಟ್ಟೆಮ್ಮನಿಗೆ ತಿಳಿದು ವಿರೋಧ ವ್ಯಕ್ತ ಪಡಿಸುವುದೇ ಅಲ್ಲದೆ ತನಗೇ ಮಕ್ಕಳಾಗುವುದಕ್ಕಾಗಿ ಕಣ್ಣಾಪಂಡಿತರಿಂದ ರಹಸ್ಯವಾಗಿ ಔಷಧಿ ತರಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಕಣ್ಣಾ ಪಂಡಿತರು ಸುತ್ತಮುತ್ತಲಿನ ಹಳ್ಳಿಗಳಲ್ಲಿನ ಜನಕ್ಕೆ ನಂಬಿಕೆಯ ಪಂಡಿತರಾಗಿದ್ದರು. ಜಟ್ಟೆಮ್ಮನಿಗೆ ಪಂಡಿತರಲ್ಲಿ ನಂಬಿಕೆ ಇದ್ದಂತೆ ತನ್ನ ರಹಸ್ಯವನ್ನು ಕಾಯ್ದು ಕೊಳ್ಳಬಲ್ಲ ನಂಬಿಕೆ ಗುತ್ತಿಯಲ್ಲಿತ್ತು. ಅದಕ್ಕೆಂದೇ ಔಷಧಿ ತಂದುಕೊಡುವ ಜವಾಬ್ದಾರಿಯನ್ನು ಗುತ್ತಿಗೆ ವಹಿಸಿದ್ದಳು.

ಕಾದಂಬರಿ ಸಾಗುತ್ತಿದ್ದಂತೆ ಹಲವಾರು ಕುಟುಂಬಗಳ ಒಳಗತೆಗಳು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಮೇಲುವರ್ಗದ ಭರಮ್ಮೆ ಹೆಗ್ಗಡೆ, ಸುಬ್ಬಣ್ಣ ಹೆಗ್ಗಡೆ, ವೆಂಕಟಣ್ಣ, ಕೋಣೂರು ರಂಗಪ್ಪಗೌಡರು, ದೇವಯ್ಯ ಮೊದಲಾದವರ ಚರಿತ್ರೆಗಳೊಂದಿಗೆ ಅಸ್ಪೃಶ್ಯರಾದ ಐತ- ಪೀಂಚಲು, ಸೇಂಕ್ರ-ತಿಮ್ಮಿ, ಗುತ್ತಿ ಮುಂತಾದವರ ಬದುಕಿನಲ್ಲಿನ ಆಗುಹೋಗುಗಳನ್ನೂ ಒಳಗೊಳ್ಳುತ್ತದೆ. ವ್ಯಕ್ತಿಗಳು ಮೇಲು ವರ್ಗದವರೇ ಆಗಿರಲಿ ಕೆಳವರ್ಗದವರೇ ಆಗಿರಲಿ ಎಲ್ಲರ ಬದುಕುಗಳಲ್ಲಿಯೂ ನೋವು ನಲಿವಿನ ಸಂದಂರ್ಭಗಳು, ಹತಾಶೆಗೆ ದೂಡುವ, ತಲ್ಲಣಗೊಳಿಸುವ ಸಂದರ್ಭಗಳು, ಪ್ರೀತಿ ಪ್ರೇಮ, ಪ್ರಣಯ ಸಾಹಸದಲ್ಲಿ ಎದುರಾಗುವ ಅಡ್ಡಿ ಆತಂಕಗಳು, ರೂಢಿಗತವಾದ ಬದುಕಿಗೆ ಹೊಂದಿಕೊಂಡು ಸಾಗುತ್ತಿರುವ ಕ್ಷಣಗಳಲ್ಲಿ ತಣ್ಣಗೆ ಒಳ ಪ್ರವೇಶಿಸುವ ಹೊರಗಿನ ಪ್ರಭಾವಗಳಿಂದ ಪ್ರಶಾಂತವಾದ ಬದುಕಿನಲ್ಲಿ ಉಂಟಾಗುವ ಸಂಚಲನ, ಅದರಿಂದ ಉದ್ಭವಿಸುವ ಸಮಸ್ಯೆಗಳು- ಎಲ್ಲದರ ಚಿತ್ರಣಗಳಿಂದ ಇಡಿಕಿರಿದು ಕಾದಂಬರಿ ಮತ್ತಷ್ಟು ಜಟಿಲಗೊಂಡಿದೆ. ವಸಾಹತುಶಾಹಿ ಪ್ರಭುತ್ವದ ಪ್ರಭಾವ ಕೊಂಪೆಯಂತಿರುವ ಇಲ್ಲಿನ ಹಳ್ಳಿಗಳಲ್ಲಿನ ಜೀವನ ಕ್ರಮವನ್ನೇ ಬದಲಾಯಿಸುವ ಹವಣಿಕೆಯಲ್ಲಿರುವುದನ್ನೂ ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ತೀರಾ ಹಿಂದುಳಿದ ಸ್ಥಿತಿಯಲ್ಲಿರುವ ಮಲೆನಾಡಿನಲ್ಲಿ ಆಧುನಿಕತೆಯ ಹೊಸಗಾಳಿ ಬೀಸಿ ಕ್ರಮೇಣ ಅದಕ್ಕೆ ಸ್ಪಂದಿಸುತ್ತಾ ಹೋಗುವುದನ್ನು ಕಾಣುತ್ತೇವೆ.

ಈ ಕಾದಂಬರಿಗೆ ಹಲವು ಆಯಾಮಗಳಿವೆ ಪ್ರಕೃತಿ, ಸಂಸ್ಕೃತಿ, ಸಮಾಜ, ಸಂಬಂಧಗಳು- ಹೀಗೆ ಪ್ರಮುಖವಾಗಿ ನಾಲ್ಕು ಆಯಾಮಗಳ ಹಿನ್ನೆಲೆಯಲ್ಲಿ ಕಾದಂಬರಿಗೆ ವಿಶ್ಲೇಷಣೆಯ ಅಗತ್ಯವಿದೆ. ಒಂದು ಪ್ರದೇಶದ ಜನಸಮುದಾಯಗಳ ಬದುಕು ಪ್ರಾಕೃತಿಕ ಹಿನ್ನೆಲೆಯಲ್ಲಿ ಅರಳುತ್ತಾ, ರೂಪುಗೊಳ್ಳುತ್ತಾ, ಬದಲಾಗುತ್ತ ಹೋಗುತ್ತದೆ. ಇಲ್ಲಿನ ಪ್ರಕೃತಿ ಜಡವಲ್ಲ; ಚೈತನ್ಯ ಶೀಲವಾದುದು. ಮನುಷ್ಯ ಬದುಕಿನಲ್ಲಿನ ಸ್ಥಿತ್ಯಂತರಗಳಂತೆ, ಅಲ್ಲಿಯೂ ಬದಲಾವಣೆಗಳು ಅನಿವಾರ್ಯ. ಹುಟ್ಟು, ಬದುಕು, ಸಾವು-ನಿತ್ಯ ನಿರಂತರವಾಗಿ ಆವರ್ತನಗೊಳ್ಳುತ್ತ ಹೋಗುವ ಪ್ರಕ್ರಿಯೆ 'ಮನುಷ್ಯ' ಮತ್ತು ಪ್ರಕೃತಿ ಸಂಬಂಧದಲ್ಲಿ ಸಮಾನವಾಗಿ ನಡೆಯುತ್ತಾ ಸಾಗುತ್ತದೆ. ಕುವೆಂಪು ಅವರ ಕಾಣ್ಕೆಯಲ್ಲಿ

ಸೃಷ್ಟಿಯಲ್ಲಿ ಯಾವುದೂ ಜಡವಲ್ಲ. ಒಂದಲ್ಲ ಒಂದು ಹಂತದಲ್ಲಿ ಜಡವಾದುದೆಲ್ಲವೂ ಚೈತನ್ಯ ಸ್ಪರ್ಷ ಪಡೆಯುತ್ತದೆ. ಎಂತಹ ಸೂಕ್ಷ್ಮ ಮನಸ್ಸಾದರೂ ಪ್ರಕೃತಿಯ ಸೌಂದರ್ಯಕ್ಕೆ ಸ್ಪಂದಿಸುವಂತಾಗುತ್ತದೆ. ಜಾತಿ- ಜಾತಿಗಳೊಳಗಿನ ವ್ಯಕ್ತಿ-ವ್ಯಕ್ತಿಗಳ ನಡುವಿನ ವೈಷಮ್ಯಗಳೆಲ್ಲವೂ ಒಂದು ನೆಲೆಯಲ್ಲಿ ಕರಗಿ ಹೋಗಿ ಮಾನವೀಯತೆಯೊಂದೇ ಚಿರಂತನ ಮೌಲ್ಯವಾಗಿ ಉಳಿಯುವಂತಾಗುತ್ತದೆ.

ಮನುಷ್ಯ ಸ್ವಭಾವದ ಹತ್ತು ಹಲವಾರು ಮುಖಗಳ ಸೂಕ್ಷ್ಮ ವಿವರಣೆ, ಪ್ರೀತಿ, ತ್ಯಾಗ, ಸ್ವಾರ್ಥ, ಈರ್ಷೆ, ಔದಾರ್ಯ, ಸ್ನೇಹ, ಸಹಾನುಭೂತಿ ಮುಂತಾದ ಮೌಲ್ಯಗಳನ್ನು ಪರಿಚಯಿಸುವ ಸನ್ನಿವೇಶ, ಸಂದರ್ಭಗಳ ನಿರೂಪಣೆ ಈ ಕಾದಂಬರಿಯಲ್ಲಿ ಮೌಲಿಕ ಅಂಶಗಳಾಗಿವೆ.

ಈ ಹಿಂದೆಯೇ ಹೇಳಿದಂತೆ ಈ ಕಾದಂಬರಿಯ ವಸ್ತು ವಿಸ್ತಾರ ಅಥವಾ ವೈಶಾಲ್ಯ, ಅನೇಕ ಆಯಾಮಗಳನ್ನು ಒಳಗೊಂಡಿರುವುದರಿಂದ, ಇಲ್ಲಿನ ಆಧುನಿಕತೆಯ ಪ್ರಕ್ರಿಯೆ ಸ್ತ್ರೀ ಸಂವೇದನೆ, ಗಂಡು ಹೆಣ್ಣಿನ ಸಂಬಂಧಗಳು ಇತ್ಯಾದಿಯಾಗಿ ಒಂದೊಂದೂ ಪ್ರತ್ಯೇಕವಾಗಿ ವಿಶ್ಲೇಷಣೆ ಬಯಸುತ್ತದೆ.

## ಆಧುನಿಕತೆಯ ಪ್ರಕ್ರಿಯೆ:

'ಮಲೆಗಳಲ್ಲಿ ಮದುಮಗಳು' ಕಾದಂಬರಿ ರಚಿತವಾದದ್ದು 19ನೇ ಶ.ದ ಉತ್ತರಾರ್ಧದ ಕಾಲಘಟ್ಟದಲ್ಲಿ. ಭಾರತದಲ್ಲಿ ವಸಾಹತುಶಾಹಿ ಪ್ರಭುತ್ವ ನಡೆಯುತ್ತಿದ್ದ ಕಾಲ; ಸ್ವಾತಂತ್ರ್ಯ ಸಂಗ್ರಾಮದ ಅಂಕುರಾರ್ಪಣವಾಗಿದ್ದ ಕಾಲ. ಬ್ರಿಟಿಷರು ಭಾರತದಲ್ಲಿ ಇಂಗ್ಲಿಷ್ ಭಾಷಾ ಪ್ರಚಾರ ಮತ್ತು ಪ್ರಲೋಭನೆಗಳ ಮೂಲಕವಾಗಿ ಮತಾಂತರ ಪ್ರಯತ್ನಗಳನ್ನು ನಡೆಸುತ್ತಿದ್ದ ಕಾಲ. ಭಾರತದ ಮೂಲೆ ಮೂಲೆಗಳಲ್ಲೂ ನಡೆಯುತ್ತಿದ್ದ ಈ ಪ್ರಯತ್ನಗಳು ಮಲೆನಾಡಿನ ಹಳ್ಳಿಗಳನ್ನು ಪ್ರವೇಶಿಸಿದಾಗ ಅಲ್ಲಿನ ಬದುಕಿನಲ್ಲಿ ಆಗಿರಬಹುದಾದ ಬದಲಾವಣೆಗಳು ಕಾದಂಬರಿಯಲ್ಲಿ ಕಾಣಿಸಿಕೊಂಡಿವೆ ಅಲ್ಲಿಯವರೆಗೆ ರೂಢಿಯಲ್ಲಿದ್ದ ವ್ಯವಸ್ಥೆಯಲ್ಲಿ ಸ್ಥಿತ್ಯಂತರಗಳು ತಲೆದೋರಿವೆ. ವಸಾಹತುಶಾಹಿ ಪ್ರಭಾವದಿಂದಾಗಿ ಹೊಸ ಆಲೋಚನೆಗಳು. ವರ್ಗಸ್ಥಿತಿಗಳು, ಸಾಮಾಜಿಕ ಬದಲಾವಣೆಗಳು ಅನಿವಾರ್ಯವಾದುದನ್ನು ಸೂಕ್ಷ್ಮವಾಗಿ ಎತ್ತಿಹಿಡಿಯುತ್ತದೆ, ಈ ಕಾದಂಬರಿ.

ಕುವೆಂಪು ಅವರು 'ವಸಾಹತುಶಾಹಿ' ಪರಿಕಲ್ಪನೆಗೆ ಸ್ಪಂದಿಸಿದ ರೀತಿಯೂ ಇಲ್ಲಿ ನಿಚ್ಚಳವಾಗಿ ಕಂಡು ಬರುತ್ತದೆ. ವಸಾಹತುಶಾಹಿ ಸರ್ಕಾರದಿಂದಾಗಿ ಉಂಟಾಗುವ ಪರಿಣಾಮಗಳಲ್ಲಿ ಊಳಿಗಮಾನ್ಯ ವ್ಯವಸ್ಥೆಯ ಅವನತಿ, ಬೆಳೆಯುವ ಬಂಡವಾಳಶಾಹಿ, ಈ ಬಂಡವಾಳಶಾಹಿ ಎಡೆಮಾಡಿಕೊಡುವ ಗ್ರಾಮೀಣ ಸಾಲ, ಮಾರುಕಟ್ಟೆ, ಪೇಟೆಗಳ ಬೆಳವಣಿಗೆ ಮೊದಲಾದ ಅಂಶಗಳ ಚರ್ಚೆ ಇಲ್ಲಿ ಮುಖ್ಯವಾಗುತ್ತದೆ.

ಈ ಕಾದಂಬರಿಯಲ್ಲಿ ವರ್ಗ ವ್ಯವಸ್ಥೆಯ ಒಳ ಸೂಕ್ಷ್ಮಗಳನ್ನು ಕುವೆಂಪು ಅವರು ಪದರ ಪದರವಾಗಿ ಬಿಡಿಸಿ ತೋರಿದ್ದಾರೆ. ಇಲ್ಲಿನ ಅಥವಾ ಈ ಪ್ರದೇಶದಲ್ಲಿನ ಪ್ರಮುಖ ಜಾತಿವರ್ಗಗಳು, ಒಕ್ಕಲಿಗರು, ಬ್ರಾಹ್ಮಣರು ಮತ್ತು ಅಸಪೃಶ್ಯರು. ಸಾಮಾನ್ಯವಾಗಿ ಒಕ್ಕಲಿಗ ಗೌಡರು ಜಮೀಂದಾರಿ

ವರ್ಗಕ್ಕೆ ಸೇರಿದವರು. ಆದರೆ ಈ ಕಾದಂಬರಿಯಲ್ಲಿ ಬರುವ ಜಮೀಂದಾರರು ತಮ್ಮ ವೈಭವದ ದಿನಗಳಿಂದ ದೂರ ಸರಿದು ಒಂದಲ್ಲ ಒಂದು ರೀತಿಯಲ್ಲಿ ಸಾಲಗಾರರಾಗಿದ್ದಾರೆ. ಮಂಜಯ್ಯಭಟ್ಟರು ಜಾತಿಯಲ್ಲಿ ಬ್ರಾಹ್ಮಣರೇ ಆದರೂ ಜಮೀಂದಾರರಿಗೂ ಸಾಲ ಕೊಡುವ ಸಾಮರ್ಥ್ಯವನ್ನು ಹೊಂದಿರುವ ಬಂಡವಾಳಗಾರರಾಗಿದ್ದಾರೆ. ಕೆಳಜಾತಿ,ವರ್ಗದವರಂತೂ ಮೈಯೆಲ್ಲಾ ಸಾಲ ಹೊತ್ತವರು. ವೆಂಕಣ್ಣನಂತೂ ಮೈ ತುಂಬ ಸಾಲ ಮಾಡಿಕೊಂಡು ಹಿಂದಿನ ಶ್ರೀಮಂತಿಕೆಯಿಂದ ವಂಚಿತರಾಗಿದ್ದಾನೆ. ಭರಮೈ ಹೆಗ್ಗಡೆಯು ವೆಂಕಣ್ಣನ ಅಸಹಾಯಕತೆಯ ಪ್ರಯೋಜನ ಪಡೆದು ಮುಕುಂದಯ್ಯನಿಗೆಂದೇ ಮೀಸಲಾಗಿದ್ದ ಚಿನ್ನಮ್ಮನನ್ನು ಎರಡನೆಯ ಹೆಂಡತಿಯಾಗಿ ಮಾಡಿಕೊಳ್ಳಲು ಹವಣಿಸುತ್ತಾರೆ. ಮಂಜಭಟ್ಟರ ಸಾಲಕ್ಕೆ ಜಾಮೀನುನಿಲ್ಲಲು ಮತ್ತು ತೆರಕೊಟ್ಟು ತನ್ನ ಮಗಳನ್ನು ಮದುವೆಯಾಗಲು ಮುಂದಾಗುತ್ತಿರುವ ಭರಮೈ ಹೆಗ್ಗಡೆಯವರೇ ವೆಂಕಣ್ಣನಿಗೆ ಆಪದ್ಬಾಂಧವರಂತೆ ಕಾಣಿಸುತ್ತಾರೆ. ಸಾಲವಸೂಲಿಗೆ ಹಿಂಸೆ, ಕ್ರೌರ್ಯಗಳೂ ಅಸ್ತ್ರಗಳಾಗುತ್ತವೆ. ಮಂಜಯ್ಯಭಟ್ಟರಂತಹ ಬಂಡವಾಳಶಾಹಿಗಳಿಗೆ ಕರಿಮೀನುಸಾಬಿ, ಪುಡಿಸಾಬಿ, ಇಜಾರ ಸಾಬಿಗಳಂತಹ ಗೂಂಡಾಗಳ ಒತ್ತಾಸೆ ಬೇರೆ ಸದಾ ಸಿದ್ಧವಾಗಿರುತ್ತದೆ. ಎಲ್ಲಿಂದಲೋ ಬಂದ ಈ ಸಾಬಿಗಳೂ ಅಲ್ಲಿನ ದಲಿತ ವರ್ಗದ ಜನಗಳ ಬಡತನ, ಅಸಹಾಯಕತೆ, ಅಜ್ಞಾನಗಳ ಪ್ರಯೋಜನ ಪಡೆದು ಅವರನ್ನು ಶೋಷಣೆಗೆ ಒಳಗಾಗಿಸುತ್ತಾರೆ.

ಸ್ಥಳೀಯ ಪಾದ್ರಿಯಾದ ಜೀವರತ್ನಯ್ಯ ವಸಾಹತುಶಾಹಿ ಸರ್ಕಾರದ ಪ್ರತಿನಿಧಿಯಾಗಿ ಮಲೆನಾಡಿನ ಹಳ್ಳಿಗಳಲ್ಲಿ ಅಲ್ಲಿನ ಜನರ ಜೊತೆಗೆ ಬೆರೆತು ಕ್ರಮೇಣ ಅವರುಗಳನ್ನು ಮತಾಂತರಗೊಳಿಸುವ ಪ್ರಯತ್ನಕ್ಕೆ ತೊಡಗುತ್ತಾನೆ. ಮತಾಂತರ ಕಾರ್ಯ ಬಲವಂತದಿಂದ ಅಥವಾ ದಿಢೀರನೆ ಶಾಂತಿಕಾರಕವಾಗಿ ಆಗುವಂತಹುದಲ್ಲ. ನಿಧಾನವಾಗಿ ಕೆಲವು ಆಧುನಿಕ ಆಮಿಷಗಳ ಮೂಲಕ ಜನಮನಸ್ಸನ್ನು ಗೆದ್ದು ಮಾಡಬೇಕಾದ ಕೆಲಸವೆಂಬುದರ ಅರಿವಿನಿಂದ ಜೀವರತ್ನಯ್ಯ ಪ್ರಯತ್ನಿಸುತ್ತಾನೆ. ಸಿಂಬಾವಿ, ಕೋಣೂರು, ಹೂವಳ್ಳಿ, ಕಲ್ಲೂರು ಮೇಗರವಳ್ಳಿ, ಬೆಟ್ಟಳ್ಳಿ ಇತ್ಯಾದಿ ಹಳ್ಳಿಗಳಲ್ಲಿ, ಬೆಟ್ಟಳ್ಳಿ ಜೀವರತ್ನಯ್ಯನ ಮತಾಂತರ ಪ್ರಕ್ರಿಯೆಯ ಪ್ರಮುಖ ಕೇಂದ್ರವಾಗುತ್ತದೆ. ಜೀವರತ್ನಯ್ಯ ತನ್ನ ಕಾರ್ಯ ಚಟುವಟಿಕೆಗಳಿಂದಾಗಿ ಅಲ್ಲಿನ ಜನರಲ್ಲಿ ಕುತೂಹಲ, ಜಿಜ್ಞಾಸೆ ಆಸಕ್ತಿಗಳನ್ನು ಕೆರಳಿಸುತ್ತಾನೆ. ಬೈಸಿಕಲ್ಲು, ಕಾಫಿ, ಸ್ಕೂಲು, ಹೋಟೆಲು, ಗಡಿಯಾರ ಇತ್ಯಾದಿ ಆಧುನಿಕತೆಯ ಪ್ರತೀಕಗಳನ್ನು ಪ್ರವೇಶಪಡಿಸಿ, ಹೊಸತನಕ್ಕಾಗಿ, ಹೊಸ ವಿಚಾರಗಳಿಗಾಗಿ ತುಡಿಯುವ ದೇವಯ್ಯನಂತಹ ಯುವಕರನ್ನು ಆಕರ್ಷಿಸುತಾನೆ. ಜಾತಿ, ವರ್ಗವೈಷಮ್ಯಗಳಿಲ್ಲದ ಕ್ರೈಸ್ತಮತ ದೇವಲಯ್ಯನಂತಹವರನ್ನು ಆಕರ್ಷಿಸುವಲ್ಲಿ ಸಫಲವಾಗುತ್ತದೆ. ಬ್ರಾಹ್ಮಣದ ಅಹಮಿಕೆಗೆ ಬೇಸರಗೊಂಡಿದ್ದ ದೇವಯ್ಯ, ಕ್ರೈಸ್ತಮತ ಪ್ರಭಾವಕ್ಕೆ ಸಿಲುಕತ್ತಿದ್ದಂತೆ ಬ್ರಾಹ್ಮಣರನ್ನು ಹಿಯಾಳಿಸಲು ಪ್ರಾರಂಭಿಸುತ್ತಾನೆ. ದೇವಯ್ಯ ಜೀವರತ್ನಯ್ಯನ ಪ್ರಭಾವಕ್ಕೆ ಎಷ್ಟರಮಟ್ಟಿಗೆ ಒಳಗಾಗುತ್ತಾನೆಂದರೆ, ಪ್ರತಿಸಲವೂ ಜೀವರತ್ನಯ್ಯನ ಜೊತೆಗೆ ತೀರ್ಥಹಳ್ಳಿಗೆ ಹೋಗಿಬಂದಾಗ, ಒಂದಲ್ಲ ಒಂದು ರೀತಿಯ ಬದಲಾವಣೆಗೆ ಒಳಗಾಗಿರುತ್ತಾನೆ. ಆಧುನಿಕತೆಯ, ನವನಾಗರೀಕತೆಯ ವಸ್ತುಗಳಾದ ಗಡಿಯಾರ,

ಬೈಸಿಕಲ್ಲುಗಳಿಗೆ ಮಾರುಹೋಗುವುದು ಮಾತ್ರವಲ್ಲ, ಆಂತರಿಕವಾಗಿಯೂ ಬದಲಾಗುತ್ತಾ ತನ್ನ ಹಿಂದಿನ ರೀತಿಗಳನ್ನೆಲ್ಲ ತ್ಯಜಿಸಿ ಹೊಸ ವೇಷಕ್ಕೆ ಒಳಗಾಗಿರುತ್ತಾನೆ. ದೇವರು, ಧರ್ಮ, ಆಚಾರ ವಿಚಾರಗಳನ್ನು ಕಂದಾಚಾರಗಳೆಂದು ಹಿಯಾಳಿಸುತ್ತಾನೆ. ಜುಟ್ಟು ಕತ್ತರಿಸಿಕೊಂಡು ಕ್ರಾಪು ಬಿಡುತ್ತಾನೆ. ಕಡೆಗೆ ಜೀವರತ್ನಯ್ಯನ ಮಗಳಿಗೆ ಮನಸೋತು ಹೆಂಡತಿಯ ವಿಚ್ಛೇದನದವರೆಗೂ ಮುಂದುವರೆಯುತ್ತಾನೆ. ದೇವಯ್ಯನಿಗೆ ಜೀವರತ್ನಯ್ಯ ಮತ್ತು ಅವನ ಕುಟುಂಬದವರು ಆಧುನಿಕತೆ, ನವನಾಗರೀಕತೆಗಳ ಪ್ರತೀಕವಾಗಿ ಕಾಣತೊಡಗುತ್ತಾರೆ.

ಮೇಲುನೋಟಕ್ಕೆ ಎಲ್ಲವೂ ಪ್ರಶಾಂತವಾಗಿ ಕಂಡರೂ ಆಧುನಿಕತೆಯು ಮತಾಂತರದ ಮೂಲಕವಾಗಿ ಪ್ರವೇಶಮಾಡಿ ಆ ಹಳ್ಳಿಗಾಡಿನಲ್ಲಿ, ಆ ಗ್ರಾಮೀಣ ಸಮಾಜಗಳಲ್ಲಿ ವೈಯಕ್ತಿಕ ಬದುಕುಗಳಲ್ಲಿ ಸಾಕಷ್ಟು ಗೊಂದಲಗಳನ್ನು, ಅವಾಂತರಗಳನ್ನು ಉಂಟು ಮಾಡುತ್ತದೆ. ಜಾತಿ, ಮತ, ಮಡಿ, ಮೈಲಿಗೆ, ಧರ್ಮ, ದೇವರು ಮುಂತಾದವುಗಳಲ್ಲಿ ಅಪಾರ ನಂಬಿಕೆಯುಳ್ಳ ಜನರಲ್ಲಿ ಮತಾಂತರ ಅತಿಯಾದ ಗಾಭರಿಯನ್ನು ಉಂಟುಮಾಡುತ್ತದೆ. ಜಾತಿ ಮತಗಳ ಕಲಬೆರಕೆಯನ್ನು ಒಪ್ಪದ ಮನಸ್ಸಿಗೆ ತೀರಾ ಕಸಿವಿಸಿ ಉಂಟು ಮಾಡುವ ಸನ್ನಿವೇಶಗಳು ಏರ್ಪಡುತ್ತವೆ. ಬೆಟ್ಟಳ್ಳಿ ಮನೆಗೆ ಚಿನ್ನಪ್ಪನೊಡಗುಡಿ ಬಂದ ಪಾದ್ರಿ ಜೀವರತ್ನಯ್ಯನಿಗೆ ಊಟ ಬಡಿಸಬೇಕಾದ ದೇವಯ್ಯನಿಗೆ ಪಾದ್ರಿಯನ್ನು ಎಲ್ಲಿ ಕೂರಿಸಬೇಕೆಂಬುದೇ ದೊಡ್ಡ ಸಮಸ್ಯೆಯಾಗುತ್ತದೆ. ಹಿತ್ತಲಕಡೆ ಹಳೆ ಪೈಕದವರನ್ನು ಕೂರಿಸುವ ಜಾಗದಲ್ಲಿ ಕೂರಿಸಬೇಕೆಂದು ತೀರ್ಮಾನವಾಗುತ್ತದೆ. ಕಿಲಿಸ್ತನದವರಿಗೆ ತಮ್ಮ ಕೈಯಾರ ಬಡಿಸಬೇಕಾಗಿ ಬಂದ ಹೆಂಗಸರಿಗೆ ಕಸಿವಿಸಿ, ಮುಜುಗರಗಳಾಗುತ್ತವೆ; ಮನಸ್ಸೂ ಒಪ್ಪುವುದಿಲ್ಲವಾಗುತ್ತದೆ. ವಸಾಹತುಶಾಹಿಯಿಂದಾಗಿ ಹೊಸ ಹೊಸ ವಿಚಾರಗಳು, ಹೊಸ ಹೊಸ ಕಾನೂನುಗಳು ಪ್ರವೇಶಮಾಡಿವೆ. ಆದರೆ ನಿರಕ್ಷರ ಕುಕ್ಷಿಗಳಾದ ಈ ಹಳ್ಳಿ ಜನರಿಗೆ (ಗೌಡರಿಗೆ) ಕೋರ್ಟು, ಕಛೇರಿ, ಆಫೀಸು ಪೋಲೀಸು, ಪೋಸ್ಟು ಇತ್ಯಾದಿಗಳ ವಿಚಾರವಾಗಿ ಏನೂ ತಿಳಿಯದಿರುವ ಕಾರಣ, ಎಲ್ಲವನ್ನೂ ಬಲ್ಲ ಜೀವರತ್ನಯ್ಯನನ್ನು ಒಳಗಿಂದೊಳಗೇ ದ್ವೇಷಿಸಿದರೂ, ಮುಖಾ ಮುಖಿ ಘರ್ಷಣೆಗೆ ಇಳಿಯದೆ, ಅವನೊಂದಿಗೆ ಸ್ನೇಹವನ್ನೇ ಅಪೇಕ್ಷಿಸುತ್ತಾರೆ. ಜೀವರತ್ನಯ್ಯ ಜ್ಞಾನಿ, ವಿದ್ಯಾವಂತ, ಲೋಕವ್ಯವಹಾರ ಬಲ್ಲವನು. ಹಾಗಾಗಿ ಗೌಡರುಗಳೂ ತಮ್ಮೆಲ್ಲ ವ್ಯವಹಾರ ವಹಿವಾಟುಗಳಿಗೆ ಅವನನ್ನೇ ಆಶ್ರಯಿಸಬೇಕಾದ ಅನಿವಾರ್ಯತೆಗೆ ಒಳಗಾಗುತ್ತಾರೆ. ಆದ್ದರಿಂದ ಆಧುನಿಕತೆಯನ್ನು ಈ ರೀತಿ ತಮ್ಮ ಅನುಕೂಲಕ್ಕೆ ತಕ್ಕಂತೆ ಒಪ್ಪಿಕೊಳ್ಳುತ್ತಾರೆ.

ಕ್ರೈಸ್ತ ಮಿಷನರಿಗಳಿಂದ ಮೂಡಿದ ಹೊಸ ಅರಿವಿನ ಪರಿಣಾಮಗಳನ್ನು ಕೆಳವರ್ಗದ, ಕೆಳಜಾತಿಯ ಧೋರಣೆಗಳಿಂದ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಈ ಅರಿವು ನೇರವಾಗಿ, ಮುಖಾ ಮುಖಿಯಾಗಿ ಘರ್ಷಣೆಗೆ ತೊಡಗಿಸುವುದಿಲ್ಲ ಆದರೆ ಅಮೂರ್ತವಾಗಿ, ಅಂತರ್ವಾಹಿನಿಯಾಗಿ ಹರಿದು, ಅರಿವಿಲ್ಲದ ರೀತಿಯಲ್ಲಿ ಅನಿವಾರ್ಯ ಪ್ರಭಾವಕ್ಕೆ ಒಳಗಾಗುತ್ತಾರೆ. ಕೆಳವರ್ಗದ ಜನರಿಗೆ ತಮ್ಮ ಮೇಲೆ ನಡೆಯುತ್ತಿರುವ ದಬ್ಬಾಳಿಕೆ, ಶೋಷಣೆಗಳ ಅರಿವಿದೆ, ತಮಗೂ ಅವರಂತೆ ಬಾಳಬೇಕೆಂಬ ಆಸೆ, ಹಂಬಲಗಳಿವೆ. ತಮಗೇಕೆ ಅಂತಹ ಬದುಕಿನ ಹಕ್ಕು ಇಲ್ಲವೆಂದು ಪ್ರಶ್ನಿಸಿಯೂ ಪ್ರಶ್ನಿಸುತ್ತಾರೆ. ಇಲ್ಲಿನ ಹಳೆ ಪೈಕದ ಸೇಸನಾಯ್ಕನ ಧೋರಣೆ ಇದಕ್ಕೆ ನಿದರ್ಶನವಾಗಿದೆ. "ನಮ್ಮ ಕುದುರೆ,

ನಮ್ಮ ದಂಡಿಗೆ, ನಮ್ಮವಾದ್ಯ, ನಮ್ಮ ಬೋವಿಗಳು, ನಾವು ಖರ್ಚುಮಾಡುವುದಕ್ಕೆ ಇವರದೇನು ಅಡ್ಡಿ?... ನಮ್ಮ ದಂಡಿಗೆ ಒಕ್ಕಣೆ, ಕುದುರೆ ಹಕ್ಕಿಗೆ ಗೌಡಮಕ್ಕಳು ಅಡ್ಡಬರುವುದು ಯಾವ ನ್ಯಾಯ? ನಾವೇಕೆ ಹೊಡೆದಾಟಕ್ಕೆ ಹೆದರಬೇಕು? ನಾಳೆ ನನ್ನ ಮಗನ ಮದುವೆ ಮಾಡುವಾಗ ಕುದುರೆ ಮೇಲಾದರೂ ಹೆಣ್ಣು ಗಂಡು ಕೂರಿಸಿಗೊಂಡು ಹೋಗಲೇ ಬೇಕು. ಜಾತಿಯವರು ನೀವೆಲ್ಲ ಸಹಾಯಮಾಡಿದರೆ ನಾನೊಂದು ಕೈ ನೋಡಿಯೇ ಬಿಡುತ್ತೇನೆ'' (ಮ.ಮ.ಪು15) ತಿಮ್ಮಿ ಗುತ್ತಿಯರೂ ಕೂಡ ಒಮ್ಮೆ ತಮಾಷೆಯಾಗಿ ತಮ್ಮ ಮದುವೆ ವಿಚಾರ ಮಾತಾಡುವಾಗ ತಮ್ಮ ಮದುವೆ ಮೆರವಣಿಗೆ ದಂಡಿಗೆ, ಕುದುರೆಗಳ ಮೇಲೇ ಕೊಂಡೊಯ್ಯಬೇಕೆಂದು ಹೇಳಿಕೊಳ್ಳುವಳು. ಇಂತಹ ಸಂದರ್ಭಗಳಲ್ಲಿಯೇ ಅವರ ಸುಪ್ತ ಆಕಾಂಕ್ಷೆಗಳು, ಸಂಚಿತವಾದ ತುಡಿತಗಳು, ಪರಂಪರಾಗತವಾಗಿ ವಂಚಿತವಾಗಿದ್ದ ಹಕ್ಕುಗಳನ್ನು ಪಡೆದು ಕೊಳ್ಳಬೇಕೆಂಬ ಛಲಗಳು ಪುಟಿದೇಳುತ್ತವೆ.

ಆಧುನಿಕತೆಯ ಮತ್ತೊಂದು ಮುಖವಾಗಿ ಬಂದದ್ದು ಯಂತ್ರನಾಗರೀಕತೆ. ಇದರ ಪ್ರತೀಕವಾಗಿ ಪ್ರವೇಶಿಸಿದ, ಕೊಂಪೆಯಂತಹ ಆ ಹಳ್ಳಿಯನ್ನು ದಿಗ್ಭ್ರಮೆಗೊಳಿಸುತ್ತ ಬಂದದ್ದು ಬೀಸೆಕಲ್ಲು, (ಬೈಸಿಕಲ್) ಬೀಸೆಕಲ್ಲಿನ ವಿಚಾರ ದೊಡ್ಡ ಸುದ್ದಿಯಾಗಿ ಸುತ್ತಮುತ್ತಲ ಹಳ್ಳಿಗಳಲ್ಲೂ ಹರಡಿ ರೋಮಾಂಚನ, ಸಂಭ್ರಮ ಕುತೂಹಲ. ಜಿಜ್ಞಾಸೆ, ಭಯ ಆತಂಕ, ತಲ್ಲಣಗಳನ್ನು ಉಂಟುಮಾಡುತ್ತದೆ. ಮುಟ್ಟಲು ಎಲ್ಲರೂ ಬಯಸುತ್ತಾರೆ; ಆದರೆ ಅದರ ಬಳಿಗೆ ಸುಳಿಯಲು ಹೆದರುತ್ತಾರೆ. ಆದರೆ ಈ ಹೆದರಿಕೆಯ ಹಿಂದೆಯೇ ತಮ್ಮಲ್ಲಿಯೂ ಅಂತಹುದಿದ್ದರೆ ಎಂಬ ಬಯಕೆ ಮನಸ್ಸಿನ ಮೂಲೆಯಲ್ಲೆಲ್ಲೋ ಚಿಗಿಯುತ್ತದೆ.

ಇದೇ ರೀತಿಯಲ್ಲಿ ಹೋಟೆಲು ಶಾಲೆಗಳೂ ಮಲೆನಾಡಿನಲ್ಲಿ ಕಾಣಿಸಿಕೊಳ್ಳುತ್ತವೆ. ನಾಲ್ಕಾರು ಹುಲ್ಲಿನ ಮನೆಗಳು ಮೂರು ಊರು ಹೆಂಚಿನ ಮನೆಗಳಿಗಷ್ಟೇ ಸೀಮಿತವಾಗಿದ್ದ ಮೇಗರವಳ್ಳಿ ಬರಿಕೊಂಪೆಯಾಗಿದ್ದು, ಎತ್ತಿನಗಾಡಿಯ ಪ್ರಯಾಣಕ್ಕೂ ಅಸಾಧ್ಯವಾಗಿದ್ದು ಗುತ್ತಿಯಂತಹವರ ಪಾಲಿಗೆ ಪಟ್ಟಣವಾಗಿತ್ತು. ಅಲ್ಲಿ ಸ್ಕೂಲಾಗಲೀ, ಆಸ್ಪತ್ರೆಯಾಗಲಿ ಇಲ್ಲದೆ ಕಳ್ಳಿನ ಅಂಗಡಿಯೇ ಕ್ಲಬ್ಬಾಗಿ ಅಂತಕ್ಕಸೆಟ್ಟಿಯ ಮನೆಯೇ ಹೋಟೆಲಾಗಿತ್ತು. ಇಂತಹ ಮೇಗರವಳ್ಳಿ ಮುಂದೆ ಈ ಆಧುನಿಕತೆಯ ಪರಿಣಾಮವಾಗಿ, ವಿದ್ಯಾರ್ಥಿನಿಲಯವಾಗಿ ಪರಿವರ್ತನೆಯಾಗುತ್ತದೆ. ಹಳೆಮನೆ ಕೋಣೂರು, ಹೂವಳ್ಳಿ, ಬೆಟ್ಟಳ್ಳಿ, ಕಲ್ಲಳ್ಳಿ (ಕಲ್ಲೂರು) ಸಿಂಬಾವಿ ಮೊದಲಾದ ಸುತ್ತಮುತ್ತಣ ಹಳ್ಳಿಗಳಲ್ಲಿದ್ದು ಓದುಬರಹ ಕಲಿಯುವ ಇಚ್ಛೆಯುಳ್ಳವರಿಗೆ ಅಂತಕ್ಕನ ಮನೆಯಲ್ಲಿದ್ದು ಕೊಂಡು ಮಿಶನ್‌ಸ್ಕೂಲಿನಲ್ಲಿ ವಿದ್ಯಾಭ್ಯಾಸಮಾಡುವ ಅವಕಾಶ ಏರ್ಪಡುತ್ತದೆ. ದೇವಯ್ಯ ಮುಕುಂದಯ್ಯನಂತಹ ಯುವ ಪೀಳಿಗೆಯ ಜನ ಕ್ರೈಸ್ತ ಮಿಶನರಿಗಳ ಹೊಸ ಆಲೋಚನೆಗಳ, ಆಧುನಿಕ ವಿಚಾರಗಳ ಪ್ರಭಾವಕ್ಕೆ ಒಳಗಾಗುತ್ತಾರೆ. ಕ್ರೈಸ್ತ ಮಿಶನರಿಗಳ ವೈದ್ಯಕೀಯ ಸಹಾಯ, ವಿದ್ಯಾಭ್ಯಾಸ ಪ್ರಚಾರ, ಇತ್ಯಾದಿ ಲೋಕೋಪಕಾರಿ, ಜನೋಪಕಾರಿ, ಕಾರ್ಯಗಳನ್ನು ಮೆಚ್ಚಿಕೊಳ್ಳುತ್ತಾರೆ. ಮತಾಂತರ ಚಟುವಟಿಕೆಯನ್ನು ಪ್ರತಿಭಟನೆಯ ಮೂಲಕ ನಿಲ್ಲಿಸಬೇಕೆಂದು ಬಂದ ಮುಕುಂದಯ್ಯ ಇತರೆ ಇಂತಹ ಸಾಮಾಜಿಕ ಉದ್ಧಾರದ ಕೆಲಸಗಳಿಂದ ಸಂಪೂರ್ಣವಾಗಿ

ಪ್ರಭಾವಿತನಾಗುತ್ತಾನಾದರೂ, ಮತಾಂತರವನ್ನು ಮಾತ್ರ, ಸಮಾಜದ ಅಡಿಪಾಯ, ಪರಂಪರಾಗತವಾಗಿ ಬಂದ ಸಾಂಪ್ರದಾಯಿಕ ನಂಬಿಕೆಗಳನ್ನು ಅಲುಗಾಡಿಸುವ, ಸಡಿಲಾಗಿಸುವ ಅಪಾಯವನ್ನರಿತು, ವಿರೋಧಿಸುತ್ತಾನೆ. ರಾಜಕೀಯ ಮುತ್ಸದ್ದಿಯಂತೆ ಮಾತಾಡುವ ಲೇಖ್‌ಹಿಲ್‌ರು ಮತಾಂತರಕ್ಕೆ ತಮ್ಮ ಯಾವುದೇ ಬಗೆಯ ಒತ್ತಾಯವಿಲ್ಲವೆಂದು ಹೇಳುತ್ತಲೇ ಭಾರತೀಯ ಸಾಂಪ್ರದಾಯಿಕ ಸಮಾಜದಲ್ಲಿನ ಲೋಪದೋಷಗಳನ್ನು, ಅಂಧವಿಶ್ವಾಸಗಳನ್ನು ಎತ್ತಿ ಹಿಡಿಯುತ್ತಾ ಸಮಾಜದ ಕೆಳವರ್ಗದ ಜನ ಜಾತಿಗಳು, ಮೇಲುವರ್ಗದ ಬ್ರಾಹ್ಮಣರಿಂದ ಹೇಗೆ ಬೌದ್ಧಿಕವಾಗಿ, ಸಾಮಾಜಿಕವಾಗಿ ಶೋಷಣೆಗೆ ಒಳಗಾಗುತ್ತಿದ್ದಾರೆಂಬುದ್ನು ವಿಶದವಾಗಿ, ವಿವರವಾಗಿ, ಅವರ ಮೇಲೆ ದಟ್ಟ ಪ್ರಭಾವ ಬೀರುವ ರೀತಿಯಲ್ಲಿ ನಯವಾಗಿ ತಿಳಿಸುತ್ತಾನೆ. ಸಾಂಸ್ಕೃತಿಕವಾಗಿಯೂ ಈ ಜನ ಜಾತಿಗಳು ಎಂತಹ ಬಗೆಯಲ್ಲಿ ತುಳಿದಿಡಲಾಗುತ್ತಿದೆ ಅನ್ನುವುದನ್ನೂ ಕಣ್ಣಿಗೆಕಟ್ಟುವಂತೆ, "ನಿಮ್ಮ ಜಾತಿಯವರು ಎಲ್ಲಿವರೆಗೆ ಬ್ರಾಹ್ಮಣರ ಪಾದ ತೊಳೆದು ಅದನ್ನು ತೀರ್ಥವೆಂದು ಕುಡಿಯುವುದನ್ನೇ ತಮ್ಮ ಧರ್ಮ ಜೀವನ ಸರ್ವಸ್ವ ಎಂದು ಭಾವಿಸುವರೋ ಅಲ್ಲಿಯವರೆಗೆ ನಿಮಗೆ, ನಾಮಧಾರಿಗೌಡರಿಗೆ ಮತ್ತು ಇತರೆ ಬ್ರಾಹ್ಮಣೇತರರಿಗೆ ಉದ್ಧಾರವಿಲ್ಲ; ಉಳಿಗತಿಯಿಲ್ಲ. ನಿಮ್ಮ ಮೂಢ ನಂಬಿಕೆಗಳು, ಆಚಾರಗಳು ಬ್ರಾಹ್ಮಣರ ಜೀವನೋಪಾಯಕ್ಕೆ ಸಂಪಾದನೆಗೆ ಬಂಡವಾಳ ಸ್ವರೂಪವಾಗಿದೆ... ಶತ ಶತಮಾನಗಳಿಂದಲೂ ನಿಮ್ಮನ್ನು ಈ ಮೂಢ ಸ್ಥಿತಿಯಲ್ಲಿಟ್ಟು ನಿಮ್ಮಿಂದ ಸೇವೆ ಮಾಡಿಸಿ ಕೊಂಡು ಸುಖಜೀವನ ನಡೆಸುತ್ತಿದ್ದಾರೆ. ಕ್ರೈಸ್ತ ಧರ್ಮದಲ್ಲಿ ಜಾತಿ ಭೇಧವಿಲ್ಲ. ದೇವರ ಇದಿರಿನಲ್ಲಿ ಎಲ್ಲರೂ ಸಮಾನರು. ನೀವು ಕ್ರೈಸ್ತಮತಕ್ಕೆ ಸೇರಿ; ಬಿಡಿ... ಅದು ಅಷ್ಟು ಮುಖ್ಯವಲ್ಲ ಕ್ರೈಸ್ತ ಧರ್ಮದ ಉದಾರತತ್ವಗಳನ್ನೂ ಸೇವಾಮನೋಧರ್ಮವನ್ನೂ ಸರ್ವಸಮಾನತಾ ದೃಷ್ಟಿಯನ್ನೂ ಉನ್ನತ ಆದರ್ಶಗಳನ್ನೂ ನಿಮ್ಮ ಮಾರ್ಗದರ್ಶನ ಜ್ಯೋತಿಯನ್ನಾಗಿ ಮಾಡಿಕೊಂಡು, ಬ್ರಾಹ್ಮಣ್ಯದ ದುರದೃಷ್ಟಿಯಿಂದ ಬಿಡಿಸಿ ಕೊಳ್ಳುವುದು ಅತ್ಯಂತ ಅವಶ್ಯಕವಾದ ಆದ್ಯ ಕರ್ತವ್ಯ, ಕರ್ಮ!-ಎಂದು ವಿವರಿಸಿದ ಹಿಲ್, ಮತಾಂತರ ಬಲವಂತವಲ್ಲ ಎಂದು ಹೇಳಿದರೂ ಆವನ ಮಾತುಗಳಲ್ಲಿ ಆಮಿಷವಿದೆ, ಜೊತೆಗೆ ಬಂಡಾಯದ ಪ್ರಚೋದನೆಯಿದೆ. ಆದರೂ ಮಾತುಗಳು ಕೇಳಿದವರಿಗೆ ಅತ್ಯಂತ ಉದ್ಬೋಧಕವಾಗಿಯೂ, ಮುಗ್ಧ ಸೆಳೆತಕ್ಕೆ ಒಳಗಾಗುವಂತೆಯೂ ಇವೆ. ಮುಕುಂದಯ್ಯ ನಂತಹ ಸುಶಿಕ್ಷಿತ ಯುವಕನೇ ಈ ಮಾತುಗಳಿಗೆ ಪ್ರಭಾವಿತನಾಗಿರುವಾಗ, ಇನ್ನು ಕೆಳಜಾತಿಗಳ, ಅವಿದ್ಯಾವಂತರ ಮನವನ್ನು ಪರಿವರ್ತಿಸುವಲ್ಲಿ ಪರಿಣಾಮಕಾರಿಯಾಗುತ್ತವೆಂದರೆ ಆಶ್ಚರ್ಯ ಪಡಬೇಕಾದ್ದಿಲ್ಲ. ಮುಕುಂದಯ್ಯ ದೇವಯ್ಯನಂತೆ ಬಹಿರಂಗದ ಬದಲಾವಣೆಗಳಿಗೆ ಒಳಗಾಗದಿದ್ದರೂ ಅಂತರಂಗದಲ್ಲಿ ತೀವ್ರವಾದ ಪ್ರಭಾವಕ್ಕೆ ಸಿಲುಕಿ, ವಿಚಾರಗಳ ಪರಿವರ್ತನೆಯನ್ನು ಸ್ವಾಗತಿಸುತ್ತಾನೆ. ಆಗತಾನೇ ಪ್ರವೇಶ ಮಾಡುತ್ತಿದ್ದ ಆಧುನಿಕತೆಗೆ ಕ್ಷಿಪ್ರ ಪರಿವರ್ತನೆಯ ಪ್ರತಿಕ್ರಿಯೆ ದೊಡ್ಡ ಪ್ರಮಾಣದಲ್ಲಿ ಕಾಣಿಸಿಕೊಳ್ಳದಿದ್ದರೂ ಕ್ರಮೇಣ ಎಲ್ಲ ಜಾತಿ, ಜನವರ್ಗಗಳೂ ಪರಿವರ್ತನೆಯ ಪ್ರಕ್ರಿಯೆಗೆ ಒಳಗಾಗುವ ಪರಿಸರ ನಿರ್ಮಾಣವಾಗುತ್ತದೆ.

ಸ್ವದೇಶ ಪ್ರೇಮ, ದೇಶಭಕ್ತಿ, ಸ್ವಧರ್ಮಸಮರ್ಥನೆಗಳೂ ಆಧುನಿಕತೆಯ ಪ್ರಕ್ರಿಯೆಯ ಅಂಗವಾಗಿಯೇ ಇಲ್ಲಿ ಕಾಣಿಸಿಕೊಳ್ಳುತ್ತದೆ. ಈ ಕಾದಂಬರಿಯ ವಸ್ತು ಅಂತಹ ವಿಚಾರಗಳ ಅಗತ್ಯ ಇರುವ ಸಂದಿಗ್ಧ ಕಾಲಘಟ್ಟಕ್ಕೆ ಸೇರಿದ್ದು. ಕುವೆಂಪುರವರಿಗೆ ಭಾರತೀಯ ಧರ್ಮ,ದರ್ಶನ,ಸಂಸ್ಕೃತಿ ವೇದಾಂತಗಳಲ್ಲಿ ಇದ್ದ ಅಚಲ ನಂಬಿಕೆ, ರಾಮಕೃಷ್ಣಪರಮ ಹಂಸ, ವಿವೇಕಾನಂದರ ಅಧ್ಯಾತ್ಮ ವಿಚಾರ ಚಿಂತನೆಗಳಲ್ಲಿ ಇದ್ದ ಬಲವಾದ ನಂಬಿಕೆಯ ಪ್ರತ್ಯಕ್ಷ ನಿದರ್ಶನಗಳಂತೆ ವಾಸ್ತವವಾದಿ ನೆಲೆಯಲ್ಲಿನ ಈ ಕಾದಂಬರಿಯಲ್ಲಿ ಅವಾಸ್ತವ ಸಂಗತಿಗಳಂತೆ ಕಾಣಸಿಕೊಳ್ಳುವ ಕೆಲವು ಸನ್ನಿವೇಶಗಳು ಬರುತ್ತವೆ.

ಪಾದ್ರಿ ಜೀವರತ್ನಯ್ಯ ಸಿಂಧುವಳ್ಳಿ ಚಿನ್ನಪ್ಪಗೌಡರ ಮತಾಂತರ ಪ್ರಯತ್ನಕ್ಕೆ ಹೊರಟಿದ್ದ. ಅದೇ ದಿನ1893ನೇ ಇಸವಿ ಸೆಪ್ಟೆಂಬರ್11ನೇ ದಿ, ಸೋಮವಾರ ಲೋಕಪ್ರಸಿದ್ಧವಾಗಲಿರುವ ಜಗದ್ವ್ಯಾಪ್ಯ ಮಹದ್ಘಟನೆಯೊಂದರೊಡನೆ ತಾನು ಪ್ರತಿಸ್ಪರ್ಧಿಯಾಗಿರುವುದನ್ನು ಅರಿತಿರಲಿಲ್ಲ. ವಿಪರ್ಯಾಸದಂತೆ ಅದೇ ದಿನ ಕ್ರೈಸ್ತ ಮತಶ್ರದ್ಧೆಯ ಮಿಶನ್ ಮತಾಂಧತೆಯ ಕೇಂದ್ರವಾಗಿದ್ದ ಅಮೇರಿಕಾ ದೇಶದ ಚಿಕಾಗೋ ನಗರದಲ್ಲಿ ನೆರೆದಿದ್ದ ಸರ್ವಧರ್ಮ ಸಮ್ಮೇಳನದಲ್ಲಿಯೇ ಸ್ವಾಮಿ ವಿವೇಕಾನಂದರು ಹಿಂದೂ ಧರ್ಮದ ಮತ್ತು ವೇದಾಂತ ದರ್ಶನದ ಮಹೋನ್ನತಿಯನ್ನು ವಿಶ್ವವೈಶಾಲ್ಯವನ್ನು ತಮ್ಮ ಸಿಂಹಕಂಠದಿಂದ ಘೋಷಿಸಿದ್ದನ್ನು ಪ್ರಸ್ತಾಪಿಸುತ್ತ ಅದಕ್ಕೆ ಸಿಕ್ಕ ಪ್ರಚಂಡ ಪ್ರತಾಡನ ದಟ್ಟವಾದ ವಿಂದ್ಯ, ಹಿಮಾಚಲ, ಸಾಹ್ಯಾದ್ರಿಗಳಲ್ಲಿಯೂ ಅನುರಣಿತವಾಗಿತ್ತೆಂದು ವಿವರಿಸುತ್ತಾರೆ. ಹಿಂದೂ ಧರ್ಮದ ಅನಾಚಾರ, ಅವಿವೇಕ, ಸಂಕುಚಿತ ಮನೋಭಾವ, ಜಾತಿ ಮತ ಪಕ್ಷಪಾತ, ಬ್ರಾಹ್ಮಣ ತಿರಸ್ಕಾರ, ಶೂದ್ರರ ದೈನ್ಯ, ಅಧೋಗತಿ ಇತ್ಯಾದಿಗಳನ್ನು ಕುರಿತು ಖಂಡಿಸುತ್ತಾಕ್ರೈಸ್ತಮತ, ಕ್ರೈಸ್ತನ ತ್ಯಾಗ, ಬಲಿದಾನ, ಉದ್ಧಾರಗಳ ಬಗ್ಗೆ ಉದಾತ್ತವಾಗಿ ಮಾತನಾಡುವಾಗ ಸಮೀಪದಲ್ಲಿದ್ದ ಮಠಗಳು. ಪವಿತ್ರ ಕ್ಷೇತ್ರಗಳು, ಗುರುಪೀಠಗಳು ಏನು ಮಾಡುತ್ತಿದ್ದವು? ಎಂದು ಸಿಟ್ಟಿನಿಂದ ಪ್ರಶ್ನಿಸುತ್ತಾರೆ. ನಾವು ನಮ್ಮ ಧರ್ಮರಕ್ಷಣೆಗೆ ಟೊಂಕಕಟ್ಟಿ ನಿಲ್ಲದ ಪಕ್ಷದಲ್ಲಿ ಅದು ಕಾವಲಲ್ಲಿದ ಕೋಟೆಯಾಗಿ ಹೊರಗಿನ ಆಕ್ರಮಣಕಾರರಿಗೆ ಪ್ರವೇಶ ಸುಲಭ ಸಾಧ್ಯವಾಗುತ್ತದೆ ಎನ್ನುವ ನಂಬಿಕೆಯ ಹಿನ್ನೆಲೆಯಲ್ಲಿ ಸ್ವಧರ್ಮ, ಸಂಸ್ಕೃತಿ ರಕ್ಷಣೆಯ ಬಗ್ಗೆ ಹೆಚ್ಚಿನ ಕಾಳಜಿಯನ್ನು ಹೊಂದಿದ್ದ ಕುವೆಂಪು ಮತಾಂತರದ ಪ್ರಸ್ತಾಪ ಬಂದಾಗ, ಕ್ರೈಸ್ತ ಧರ್ಮದೊಂದಿಗೆ ಮುಖಾ ಮುಖಿಯಾಗಿ ನಿಲ್ಲ ಬೇಕಾದ ಸಂದರ್ಭ ಏರ್ಪಟ್ಟಾಗ ಅತ್ಯಂತ ಭಾವುಕರಾಗಿ ಹಿಂದೂಧರ್ಮ ಸಂಸ್ಕೃತಿ, ಪರಂಪರೆಗಳ ಬಗ್ಗೆ ಸಮರ್ಥನೆಯ ಮಾತುಗಳನ್ನು ಆಡುತ್ತಾರೆ.

ಹಾಗೆಯೇ ಗಡ್ಡದಯ್ಯನನ್ನು ಭೇಟಿಯಾಗಲು ಹೋದ ಸಂದರ್ಭದಲ್ಲಿಯೂ ದೇವಯ್ಯ ಮುಕುಂದಯ್ಯರ ಜೊತೆ ಮಾತನಾಡುತ್ತಿದ್ದ ಗಡ್ಡದಯ್ಯನನ್ನು ಹಿಂದೂ ಮತ, ಜಾತಿಪದ್ಧತಿ, ಬ್ರಾಹ್ಮಣರಿಂದ ಬ್ರಾಹ್ಮಣೇತರರಿಗೆ ಆಗುತ್ತಿರುವ ಅನ್ಯಾಯ, ಹಿಂದೂ ದೇವರುಗಳಲ್ಲಿ ಕಾಣುವ ಅನೈತಿಕ ಚಟುವಟಿಕೆ, ಕ್ರೈಸ್ತಮತ ಪ್ರಚಾರ, ಕ್ರೈಸ್ತರ ಉದ್ಧಾರಕಾರ್ಯ ಇತ್ಯಾದಿಗಳನ್ನು ಕುರಿತು

ದೇವಯ್ಯ ಕೇಳಿದ ಪ್ರಶ್ನೆಗಳಿಗೆ ಗಡ್ಡದಯ್ಯನಿಂದ ಬಂದ ಉತ್ತರಗಳು ದಂಗುಬಡಿಸುವಂತೆ ಇದ್ದವು. ದೇವಯ್ಯನ ಖಂಡನೆ, ಟೀಕೆಗಳಲ್ಲಿ ಬಹುಭಾಗವನ್ನು ಒಪ್ಪಿಕೊಳ್ಳುತ್ತಲೇ ಹಿಂದೂಧರ್ಮದ ಮತ್ತು ಭಾರತೀಯ ದೃಷ್ಟಿಯ ಸಮರ್ಥನೆಗೆ ಕೈ ಹಾಕಿದಾಗ ದೇವಯ್ಯ, ಮುಕುಂದಯ್ಯರಿಬ್ಬರೂ ಭೂಮಾನುಭೂತಿಗೆ ಒಳಗಾಗುತ್ತಾರೆ. ಅಲ್ಲದೆ ಆ ಮಂಟಪದಲ್ಲಿ ದಿವ್ಯ ಆರಾಧನೆಯ ಸಾನ್ನಿಧ್ಯವೇ ಸೃಷ್ಟಿಯಾಗಿತ್ತೆಂದು ವಿವರಿಸುತ್ತಾರೆ. ಹೀಗೆ ಆಧುನಿಕತೆಯ ಗಾಳಿಯು ಬೀಸುತ್ತಿದ್ದ ಸಂದರ್ಭದಲ್ಲಿ ಆಂಗ್ಲೇಯರ ಆಡಳಿತದ ರೀತಿಯೂ, ಇಂಗ್ಲೀಷಿನ ಪ್ರಭಾವವೂ ಮೊಳೆದೋರುತ್ತಿದ್ದ ಸಂಧಿ ಸಮಯದಲ್ಲಿ ಕ್ರೈಸ್ತಪಾದ್ರಿಗಳ ಮುಖಾಂತರ ವ್ಯಕ್ತಿ ಸ್ವಾತಂತ್ರ್ಯ, ಸಾಮಾಜಿಕ ಸಮಾನತೆ, ಪರಂಪರೆ, ಸಂಪ್ರದಾಯಗಳ ಅರಿವಿನ ಜೊತೆಗೆ ನವನಾಗರಿಕತೆಯ, ಆಧುನಿಕತೆಯ ಪರಿಕಲ್ಪನೆಗಳೂ ಮಲೆನಾಡಿನ ಇಂತಹ ಕೊಂಪೆಗಳನ್ನೂ ಪ್ರವೇಶಿಸಿದ್ದು ಅತ್ಯಂತ ವಾಸ್ತವದ ಸಂಗತಿಯಾಗಿದೆ.

### ಸ್ತ್ರೀ ಸಂವೇದನೆ:

ಮಹಾ ಕಾದಂಬರಿಯಾದ ಈ ಕಾದಂಬರಿಯ ವಿಸ್ತಾರವಾದ ಕಥಾಭಿತ್ತಿ ಅನೇಕ ನೆಲೆಗಳಲ್ಲಿನ ಚಿಂತನೆಯನ್ನು ನಿರೀಕ್ಷಿಸುತ್ತದೆ. ಕಾದಂಬರಿ ರಚನೆಯ ಕಾಲದ ಸಾಂಸ್ಕೃತಿಕ ಚಿತ್ರಣದ ಹಿನ್ನೆಲೆಯಲ್ಲಿ ಬರುವ 'ಸ್ತ್ರೀ ಪಾತ್ರಗಳು' ತಮ್ಮ ದೈನಂದಿನ ನಡವಳಿಕೆ ಪರಂಪರೆ ಸಂಪ್ರದಾಯಗಳಲ್ಲಿ ತಳೆದ ನಂಬಿಕೆ, ಕುಟುಂಬ ಮತ್ತು ಪುರುಷರ ಬಗೆಗಿದ್ದ ಅವರ ನಿಲುವುಗಳು, ಆಲೋಚನೆಗಳು. ಹಬ್ಬ ಹರಿದಿನ, ಜಾತ್ರೆ, ಮದುವೆ, ಮುಂಜಿ ಮುಂತಾದ ಸಂದರ್ಭಗಳಲ್ಲಿನ ವಿಧಿ, ಆಚರಣೆಗಳು ಇವೆಲ್ಲ ಈ ಸ್ತ್ರೀ ಸಂಸ್ಕೃತಿಯ ಒಂದು ಸಮಗ್ರ ಚಿತ್ರಣವನ್ನು ಕಟ್ಟಿಕೊಡುತ್ತದೆ. ಈ ಕಾದಂಬರಿಯಲ್ಲಿ ಬರುವ ಅಸಂಖ್ಯಾತ ಸ್ತ್ರೀ ಪಾತ್ರಗಳು ವಿಭಿನ್ನ ಜಾತಿ, ಧರ್ಮ, ವರ್ಗ, ಮನೆತನಗಳಿಗೆ ಸೇರಿದವರು. ಅವರ ನಡವಳಿಕೆ, ಆಲೋಚನೆಗಳೆಲ್ಲವೂ ಇವುಗಳ ಹಿನ್ನೆಲೆಯಲ್ಲಿ ರೂಪುಗೊಂಡವುಗಳು, ಕೆಲವೊಮ್ಮೆ ಪರಿಸ್ಥಿತಿ, ಸನ್ನಿವೇಶ, ಸಂದರ್ಭಗಳಿಂದಾಗಿ ಸ್ತ್ರೀ ಮನೋಧರ್ಮಕ್ಕೆ ಮೂಲಭೂತವಾದ ಮೃದು ಸ್ವಭಾವಕ್ಕೆ ಸಲ್ಲದ ರೀತಿಯಲ್ಲಿಯೂ ವಿಚಾರಗಳು, ಆಲೋಚನೆಗಳು ಬದಲಾಗುವ ಸಾಧ್ಯತೆಗಳಿರುತ್ತವೆ. ಈ ಕಾದಂಬರಿಯಲ್ಲಿ ಒಂದು ಹೆಣ್ಣಾಗಲೀ ಗಂಡಾಗಲೀ ಕೇಂದ್ರ ಪಾತ್ರವಾಗುವುದಿಲ್ಲ. ಮಲೆನಾಡಿನ ಒಂದು ಜನಾಂಗದ, ಒಂದು ಸಮಾಜದ, ಹತ್ತು ಹಲವಾರು ಕುಟುಂಬಗಳ ಮತ್ತು ಹತ್ತಾರು ಬಗೆಯ ಗಂಡು ಹೆಣ್ಣುಗಳ ಕತೆಯಾಗಿದೆ; ಒಬ್ಬೊಬ್ಬರದೂ ಒಂದು ಬೃಹತ್ ಕತೆಯೊಳಗಿನ ಉಪಕತೆಗಳಂತೆ ಒಂದೊಂದು ರೀತಿಯಲ್ಲಿ ಭಿನ್ನವಾದ ಕತೆಗಳಾಗಿವೆ. ಕುಟುಂಬದ, ಸಮಾಜದ ಒಂದು ಪ್ರಮುಖ ಭಾಗವಾಗಿ ಸ್ತ್ರೀಯರು ಇಲ್ಲಿ ಕಾಣಿಸಿಕೊಳ್ಳುತ್ತಾರಾದರೂ ಅವರ ಬಗ್ಗೆ ಸಾಕಷ್ಟು ವಿವರಗಳು ದೊರೆಯುತ್ತವೆಯಾದರೂ ಭಾರತೀಯ ಸಾಮಾಜಿಕ ಪರಿಕಲ್ಪನೆಯಲ್ಲಿ ಹಿಂದುಳಿದಂತಹ ಚಿತ್ರಗಳೇ ಇಲ್ಲಿಯೂ ಕಾಣಿಸಿ ಕೊಳ್ಳುತ್ತವೆ. ಗೃಹಕೃತ್ಯ, ಸಂತಾನೋತ್ಪತ್ತಿ, ಸಾಂಸ್ಕೃತಿಕ ಚಟುವಟಿಕೆ ಧಾರ್ಮಿಕ ಆಚರಣೆ- ಇತ್ಯಾದಿ ವಿಷಯಗಳಲ್ಲಿ ಮಾತ್ರವೇ ಅಗತ್ಯವೆನ್ನುವ ರೀತಿಯಲ್ಲಿಯೇ ಕಾಣಿಸಿಕೊಳ್ಳುತ್ತಾರೆ. ಆದರೆ ಸ್ತ್ರೀಯರಲ್ಲಿ ಮೇಲುವರ್ಗದ ಸ್ತ್ರೀಯರಿಗಿಂತ ಕೆಳವರ್ಗದ ಸ್ತ್ರೀಯರೇ ಸಾಮಾಜಿಕವಾಗಿ, ವೈಯಕ್ತಿಕವಾಗಿ ಹೆಚ್ಚು ಸ್ವತಂತ್ರರಾಗಿದ್ದಾರೆ.

ಪುರುಷ ಪ್ರಧಾನ ಸಮಾಜದಲ್ಲಿ ಹೆಂಗಸರಿಗೆ ಯಾವುದೇ ವಿಚಾರಗಳಲ್ಲಿ ತಮ್ಮ ಅಭಿಪ್ರಾಯ, ಆಲೋಚನೆಗಳಿಗೆ ಅವಕಾಶವಿರಲಿಲ್ಲ; ಅಧಿಕಾರವೂ ಇರಲಿಲ್ಲ. ಇದೇ ನಿಟ್ಟಿನಲ್ಲಿ ಇಲ್ಲಿನ ಸ್ತ್ರೀಯರೂ ಪುರುಷನ ಅಧೀನತೆಯೊಳಗೇ ತಮ್ಮೆಲ್ಲ ಹಕ್ಕು ಸ್ವಾಂತ್ರ್ಯ ಗಳನ್ನು ಬದಿಗಿಟ್ಟು ಅವನ ಹೆಜ್ಜೆಯ ಜೊತೆಗೆ ಹೆಜ್ಜೆಗೂಡಿಸುತ್ತಾ, ಅವನ ಅಭಿಪ್ರಾಯಗಳಿಗೆ ತಲೆದೂಗುತ್ತಾ, ಅವನು ತೋರಿದ ಹಾದಿಯಲ್ಲಿ ಹೆಜ್ಜೆಯಿಟ್ಟು ಸಾಗುತ್ತ ಹೋಗುವುದನ್ನೇ ಇಲ್ಲಿಯೂ ಕಾಣುತ್ತೇವೆ. ವಿದ್ಯಾಭ್ಯಾಸದಿಂದ ವಂಚಿತರಾಗಿದ್ದ ಇವರಿಗೆ ತಮ್ಮದೇ ರೀತಿಯಿಂದ ಯೋಚಿಸುವುದಾಗಲೀ, ವೈಯಕ್ತಿಕವಾಗಿ ಬೆಳೆಯುವುದಾಗಲೀ ಅನ್ಯಾಯವನ್ನು ಪ್ರಶ್ನಿಸುವುದಾಗಲೀ ಸಾಧ್ಯವಿರಲಿಲ್ಲ. ಸಮಾಜ, ಸಂಪ್ರದಾಯ ವಿಧಿಸುವ ನಿರ್ಬಂಧಗಳನ್ನು ಮೂಕವಾಗಿ ಒಪ್ಪಿಕೊಂಡು ಉಸಿರುಕಟ್ಟುವ ವಾತಾವರಣದಲ್ಲಿ ನೋಯುತ್ತ ನಡೆಯುತ್ತ ಹಣೆ ಬರಹವನ್ನು ಹಳಿಯುತ್ತ ಬದುಕುವ ದುರಂತವೇ ಅವರ ಪಾಲಿನ ಅದೃಷ್ಟವಾಗಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಹತ್ತಾರು ಸ್ತ್ರೀಪಾತ್ರಗಳು ಬರುತ್ತವೆ. ಅವರಿಗೆ ಸಂಬಂಧಿಸಿದಂತೆ ಅವರು ಬದುಕುತ್ತಿದ್ದ ರೀತಿಯ ಸ್ಪಷ್ಟ ಚಿತ್ರಣ ಅನೇಕ ಸಂದರ್ಭಗಳ ಮೂಲಕವಾಗಿ, ಸಮರ್ಥವಾಗಿ ನೀಡಿದ್ದಾರೆ. ಜಟ್ಟಮ್ಮ, ಮಂಜಮ್ಮ, ಚಿನ್ನಮ್ಮ, ನಾಗಮ್ಮ, ನಾಗತ್ತೆ, ಅಂತಕ್ಕ ಸೆಟ್ಟಿ, ಕಾವೇರಿ, ಪೀಂಚಲು, ತಿಮ್ಮಿ ಹೀಗೇ ಎಲ್ಲ ಜಾತಿ ವರ್ಗದ ಸ್ತ್ರೀಯರ ಚಿತ್ರ ಬರುತ್ತವೆ. ಮುಖ್ಯವಾಗಿ ಈ ಸ್ತ್ರೀಯರು ಶ್ರೇಣೀಕೃತ ಸಮಾಜದ ಮೂರು ವರ್ಗಗಳಿಂದ ಬಂದವರಾಗಿದ್ದಾರೆ. ಬ್ರಾಹ್ಮಣರು, ಶೂದ್ರರು, ದಲಿತರು ಈ ಮೂರೂ ಜಾತಿಯ ಹೆಂಗಸರಿದ್ದರೂ ಹೆಚ್ಚಿನ ಶೋಷಣೆ, ಕ್ರೌರ್ಯಗಳಿಗೆ ಬಲಿಯಾದವರು ಬ್ರಾಹ್ಮಣ ಹೆಂಗಸರಾಗಿದ್ದಾರೆ. ಅದರಲ್ಲಿಯೂ ವಿಧವೆಯರ ಬದುಕಂತೂ ಜೀವಂತ ನರಕವೆನಿಸುವಂತಿದೆ. ಧರ್ಮಶಾಸ್ತ್ರಗಳ ಹೆಸರಿನಲ್ಲಿ ಬ್ರಾಹ್ಮಣರ ಹೆಂಗಸರು ಅನುಭವಿಸುವ ಯಾತನೆಯ ಪ್ರಮಾಣ ಉಳಿದ ಜಾತಿ ವರ್ಗದ ಸ್ತ್ರೀಯರಿಗಿಂತ ಹೆಚ್ಚಿನದಾಗಿದೆ. ಒಂದು ರೀತಿಯಲ್ಲಿ ವಿಧವೆಯ ಜೀವನವೆಂದರೆ ಸಾಮಾಜಿಕವಾಗಿ ಬಹಿಷ್ಕೃತ ಬದುಕಾಗಿದೆ. ಆ ಜಾತಿಯ ಹೆಂಗಸರಿಗೆ ಮಡಿಯೊಂದೇ ಮಹಾ ಪ್ರಪಂಚವಾಗಿರುತ್ತದೆ. ಎಷ್ಟೇ ಕಿರಿಯ ವಯಸ್ಸಿನಲ್ಲಿ ವೈಧವ್ಯ ಪ್ರಾಪ್ತವಾದರೂ ಪುನರ್ವಿವಾಹಕ್ಕೆ ಅವಕಾಶಗಳೇ ಇರುವುದಿಲ್ಲ. ನಿಜವಾಗಿಯೂ ಇದೊಂದು ಸಾಮಾಜಿಕ ದುರಂತವೇ ಆಗಿದೆ. ಇಲ್ಲಿ ಬರುವ ಮಂಜಯ್ಯಭಟ್ಟರ ಕಡೆಯವಳಾದ ಬ್ರಾಹ್ಮಣ ಹೆಂಗಸು, ವಿಧವೆಯಾದವಳ ಚಿತ್ರದ ಮೂಲಕ ಅಂತಹ ಹೆಂಗಸರ ಶೋಚನೀಯ ಸ್ಥಿತಿಯ ಬಗ್ಗೆ ಓದುಗರ ಗಮನ ಸೆಳೆಯುತ್ತಾರೆ. ಕಲ್ಲೂರು ದೇವಸ್ಥಾನದಲ್ಲಿ ನಡೆಯುವ ಸತ್ಯನಾರಾಯಣ ಪೂಜೆ ಸಲುವಾಗಿ ಬೆಟ್ಟಳ್ಳಿ ಕಲ್ಲಯ್ಯಗೌಡರ ಮನೆಯವರು ಹೋದಾಗ, ಕಾಡು, ಧರ್ಮು, ತಿಮ್ಮು ಮೂವರು ಹುಡುಗರು ಹೊಳೆಯಲ್ಲಿ ಕೈ ಕಾಲು ತೊಳೆಯಲು ಹೊರಟಾಗ ಅವರಿಗೆ ಎದುರಾದ ಮಡಿ ಹೆಂಗಸಾದ ಅವಳನ್ನು ಸ್ಪರ್ಶಿಸಬಾರದು ಎನ್ನುವ ಪ್ರಜ್ಞೆಯೊಂದಿಗೆ ಕೆಂಪು ಸೀರೆಯ ಬೋಳು ತಲೆಯ ಹೆಂಗಸು ಆ ಎಳೆಯ ಮಕ್ಕಳ ತಿರಸ್ಕಾರಕ್ಕೂ ಪಾತ್ರಳಾಗುತ್ತಾಳೆ. 'ಬ್ರಾಂಬ್ರಲ್ಲಿ ಗಂಡ ಸತ್ತ ಮುಂಡೇರಿಗೆ ಮಂಡೆ ಬೋಳಿಸ್ತಾರೆ. ಅದಕ್ಕೇ ಬೋಳು ಮುಂಡೆ ಅನ್ನೋದು ಎನ್ನುವ'ಕಾಡು' ವಿನ ವ್ಯಾಖ್ಯಾನ ಧರ್ಮುವನ್ನು ಚಿಂತೆಗೆ ಗುರಿಮಾಡುತ್ತದೆ.

ತನ್ನ ತಾಯಿಯೂ ಕೂಡಾ ತಂದೆ ಸತ್ತರೆ ಇಂತಹ ರೂಪ ವಿಕಾರಕ್ಕೆ ಒಳಗಾಗಬಹುದೇ ಎನ್ನುವ ಅನುಮಾನಕ್ಕೆ ಧರ್ಮು ಮತ್ತೆ 'ಕಾಡು'ವನ್ನೇ ಮೊರೆ ಹೋಗುತ್ತಾನೆ. 'ನಮ್ಮಲ್ಲಿಯೂ ಗಂಡ ಸತ್ತರೆ ಹೀಗೆಯೇ ಮಾಡುತ್ತಾರೆಯೋ?'' ಎಂಬ ಪ್ರಶ್ನೆಗೆ ಥೂ! ಥೂ ಎಂಥ ಮಾತಾಡ್ತೀಯೋ! ನಮ್ಮಲ್ಲಿ ಯಾರಿಗೂ ಹೀಗೆ ಮಾಡಾದಿಲ್ಲೋ ಬ್ರಾಂಬ್ರ ಜಾತೀಲಿ ಮಾತ್ರ ಹಾಗೆ ಮಾಡಾದು'- ಎಂಬ ಉತ್ತರ ಧರ್ಮುವಿನ ಮನಸ್ಸಿಗೆ ಸಮಾಧಾನ ನೀಡುತ್ತದೆ. ಅಲ್ಲದೆ ಬ್ರಾಂಬ್ರ ಜಾತೀಲಿ ಹುಟ್ಟದಿದ್ದುದೇ ತಮ್ಮ ಅದೃಷ್ಟವೆಂದು ಕೊಳ್ಳುತ್ತಾನೆ. ಹೀಗೆ ಕಾದಂಬರಿಕಾರರು ತಮ್ಮ ಅಂದಿನ ಆ ಸಮಾಜದ ಸ್ತ್ರೀಯರ ಬಗೆಗಿನ ರೂಢಿಗತ ವಿಚಾರಗಳ ಮೇಲೆ ಬೆಳಕು ಚೆಲ್ಲುತ್ತಾರೆ. ಸ್ತ್ರೀ ಪಾತ್ರಗಳಲ್ಲಿ ಮುಖ್ಯರಾದವರಲ್ಲಿ ಶೂದ್ರ ಜನಾಂಗಕ್ಕೆ ಅಥವಾ ಜಮೀಂದಾರಿ ವರ್ಗಕ್ಕೆ ಸೇರಿದ ಚಿನ್ನಮ್ಮ, ನಾಗಕ್ಕ-ನಾಗತ್ತೆ, ಜಟ್ಟಮ್ಮ, ಮಂಜಮ್ಮ ಮೊದಲಾದವರು. ಚಿನ್ನಮ್ಮನೇ ಒಂದು ದೃಷ್ಟಿಯಲ್ಲಿ ಕೇಂದ್ರ ಪಾತ್ರವಾಗುತ್ತಾಳೆ. ಚಿನ್ನಮ್ಮ ಹೂವಳ್ಳಿ ವೆಂಕಟಪ್ಪನಾಯಕನ ಮಗಳು ಬಾಲ್ಯದಲ್ಲಿಯೇ ತಾಯಿಯನ್ನು ಕಳೆದುಕೊಂಡು ಅಜ್ಜಿಯ ಲಾಲನೆ ಪಾಲನೆಯಲ್ಲಿ ಬೆಳೆದವಳು. ಭಾವನಾದ ಮುಕುಂದಯ್ಯನನ್ನು ತನ್ನ ಜನ್ಮ ಜನ್ಮಾಂತರದ ಗಂಡ ನೆಂದು ಭಾವಿಸಿದವಳು. ಒಂದು ಕಾಲಕ್ಕೆ ಚೆನ್ನಾಗಿ ವೈಭವದಿಂದ ಬಾಳಿ ಬದುಕಿದ ವೆಂಕಪ್ಪನಾಯಕ ಮೈಯಲ್ಲಿ ಸಾಲಹೊತ್ತ ಪರಿಣಾಮವಾಗಿ, ಚಿನ್ನಮ್ಮ ಭರಮ್ಮೈ ಹೆಗ್ಗಡೆ ಅವರ ಎರಡನೇ ಹೆಂಡತಿಯಾಗಬೇಕಾದ ವಿವಶತೆ ಎದುರಾಗುತ್ತದೆ. ಚಿನ್ನಮ್ಮನೂ ಸಂಪ್ರದಾಯದ ನಿಷ್ಠುರತೆಗೆ ಒಳಗಾದವಳು. ತನಗೆ ಮನಸ್ಸಿಲ್ಲದಿದ್ದರೂ ಹಿರಿಯರ ಮಾತಿಗೆ ಚಕಾರವೆತ್ತಲಾಗದ ಅಸಹಾಯಕತೆ ಅವಳದಾಗಿತ್ತು. ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದ ಮುಕುಂದಯ್ಯನಿಂದ ತಾನು ಜಾರಿ ಹೋಗುತ್ತಿದ್ದೇ ನೆಂದು ತಿಳಿದೂ ತಿಳಿದೂ ತನಗಿಂತ ವಯಸ್ಸಿನಲ್ಲಿ ಎಷ್ಟೋ ಹಿರಿಯನಾದ ಭರಮ್ಮೈ ಹೆಗ್ಗಡೆಯನ್ನು ನಿರಾಕರಿಸಲಾಗದೆ, ದೊಡ್ಡವರನ್ನು ಪ್ರತಿಭಟಿಸಲಾಗದೆ ಅಸಮರ್ಥತೆಯ ಚಡಪಡಿಕೆಯಲ್ಲಿ ಕುಗ್ಗಿ ಹೋಗುತ್ತಾಳೆ. ಆದರೆ ತನ್ನ ತಂದೆಗೆ ಕೂಡಿಕೆಯ ಸಂಬಂಧವಾಗಿ ಬಂದ ನಾಗಕ್ಕನ ಪ್ರೀತಿ, ವಾತ್ಸಲ್ಯಗಳು ಮುಕುಂದಯ್ಯನ ಪ್ರಯತ್ನಗಳು, ಪೀಂಚಲು, ಐತರ ಸಹಾಯದಿಂದ ಚಿನ್ನಮ್ಮ ತನಗೆ ಗೊತ್ತಾಗಿದ್ದ ಮದುವೆಯ ದಿನದ ಹಿಂದಿನ ರಾತ್ರಿ ಮುಕುಂದಯ್ಯನ ಜೊತೆಗೆ ಮದುವಣಗಿತ್ತಿ ವೇಷದಲ್ಲಿಯೇ ತಪ್ಪಿಸಿಕೊಂಡು ಓಡಿಹೋಗುತ್ತಾಳೆ, ಕಾದಂಬರಿಕಾರರ ದೃಷ್ಟಿಯಲ್ಲಿ ಚಿನ್ನಮ್ಮ ಯುಗಧರ್ಮಶಕ್ತಿಗೆ ಸೇವೆ ಸಲ್ಲಿಸುವ ಚೇತನವೊಂದನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿದ್ದಾಳೆ. ಗಡ್ಡದಯ್ಯನ ದಿವ್ಯ ದೃಷ್ಟಿಯಲ್ಲಿ ಮುಕುಂದಯ್ಯ ಮತ್ತು ಚಿನ್ನಮ್ಮ ಪೂರ್ವಜನ್ಮದಲ್ಲಿಯೂ ದಂಪತಿಗಳಾಗಿದ್ದವರು. ಚಿನ್ನಮ್ಮನೂ ಇದೇ ರೀತಿ ಮುಕುಂದಯ್ಯ ತನ್ನ ಪೂರ್ವಜನ್ಮದ ಗಂಡನೆಂಬ ಕನಸು ಕಂಡವಳು. ಆದರೆ ಪರಿಸ್ಥಿತಿಗಳು ಆ ನಂಬಿಕೆ ಕನಸುಗಳನ್ನು ಭಗ್ನಗೊಳಿಸುವಂತೆ ಕಂಡರೂ ಕಾದಂಬರಿಯ ಕಡೆಯಲ್ಲಿ ಎಲ್ಲವೂ ನಿಯೋಜಿತವಾದಂತೆ ನಡೆಯುತ್ತದೆ. ತಪ್ಪಿದ ತಾಯಿಯ ಪ್ರೀತಿ ವಾತ್ಸಲ್ಯಗಳನ್ನು ನಾಗಕ್ಕನಲ್ಲಿ ಕಾಣುತ್ತಾಳೆ. ಮಲೆನಾಡಿನ ಮದುಮಗಳಾಗಿ ಚಿನ್ನಮ್ಮ ನಾಗಕ್ಕನಲ್ಲಿ ಕಾಣುತ್ತಾಳೆ. ಮಲೆನಾಡಿನ ಮದುಮಗಳಾಗಿ ಚಿನ್ನಮ್ಮ ತನ್ನ ಜನ್ಮಾಂತರ ಸಂಬಂಧವನ್ನು ಸಾರ್ಥಕವಾಗಿ ಪಡೆಯುತ್ತಾಳೆ.

ಚಿನ್ನಮ್ಮನಂತಹ ಮುಗ್ಧ ಹುಡುಗಿಯ ಅಳಲಿನಲ್ಲಿ ಪ್ರೀತಿ. ವಾತ್ಸಲ್ಯಗಳನ್ನು ಧಾರೆಯೆರೆಯಲು ಬಂದ ನಾಗಕ್ಕ ನಾಗತ್ತೆಯ ಕ್ರೂರ ಕೈಗಳಲ್ಲಿ ಸಿಕ್ಕು ನರಳುತ್ತಾಳೆ. ಬಾವಿ ಕೊಪ್ಪದ ನಾಗಣ್ಣ ನಾಗತ್ತೆಯ ಎರಡನೆ ಗಂಡನಿಗೆ ಹುಟ್ಟಿದವನು. ನಾಗಣ್ಣನ ತಂದೆ ಬಾವಿಕೊಪ್ಪದಲ್ಲಿ ಸಿಂಬಾವಿ ಒಕ್ಕಲಾಗಿದ್ದವನು. ಅನಾರೋಗ್ಯದ ನಿಮಿತ್ತ ಸಾಯುವಾಗ ನಾಗಣ್ಣ ಚಿಕ್ಕವನಾಗಿದ್ದ. 15-16ವರುಷದ ಪ್ರಾಯಕ್ಕೆ ಬರುತ್ತಿದ್ದಂತೆ ನಾಗತ್ತೆ ಬಡ ಒಕ್ಕಲು ಹೆಣ್ಣು ಮಗಳಾದ ನಾಗಕ್ಕನನ್ನು ತಂದು ನಾಗಣ್ಣನಿಗೆ ಮದುವೆ ಮಾಡಿಸಿದಳಾದರೂ ಅವನೂ ಬಹಳ ದಿವಸಬದುಕಲಿಲ್ಲ. ತಾಯಿಯ ಕೈಯ್ಯಲ್ಲಿ ಬಹುವಾಗಿ ಅನುಭವಿಸಿದ ಹಿಂಸೆ, ತಂದೆಯಿಂದ ತನಗೆ ತಗುಲಿದ ಅಂಟು ರೋಗದಿಂದ ಸಾಯಲು, ಹೆಂಡತಿ ನಾಗಕ್ಕ ಅನಾಥವಾಗುತ್ತಾಳೆ. ನಾಗಕ್ಕ ಗಂಡನನ್ನು ಉಳಿಸಿಕೊಳ್ಳಲು ಮಾಡುವ ಪ್ರಯತ್ನಗಳೆಲ್ಲವೂ ವಿಫಲವಾಗುತ್ತವೆ. ಜೊತೆಗೆ ಗಂಡ ಸತ್ತದಿನದಿಂದ ನಾಗತ್ತೆಯ ಹಿಂಸೆ ದುರ್ಭರವಾಗುತ್ತದೆ. ಪ್ರಾಯ ರೂಪುಗಳಿದ್ದ ನಾಗಕ್ಕನನ್ನು ನಾಗತ್ತೆ ತನ್ನ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳಲು ಹವಣಿಸುತ್ತಾಳೆ. ಭರಮೈ ಹೆಗ್ಗಡೆಯ ಆಸ್ತಿ ಪಾಸ್ತಿ, ಪ್ರತಿಷ್ಠೆಗಳು ಅವಳ ಕಣ್ಣು ಕೋರೈಸುವಂತೆ ಮಾಡುತ್ತವೆ. ಹೇಗಾದರೂ ಮಾಡಿ ನಾಗಕ್ಕನನ್ನು ಅವನೊಂದಿಗೆ ಕೂಡಿಕೆ ಮಾಡಿಸಿ ಆಸ್ತಿಲಪಟಾಸಿಯಬೇಕೆಂಬುದು ಅವಳ ಹುನ್ನಾರ. ಭರಮೈ ಹೆಗ್ಗಡೆಗೆ ಮೊದಲ ಹೆಂಡತಿಯಿಂದ ಮಕ್ಕಳೇ ಇಲ್ಲದ ಕಾರಣ, ಆಸ್ತಿಯಲ್ಲಿ ನಾಗಕ್ಕನ ಸಂತಾನದ ಮೂಲಕ ತಮಗೇ ದಕ್ಕುವುದೆಂಬ ಲೆಕ್ಕಾಚಾರ. ಒಂದು ವೇಳೆ ಸೀರುಡಿಕೆಗೆ ಒಪ್ಪದಿದ್ದರೂ ಭರಮೈ ಹೆಗ್ಗಡೆಯ ಮೈಯಾಸಕ್ತಿ ತಣಿಸಿದರೂ ಸಾಕು, ತಮ್ಮ ಇಷ್ಟಾರ್ಥಗಳೆಲ್ಲವೂ ಕೈ ಗೂಡುತ್ತವೆಂಬುದು ಅವಳ ಬಲವಾದ ನಂಬಿಕೆ. ನಾಗಕ್ಕ ಮಾತ್ರ ಸಾಧ್ಯವಾದಷ್ಟೂ ನಾಗತ್ತೆಯ ಪ್ರಯತ್ನಗಳಿಗೆ ತಣ್ಣೀರೆರಚುತ್ತಾಳೆ. ಆದರೆ ನಾಗತ್ತೆಯು ಹಿಡಿದ ಪಟ್ಟು ಸಡಿಲಿಸುವುದಿಲ್ಲ. ಅವಳ ಕಪಿಮುಷ್ಠಿ ಇನ್ನಷ್ಟು ಬಿಗಿಯಾಗುತ್ತದೆ. ಊರಿಂದ ಊರಿಗೆ ದನಗಳನ್ನು ಗಿರಾಕಿಗಳಿಗೆ ಪರಿಚಯಮಾಡಿಸುವಂತೆ ನಾಗಕ್ಕನನ್ನು ಅಟ್ಟಿಕೊಂಡು ಅಲೆಯುತ್ತಾಳೆ. ಅವಳ ನಿರೀಕ್ಷೆಯಂತೆ ನಾಗಕ್ಕನ ರೂಪ, ವಯಸ್ಸು ಅನೇಕ ಗಂಡುಗಳನ್ನು ಕೆರಳಿಸುತ್ತವೆ. ನಾಮುಂದು ತಾಮುಂದು ಎಂದು ಒಬ್ಬರ ಮೇಲೊಬ್ಬರು ಗಂಡುಗಳು ನಾಗಕ್ಕನ ಸ್ನೇಹಕ್ಕಾಗಿ ಮುಗಿ ಬೀಳುತ್ತಾರೆ. ನಾಗಕ್ಕನಿಗೆ ಇದು ಚಿತ್ರ ಹಿಂಸೆಯಾಗಿ, ನರಕವಾಗಿ ಪರಿಣಿಸುತ್ತದೆ. ಹೇಗಾದರೂ ನಾಗತ್ತೆಯಿಂದ ಬಿಡಿಸಿಕೊಂಡು ಹೋಗಬೇಕೆಂದು ಪ್ರಯತ್ನಿಸುತ್ತಾಳೆ. ಆತ್ಮಹತ್ಯೆಯ ಬೆದರಿಕೆ ಹಾಕುತ್ತಾಳೆ. ಇದು ಯೂವುದಕ್ಕೂ ಸೊಪ್ಪು ಹಾಕದ ನಾಗತ್ತೆ ಈಗ ಸಾಮ, ಭೇದೋಪಾಯಗಳನ್ನು ಆಶ್ರಯಿಸುತ್ತಾಳೆ. ಮೆಲ್ಲನೆ, ಮೃದುವಾಗಿ, ಸಮಾಧಾನದಿಂದ ತಾನು ಒಂದಲ್ಲ ಒಂದು ದಿನ ಅವಳನ್ನು ಹೇಗಾದರೂ ಮಾಡಿ ಒಲಿಸಿಕೊಳ್ಳುತ್ತೇನೆಂಬ ಭರವಸೆ ತಳೆಯುತ್ತಾಳೆ. ಆದರೂ ಗುಪ್ತ ಭೀತಿಯೊಂದು ಹೆದೆಯಾಡುತ್ತಿರುವುದರಿಂದ, ಕಡೆಗೆ ಮಾಟ, ಮಂತ್ರ, ತಂತ್ರ ಜಕ್ಕಿಣಿ ಮುಂತಾದವುಗಳ ಮೊರೆಹೊಕ್ಕು ಗೆಲುವನ್ನು ಸಾಧಿಸಿಯೇ ಸಾಧಿಸುತ್ತಾಳೆ. ಮರು ಮದುವೆಯನ್ನು ಧಿಕ್ಕರಿಸುತ್ತಿದ್ದ ನಾಗಕ್ಕ ಚಿನ್ನಮ್ಮನ ಕಾರಣದಿಂದಾಗಿ ಹೂವಳ್ಳಿ ವೆಂಕಟಪ್ಪ ನೊಂದಿಗೆ ಸೀರುಡಿಕೆಗೆ ಅಂಗೀಕರಿಸುತ್ತಾಳೆ. ವೆಂಕಟಪ್ಪನಾಯಕ ಎಷ್ಟೋ ದಿನಗಳಿಂದ

ಹೆಂಡತಿಯಿಲ್ಲದೆ ಒಂಟಿ ಬದುಕಿನಿಂದ ಬೇಸತ್ತವನಿಗೆ ಈ ಸಂಬಂಧ ಸಂಭ್ರಮವನ್ನು ತರುತ್ತದೆ. ದೆಯ್ಯದ ಹರಕೆಯ ಹೆಸರಿನಲ್ಲಿ ಹಬ್ಬಮಾಡಿ, ಅದೇ ದಿನ ನಾಗಕ್ಕನೊಂದಿಗೆ ಸೀರುಡಿಕೆ ಮಾಡಿ ಕೊಳ್ಳುತ್ತಾನೆ. ನಾಗಕ್ಕನಿಗೆ ನಾಗತ್ತೆಯ ವರ್ತನೆ ಬೇಸರ ತರಿಸಿದ್ದರೂ ಚಿನ್ನಮ್ಮನ ಬಗ್ಗೆ ತಳೆದ ಪ್ರೀತಿ, ವಾತ್ಸಲ್ಯ, ಮೋಹಗಳಿಂದ ಎಲ್ಲ ಬಗೆಯ ಹಿಂಸೆಯನ್ನೂ ತಾಳಿಕೊಳ್ಳುತ್ತಾಳೆ. ಬಲಾತ್ಕಾರದ ಮದುವೆಯ ದುಷ್ಪರಿಣಾಮಗಳನ್ನು ನಾಗಕ್ಕ ಅರಿತಿದ್ದವಳಾದ ಕಾರಣ ಚಿನ್ನಮ್ಮ- ಮುಕುಂದಯ್ಯರ ಅನನ್ಯ ಪ್ರೀತಿಗೆ ಕುಮ್ಮಕ್ಕು ಕೊಡುತ್ತಾಳೆ. ಮದುವೆ ಹಿಂದಿನ ದಿಬ್ಬಣದ ದಿವಸದ ರಾತ್ರಿ ಮದುಮಗಳಾದ ಚಿನ್ನಮ್ಮನನ್ನು ನೆಂಟರಿಷ್ಟರ ಕಣ್ಣು ತಪ್ಪಿಸಿ ಮುಕುಂದಯ್ಯನೊಂದಿಗೆ ಓಡಿ ಹೋಗಲು ಬೇಕಾದ ಎಲ್ಲ ವ್ಯವಸ್ಥೆಯನ್ನು ಮಾಡುತ್ತಾಳೆ, ನಾಗಕ್ಕನಲ್ಲಿ ಪ್ರೀತಿ, ಮಾನವೀಯತೆಗಳಿವೆ. ವಿಧಿಯ ಕೈ ಗೊಂಬೆಯಾಗಿ ಮನಸ್ಸಿನ ಆಸೆ, ಆಕಾಂಕ್ಷೆಗಳಿಗೆ ವಿರುದ್ಧವಾಗಿ ಸಮಾಜ ರೂಪಿಸಿಕೊಟ್ಟ ವ್ಯವಸ್ಥೆಯ ಒಳಗೇ ಪರಿಸ್ಥಿತಿಗಳೊಂದಿಗೆ ಒಪ್ಪಂದ ಮಾಡಿಕೊಂಡು ಬದುಕುವಂತಾಗುತ್ತದೆ.

ಈ ಕಾದಂಬರಿಯಲ್ಲಿನ ಉಳಿದ ಸ್ತ್ರೀ ಪಾತ್ರಗಳಿಗಿಂತ ಮುಕ್ತವಾಗಿ ಸ್ವತಂತ್ರವಾಗಿ, ಸ್ವಚ್ಛಂದವಾಗಿ ಯಾವ ನಿಯಮ ನಿರ್ಬಂಧಗಳಿಗೂ ಒಳಗಾಗದ, ಸಂಪ್ರದಾಯದ ಹೇರಿಕೆಯಿಲ್ಲದ ವೈಯಕ್ತಿಕ ಆಯ್ಕೆಯ ಸ್ವಾತಂತ್ರ್ಯ ಮತ್ತು ಸಾಮಾಜಿಕ ಸ್ವೀಕೃತಿಯ ಮುದ್ರೆ ಪಡೆದ ಜಾತಿ ವರ್ಗಕ್ಕೆ ಸೇರಿದವಳಾದ ಪೀಂಚಲು ಮತ್ತು ತಿಮ್ಮಿಯಂತಹವರು. ಪೀಂಚಲು ಮತ್ತು ಐತರ ಪ್ರೀತಿ ಆದರ್ಶದ್ದು. ಅವಳನ್ನು ಯಾವ ಭೀತಿಯೂ ಕಾಡುವುದಿಲ್ಲ. ತನ್ನ ಜಾತಿಯಾಗಲೀ, ಆರ್ಥಿಕ ಪರಿಸ್ಥಿತಿಗಳಾಗಲೀ ಅವಳ ಮನಸ್ಸಿನ ಉಲ್ಲಾಸವನ್ನು ಕೆಡಿಸುವುದಿಲ್ಲ. ಸಣ್ಣತನಗಳ ಸೋಂಕಿಲ್ಲದೆ ಎಲ್ಲರಿಗೂ ಪ್ರೀತಿಯನ್ನು ಹಂಚಿಕೊಡುತ್ತ ಪ್ರೀತಿಗಾಗಿ ಹಂಬಲಿಸುತ್ತ ಬದುಕುವ ಸ್ವಸ್ಥ ಮನಸ್ಸಿನ ದಲಿತ ಹೆಣ್ಣು ಇವಳು. ಐತನೊಂದಿಗೆ ಮದುವೆಯಾಗುವವರೆಗೂ ಪೀಂಚಲು ಮುಕುಂದಯ್ಯನ ಸಹಚಾರಿಯಾಗಿ ಜಾತಿ, ಲಿಂಗ ಭೇದವಿಲ್ಲದೆ ಅವನ ಎಲ್ಲ ಸಾಹಸಗಳಲ್ಲಿಯೂ ಒಡನಾಡಿಯಾಗಿದ್ದಳು. ಮುಕುಂದಯ್ಯನಿಗೂ ಪೀಂಚಲು ಬಗ್ಗೆ ಮೆಚ್ಚುಗೆ, ಆಸಕ್ತಿಗಳು ಇದ್ದುವೇ ಹೊರತಾಗಿ ಕಾಮುಕ ದೃಷ್ಟಿಯಿರಲಿಲ್ಲ, ನಿಸರ್ಗದ ಮಡಿಲು ಕೂಸಾಗಿ, ತಾನೇ ನಿಸರ್ಗದ ಒಂದು ಭಾಗವಾಗಿ, ಬೆಟ್ಟ, ಗುಡ್ಡ, ಕಾಡು, ಕಣಿವೆ ಎಂಬ ಪರಿವೆಯಿಲ್ಲದೆ ಮಲೆನಾಡಿನ ಕಾಡಿನ ಮೂಲೆ ಮೂಲೆಗಳನ್ನೂ ಲೀಲಾ ಜಾಲವಾಗಿ ಹಾದು ಹಾರ ಬಲ್ಲವಳಾಗಿದ್ದಳು. ಮರಹತ್ತುವುದು, ಜೇನು ಕೀಳುವುದು, ಏಡಿ ಹಿಡಿಯುವುದು ಮುಂತಾದ ಕೆಲಸಗಳಲ್ಲಿ ಹೆಣ್ಣೆಂಬ ಪ್ರಜ್ಞೆ ಮರೆತು ಸಾಹಸಗಳಲ್ಲಿ ಕೈ ಹಾಕುತ್ತಿದ್ದಳು. ಎಲ್ಲಕ್ಕಿಂತ ಹೆಚ್ಚಾಗಿ ಮುಕುಂದಯ್ಯನ ಅಂತರಂಗ ರಹಸ್ಯಗಳನ್ನೆಲ್ಲ ತಿಳಿದು ಕೊಂಡಿರುವಷ್ಟರ ಮಟ್ಟಿಗಿನ ಸಲುಗೆಯ ಸಂಬಂಧದಲ್ಲಿ ಅವನ ಜೊತೆ, ಅಷ್ಟು ಹತ್ತಿರದಲ್ಲಿ ಇರುತ್ತಿದ್ದಳು. ಮುಕುಂದಯ್ಯನ ವಿಚಾರದಲ್ಲಿ ಅವಳಿಗೆ ಅಪಾರ ಪ್ರೀತಿ, ಸ್ನೇಹ. ತನಗಿಂತ ಜಾತಿಯಲ್ಲಿ ಬುದ್ಧಿಯಲ್ಲಿ ಮೇಲಿದ್ದ ಮುಕುಂದಯ್ಯನ ಬಗ್ಗೆ ಸ್ನೇಹ, ಪ್ರೀತಿಯ ಜೊತೆಗೆ ಆರಾಧ್ಯಭಾವ. ಎಲ್ಲ ಜಾತಿ, ಜನಾಂಗದ ಮಕ್ಕಳಿಗಿಂತ, ರೂಪ, ಅಂತಸ್ತು, ಅಧಿಕಾರಗಳಲ್ಲಿ ಮೇಲಿದ್ದ ಮುಕುಂದಯ್ಯನನ್ನು ಯಾವ ಹೆಣ್ಣಾದರೂ ಬಯಸಿ

ಮುಗಿಬೀಳುವಂತಿದ್ದ ಕಾರಣ ತಾನೆಷ್ಟೇ ಅವನನ್ನು ಪ್ರೀತಿಸಿದರೂ ಆರಾಧಿಸಿದರೂ ಹೊರಗೆ ತೋರಿಸಿಕೊಳ್ಳುವುದು ಅವಳಿಗೆ ಉಚಿತವೆನಿಸಲಿಲ್ಲ. ಮನಸ್ಸಿನ ಯಾವುದೋ ಒಂದು ಮೂಲೆಯಲ್ಲಿ ಅವನ ಸಾಮೀಪ್ಯ, ಸ್ಪರ್ಶಗಳಿಗೆ ಬಯಕೆ ಹೆಡೆಯಾಡುತ್ತಿತ್ತು. ಕೇವಲ ಒಂದು ಸ್ಪರ್ಶ ಅವಳಿಗೆ ಸಪ್ತಸ್ವರ್ಗಗಳ ಸುಖವನ್ನೂ ತಣಿದಂತೆನಿಸುತ್ತಿತ್ತು. ಆದರೆ ಪೀಂಚಲು ಅಂತಹ ಕೆಳವರ್ಗದ ಹೆಣ್ಣಿಗೆ ಅದು ಕೇವಲ ಕನಸಿನ ಕೈ ಗನ್ನಡಿಯಾಗಿತ್ತು. ಐತನ ಮದುವೆಯ ನಂತರ ಜಾತಿ, ಸಮಾಜ, ವರ್ಗ ತಾರತಮ್ಯಗಳಿಂದಾಗಿ ಪೀಂಚಲುಗೆ ಗಂಡು ಹೆಣ್ಣುಗಳ ಸಂಬಂಧದ ಸ್ವರೂಪದಲ್ಲಿ ಅತ್ಯಂತ ವಿಸ್ಮಯದ, ಸುಖದ ಹೊಸ ಅನುಭೂತಿಯಿಂದಾಗಿ ಮುಕುಂದಯ್ಯನ ವಿಷಯದಲ್ಲಿ ಅವಳ ನಡವಳಿಕೆ ಸಾಮಾಜಿಕ ಮತ್ತು ನೀತಿಯ ಚೌಕಟ್ಟಿಗೆ ಒಳಗಾಯಿತು, ಮುಕುಂದಯ್ಯನ ಕಡೆಗೆ ವಾಲುತ್ತಿದ್ದ ಆಸಕ್ತಿ ಸಂಪೂರ್ಣವಾಗಿ ಐತನ ಅಪಾರ ಪ್ರೀತಿಯ ಪ್ರವಾಹದಲ್ಲಿ ಕೊಚ್ಚಿಹೋಯಿತು. ಆದರೆ ಅದು 'ಪಾತಿವ್ರತ್ಯದ ಪ್ರಜ್ಞೆಗೆ ಹೊರತಾದುದಾಗಿತ್ತು. ಅವಳ ಜಾತಿ ಸಮುದಾಯಗಳಲ್ಲಿ ಕಟ್ಟಿಕೊಂಡ ಗಂಡನಿಗೇ ನಿಷ್ಠೆಯಿಂದ, ನರಕವನ್ನಾದರೂ ಅನುಭವಿಸುತ್ತ ಇರಬೇಕೆಂಬ ಕಟ್ಟು ಕಟ್ಟಳೆಯೇನೂ ಇರಲಿಲ್ಲ. ಬಯಸಿದಲ್ಲಿ ವಿವಾಹ ಬಾಹಿರವಾಗಿಯೂ ಅವಳು ಅನ್ಯ ಪುರುಷನ ಸಂಬಂಧವನ್ನು ಇರಿಸಿಕೊಳ್ಳಬಹುದಾಗಿತ್ತು. ಇಲ್ಲವೆ ಅವನನ್ನು ಬಿಟ್ಟು ಕೂಡಿಕೆಯಿಂದಲೂ ಅನ್ಯ ಪುರುಷನೊಡನೆ ಇರಬಹುದಾದ ಅವಕಾಶವಿತ್ತು. ಪೀಂಚಲು ಐತನಿಗೆ ನಿಷ್ಠವಾಗಿದ್ದದ್ದು ಅವರಿಬ್ಬರ ನಡುವಿನ ಅನನ್ಯವಾದ, ನೈಸರ್ಗಿಕವಾದ ಪ್ರೀತಿಯ ಗಟ್ಟಿತನದಿಂದಾಗಿ! ಆದ್ದರಿಂದಲೇ ಅವಳಿಗೆ ಮುಕುಂದಯ್ಯನಾಗಲೀ, ಅನ್ಯಪುರುಷನಾಗಲೀ, ಬೇಕೆನಿಸಲಿಲ್ಲ. ಆದರೂ ಮುಕುಂದಯ್ಯನ ಬಗೆಗಿನ ಅಭಿಮಾನ, ಆರಾಧನಾಭಾವ, ಸ್ನೇಹಗಳು ಮಾತ್ರ ಅಚ್ಚಳಿಯದೆ ಮುಂದುವರೆದವು. ಮುಕುಂದಯ್ಯ ಬೇಡುವ ಯಾವೊಂದನ್ನೂ ಅವಳು ತಿರಸ್ಕರಿಸಲಾರಳು! ಕೊನೆಗೆ ತನ್ನಿಂದ ಅಪೇಕ್ಷಿಸುವ ದೈಹಿಕ ಸುಖವನ್ನೂ ಕೂಡ ಯಾವುದೇ ಬಗೆಯ ಸಂಕೋಚ, ಹಿಂಜರಿಕೆಗಳಿಲ್ಲದೆ ನೀಡ ಬಲ್ಲವಳಾಗಿದ್ದಳು. ಐತನಿಗೆ ನೀಡುವಷ್ಟೇ ಸಂತೋಷ, ತೃಪ್ತಿಯಿಂದ ನೀಡುವುದರಲ್ಲಿ ಸಂಶಯವಿರಲಿಲ್ಲ. ಮುಕುಂದಯ್ಯನನ್ನು ಎಲ್ಲ ಬಗೆಯಿಂದ ತೃಪ್ತಿ ಪಡಿಸುವುದರಲ್ಲಿ ಅವಳಿಗೆ ಧನ್ಯತಾಭಾವವಲ್ಲದೆ, ಮತ್ತೇನೂ ಅನಿಸುವುದಿಲ್ಲ. ಅದು ತಾನು ಒಡೆಯನಿಗೆ ತೋರುವ ಗೌರವ ವಿಧೇಯತೆಗಳೆಂದೇ ಭಾವಿಸುತ್ತಿದ್ದಳು. ಆತ್ಮ ನೈವೇದ್ಯ ರೂಪದಲ್ಲಿ, ಗಂಡನಿಗೆ ದ್ರೋಹ ಮಾಡುತ್ತಿದ್ದೇನೆಂಬ ಅಳುಕಿಲ್ಲದೆ ಅರ್ಪಿಸಿಕೊಳ್ಳ ಬಲ್ಲವಳಾಗಿದ್ದಳು. ಏಡಿ ಹಿಡಿಯುವ ಪ್ರಯತ್ನದಲ್ಲಿ ಪೀಂಚಲು ಜಾರಿ ನೀರಿಗೆ ಬೀಳಲಿದ್ದವಳನ್ನು ಮುಕುಂದಯ್ಯ ರಕ್ಷಿಸುವ ಪ್ರಯತ್ನದಲ್ಲಿ ಅವನ ಕೈ ಸ್ಪರ್ಶವನ್ನೂ ಹಿತವಾಗಿ ಅನುಭವಿಸಿದವಳಾದರೂ, ತೋರಿಸಿಕೊಳ್ಳದೆ, ಜಾತಿಯಲ್ಲದವಳನ್ನು ಮುಟ್ಟಿ ಮೈಲಿಗೆ ಮಾಡಿಕೊಂಡಿರಿ ಎಂದು ನಗೆಯಾಡುತ್ತಾಳೆ, ಕೀಟಲೆ ಮಾಡುತ್ತಾಳೆ.

ಚಿನ್ನಮ್ಮ ಮುಕುಂದಯ್ಯರ ಪ್ರೀತಿಯ ಗಾಢತೆಯನ್ನು ಅರಿತಿದ್ದ ಪೀಂಚಲು ಅವರಿಬ್ಬರಿಗೆ ಸಹಾಯ ಮಾಡುತ್ತಾಳೆ. ಮುಕುಂದಯ್ಯನ ರಹಸ್ಯ ಸಂದೇಶವಾಹಕಳಾಗಿ ಚಿನ್ನಮ್ಮನ ಮನಸ್ಸಿಗೆ ಸಮಾಧಾನ ತರುತ್ತಾಳೆ.

ಇಂತಹ ಮುಗ್ಧ, ಮುಕ್ತ, ಸ್ವಚ್ಛಂದ ಹೆಣ್ಣಾದ ಪೀಂಚಲು ಮತ್ತು ಐತರ ದಾಂಪತ್ಯದ ಹಾಲ್ಗಡಲಲ್ಲಿ ಚೀಂಕ್ರನಂತಹ ಕೆಟ್ಟ ವ್ಯಕ್ತಿಗಳು ಪ್ರವೇಶಿಸಿ, ಇಲ್ಲ ಸಲ್ಲದ ಅನುಮಾನಗಳನ್ನು ಸೃಷ್ಟಿಸಿ ಆರೋಪಗಳನ್ನು ಹೊರಿಸಿ, ಹುಳಿ ಹಿಂಡಿ ಹಾಳು ಗೆಡವುತ್ತಾರೆ. ಐತನಿಗೆ ನೀಡುತ್ತಿದ್ದ ಪ್ರೀತಿ ನಿರ್ಮಲವಾದುದಾಗಿತ್ತು. ಐತನಿಗೆ, ತನ್ನ ಸರ್ವಸ್ವವನ್ನೂ ಧಾರೆಯೆರೆದು ದೇಹ ಮನಸ್ಸುಗಳೆರಡನ್ನೂ ತಣಿಸಿದ್ದಳು. ದುಡಿದು, ದಣಿದು ಬಂದವನನ್ನು ಆದರಿಸಿ ಕರೆದು ಉಣಿಸಿ, ವಿನೋದದ ಮಾತುಗಳಾಡಿ ತಣಿಸುತ್ತಿದ್ದಳು. ಇಂತಹವಳ ಬಗ್ಗೆ ಚೀಂಕ್ರ, ಐತನ ಮನಸ್ಸನ್ನು ಕೆಡಿಸಿ, ಅವಳು ತಂದ ಸೀರೆ, ಮಲ್ಲಿಗೆ, ಹೋಳಿಗೆಗಳನ್ನು ಅನುಮಾನದಿಂದ ನೋಡಿ ಪ್ರಶ್ನಿಸುವಂತೆ ಮಾಡುತ್ತಾನೆ. ಆದರೆ ಪೀಂಚಲು ನಿಜಸಂಗತಿಗಳನ್ನು ತಿಳಿಸಿ. ಅನುಮಾನ ಪರಿಹರಿಸುತ್ತಾಳೆ. ಕ್ಷಣಾರ್ಧದಲ್ಲಿ ಸಿಟ್ಟು ಸೆಡವುಗಳು ಮರೆಯಾಗಿ ಮನಸ್ಸುಗಳು ತಿಳಿಯಾಗುತ್ತವೆ. ಅವರಿಬ್ಬರ ಆದರ್ಶ ಪ್ರೀತಿ, ಪ್ರೇಮಗಳು ನೋಡುವವರನ್ನು ಕರುಬುವಂತೆ ಮಾಡುವಂತಿದ್ದವು. ಜಾತಿ ಕೆಳಗಿನದಾದರೇನು ಅವರಿಬ್ಬರಲ್ಲಿಯೂ ಜೀವಂತ ಮಾನವತೆಯ ಸೆಲೆ ಇತ್ತು. ತನ್ನ ವೈಯಕ್ತಿಕ ಕಾಳಜಿಯನ್ನು ಬದಿಗಿಟ್ಟು, ಚಿನ್ನಮ್ಮ ಮುಕುಂದಯ್ಯರ ಪ್ರೇಮಕ್ಕೆ ಒತ್ತಾಸೆ ಕೊಡಲು ಭಯಂಕರವಾಗಿ ಭೋರಿಡುವ ಮಳೆಯ ರಾತ್ರಿಯನ್ನೂ ಲೆಕ್ಕಿಸದೆ ಮುಂದಾಗುತ್ತಾಳೆ. ಹಾಗೆಯೇ ತಿಮ್ಮಿ-ಗುತ್ತಿಯರು ರಹಸ್ಯವಾಗಿ ಪಲಾಯನ ಮಾಡುವ ಸಂದರ್ಭದಲ್ಲಿ ಪೀಂಚಲು ತನ್ನ ಪುಟ್ಟ ಗುಡಿಸಲಲ್ಲಿ ತಿಮ್ಮಿಗೆ ಆಶ್ರಯ ಕೊಡುತ್ತಾಳೆ. ಉಣಲು, ಹೊದೆಯಲು, ಬೆಚ್ಚಗೆ ಮಲಗಲು ಅನುವು ಮಾಡಿ ಕೊಡುತ್ತಾಳೆ. ಇಂತಹ ಪೀಂಚಲು- ಐತರು ದಟ್ಟ ಕಾಡಿನಲ್ಲಿ ಅಲೆದಾಡುವಾಗ ಕುವೆಂಪು ಅವರ ದೃಷ್ಟಿಗೆ ಶಿವ ಪಾರ್ವತಿಯರಂತೆ ಕಂಡಿದ್ದರೆ ಆಶ್ಚರ್ಯವಿಲ್ಲ. ಜಾತಿಗೆ ಮೀರಿದ ಮಾನವೀಯತೆಯ ಪ್ರತೀಕವಾಗಿ ಪೀಂಚಲು ಇಲ್ಲಿ ಚಿತ್ರಿತಳಾಗಿದ್ದಾಳೆ. ಸಾಮಾಜಿಕ ನಿರ್ಬಂಧಗಳಿಲ್ಲದ ಮುಕ್ತ ಪರಿಸರದಲ್ಲಿ ಪೀಂಚಲು ಸ್ತ್ರೀ ಸ್ವಾತಂತ್ರ್ಯ ಸ್ವಚ್ಛಂದತೆಯ ಪ್ರತೀಕವಾಗಿ ಕಾಣಿಸಿಕೊಳ್ಳುತ್ತಾಳೆ. ಪೀಂಚಲು ಜಾತಿಯಲ್ಲಿನ ಹೆಣ್ಣು ಮಕ್ಕಳು ಮೇಲುವರ್ಗದ ಹೆಂಗಸರಿಗಿಂತ ಸ್ವತಂತ್ರ ಅಸ್ತಿತ್ವ, ಅನನ್ಯತೆಗಳಿಂದ ಕೂಡಿದವರಾಗಿದ್ದಾರೆ. ಪುರುಷನ ದಬ್ಬಾಳಿಕೆ, ನಿರ್ಲಕ್ಷ್ಯಗಳಿಗೆ ಒಳಗಾದವರಲ್ಲಿ ದೇವಯ್ಯನ ಹೆಂಡತಿ ದೇವಮ್ಮ. ದೇವಯ್ಯನ ವಿಚಾರಗಳನ್ನು ಅರ್ಥ ಮಾಡಿಕೊಳ್ಳಲಾಗದ ಮತ್ತು ಮತಾಂತರ ಹೊಂದಲಿರುವ ಗಂಡನನ್ನು ನಿವಾರಿಸುವುದು ಅವಳಿಗೆ ಸಾಧ್ಯವಾಗುವುದಿಲ್ಲ. ಅವಳು ಸಂಪ್ರದಾಯದ ಪರಿಸರದಲ್ಲಿ ಬೆಳೆದವಳು. ಅದಕ್ಕಿಂತ ಭಿನ್ನವಾದ ವಿರುದ್ಧವಾದ ರೀತಿಯಲ್ಲಿ ಆಲೋಚಿಸಲು ಆಗದವಳಾದ್ದರಿಂದಲೂ ಹೆಜ್ಜೆ ಹೆಜ್ಜೆಗೆ ಘರ್ಷಣೆ. ತಂದೆ, ತಾಯಿ, ಅತ್ತೆ, ಮಾವ ಮುಂತಾದವರ ಆಲೋಚನೆ, ಆಚಾರ- ವಿಚಾರ ಸಂಪ್ರದಾಯ. ಪರಂಪರೆಯ ಹಾದಿಯಲ್ಲಿಯೇ ನಡೆಯುವಳು. ದೇವರು, ಧರ್ಮ, ಮನೆತನ, ಕುಟುಂಬ, ವಂಶಗೌರವ ಸಾಮಾಜಿಕ ಕಟ್ಟು ಕಟ್ಟಳೆಗಳಲ್ಲಿ ನಂಬಿಕೆ ಇಟ್ಟವಳು. ಇಂತಹವಳಿಗೆ ಗಂಡ ದೇವಯ್ಯನಲ್ಲಿ ಆಧುನಿಕತೆ, ಕ್ರೈಸ್ತಪಾದ್ರಿಯ ಪ್ರಭಾವಗಳಿಂದ ಕಾಣಿಸಿಕೊಳ್ಳುತ್ತಿದ್ದ ಬದಲಾದ ಧೋರಣೆಗಳು, ಬಾಹ್ಯ ಪರಿವರ್ತನೆಗಳು ಒಮ್ಮೆಲೇ ಗಾಭರಿ, ದಿಗ್ಭ್ರಮೆಗಳನ್ನು ಮೂಡಿಸುತ್ತವೆ. ಎಲ್ಲಕ್ಕಿಂತ ಹೆಚ್ಚಾಗಿ ಅವಳಿಗೆ ಹೃದಯಾಘಾತದಷ್ಟು ಅಪಾಯಕಾರಿ ಎನಿಸಿದ್ದು ಕ್ರೈಸ್ತ ಪಾದ್ರಿ

ಜೀವರತ್ನಯ್ಯನ ಮಗಳ ಕಡೆ ಹೆಚ್ಚುತ್ತಿದ್ದ ಆಕರ್ಷಣೆ, ಮೋಹಗಳು! ಆದರೆ ಹೆಣ್ಣಾದುದೇ ಅವಳ ಅಸಹಾಯಕತೆಯಾಗಿ, ಗಂಡನ ನಡತೆಯನ್ನೂ ಪ್ರಶ್ನಿಸಲಾಗದೆ ಚಡಪಡಿಸುತ್ತಿದ್ದಳು. ಅವನ ಆಲೋಚನೆಗಳನ್ನು ಸಮರ್ಥಿಸಲಾರದೆ ಅವನು ತುಳಿದಹಾದಿ ಸರಿಯಿಲ್ಲವೆಂದು ಪ್ರತಿಭಟಿಸಿ, ಪ್ರಶ್ನಿಸಲಾಗದೆ ತತ್ತರಿಸಿ ಹೋಗುತ್ತಿದ್ದಳು. ಗಂಡನ ವೇಷಭೂಷಣ,ವ್ಯವಹಾರಗಳಲ್ಲಿನ ಬದಲಾವಣೆಗಳನ್ನು ಕಂಡು ಮೂಕವಾಗಿ ರೋಧಿಸುತ್ತಾ ಹಣೆ ಚಚ್ಚಿಕೊಳ್ಳುತ್ತಿದ್ದಳು. ದೇವರಲ್ಲಿ ಅಪಾರವಾದ ನಂಬಿಕೆಯಿಟ್ಟಿದ್ದ ದೇವಮ್ಮ, ಗಂಡ ಸಿಟ್ಟುಗೊಂಡು ಮಗುವಿಗೆ ಕಟ್ಟಿದ್ದ ತಾಯಿತವನ್ನು ಮಂತ್ರಿಸಿದ ತೆಂಗಿನ ಕಾಯಿಗಳನ್ನು ಕಿತ್ತೆಸೆದಾಗ ಅಪ್ರತಿಭಳಾಗಿ ನಿಲ್ಲುತ್ತಾಳೆ. ಅವನಿಂದ ದೂಡಲ್ಪಟ್ಟು ಹಾಸಿಗೆ ಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅಳುತ್ತಾಳೆ. ಬಿಕ್ಕುಗಳೇ ಅವಳ ಪಾಲಿನ ಸಾಂತ್ವನವಾಗುತ್ತದೆ. ದೇವಯ್ಯನಿಗೆ ಹೆಂಡತಿಯನ್ನು ಹಿಂಸಿಸಬೇಕೆನ್ನುವ ಉದ್ದೇಶವಿರದಿದ್ದರೂ, ಆ ಕ್ಷಣಕ್ಕೆ ಅವಳ ವರ್ತನೆ ತನ್ನ ಆಲೋಚನೆಗಳಿಗೆ, ಹೊಸವಿಚಾರ ಶೈಲಿಗೆ ತೀರಾ ವಿರುದ್ಧವಾಗಿ ತೋರಿ ಉದ್ವಿಗ್ನನಾಗಿ ಹಾಗೆ ವರ್ತಿಸುತ್ತಾನೆಯೇ ಹೊರತಾಗಿ, ದೇವಮ್ಮನಲ್ಲಿ ಪ್ರೀತಿ ಇಲ್ಲವೆಂದಲ್ಲ. ಅವರ ದಾಂಪತ್ಯ ಅನ್ಯೋನ್ಯವಾಗಿತ್ತು. ಈ ಪಾದ್ರಿಯ ಪ್ರಭಾವವೇ ಅವರಿಬ್ಬರ ಅನ್ಯೋನ್ಯತೆ ಒಡೆಯಲು ಕಾರಣವಾಗಿತ್ತು. ಅವನು ಅವಳ ಮೇಲೆ ಸಿಟ್ಟಾದದ್ದು, ನೂಕಿ ತಳ್ಳಿದ್ದು ಎಲ್ಲವೂ ಅವನ ದೃಷ್ಟಿಯಿಂದ ಸಮರ್ಥನೀಯವೆನಿಸಿದರೂ, ಅದು ದೇವಮ್ಮನ ದೃಷ್ಟಿಯಿಂದ ದೌರ್ಜನ್ಯವೇ ಆಗಿತ್ತು. ಒಮ್ಮೊಮ್ಮೆ ಇಬ್ಬರ ನಡುವೆ ಸಿಟ್ಟು ಸಿಡಿದಾಗ, ದೇವಯ್ಯ ಅವಳನ್ನು ರಮಿಸಲು ಪ್ರಯತ್ನಸುತ್ತಿದ್ದ. ಹಾಗೆಯೇ ದೇವಮ್ಮ ಸಿಟ್ಟನ್ನು ಮರೆಯುವ ಪ್ರಯತ್ನದಲ್ಲಿ ಇರುವಾಗಲೇ ಪಾದ್ರಿ, ಪಾದ್ರಿಯ ಕುಟುಂಬದ ಪ್ರಸ್ತಾಪ ಬಂದದ್ದೇ ಮತ್ತೆ ಶಾಂತಿ ಮುರಿದು ಕಸಿವಿಸಿಯೇ ಮುಂದುವರೆಯುತ್ತಿತ್ತು. ಮುಟ್ಟು, ಮಡಿ, ಮೈಲಿಗೆಗಳು ಹೊಸದಾಗಿ ಆಧುನಿಕ ವಿಚಾರಗಳಿಗೆ, ಪಾದ್ರಿಯ ಉಪದೇಶಕ್ಕೆ ತೆರೆದು ಕೊಂಡಿದ್ದ ದೇವಯ್ಯನ ಮನಸ್ಸಿಗೆ ಅರ್ಥವಿಲ್ಲದ್ದು, ಎನಿಸಬಹುದಾದರೂ ದೇವಮ್ಮನಿಗೆ, ಅವೆಲ್ಲವೂ ಅನುಕರಣೀಯ ಆಚಾರಗಳೇ. ಮನೆ ಹೆಂಗಸರನ್ನು ಇಂತಹ ವಿಚಾರಗಳಲ್ಲಿ ಬದಲಾಯಿಸುವುದು ಸಾಧ್ಯವೇ ಇಲ್ಲವಾದ್ದರಿಂದ, ಕ್ರೈಸ್ತ ಮತಕ್ಕೆ ಸೇರಿಕೊಂಡು ಬಿಡುವುದು ಕ್ಷೇಮವೆಂದು ಭಾವಿಸಿದ ದೇವಯ್ಯನ ವಿಚಾರ ಅವಳಿಗೆ ಅರ್ಥವಾಗುವುದಿಲ್ಲ. ಮತಾಂತರವಾಗುವುದಾದರೆ, ತಮ್ಮನ್ನು ಕೆರೆ, ಬಾವಿಯ ಗತಿಕಾಣಿಸಿ, ಮುಂದಿನದನ್ನು ಮಾಡಿರೆಂದು ಹೇಳಿ ಮುಳು ಮುಳು ಅಳುತ್ತಾಳೆ. ದೇವರನ್ನು, ಧರ್ಮವನ್ನು ನಿಂದಿಸಿದ ಗಂಡನ ಕೇಡಿನ ಆಲೋಚನೆಯಿಂದ ಕಂಪಿಸುತ್ತಾಳೆ. ಗಂಡನ ಭವಿಷ್ಯದ ಬಗ್ಗೆ ಆತಂಕಗೊಳ್ಳುತ್ತಾಳೆ.

ಮತಾಂತರದ ಮೂಲಕ ಸಮಾಜದಲ್ಲಿ ಸಿಗುವ ಪ್ರತಿಷ್ಠೆ ಪ್ರಯೋಜನಗಳ ಆಮಿಷಕ್ಕೆ ಎಲ್ಲರಂತೆ ದೇವಯ್ಯನೂ ಒಳಗಾಗುವುದೇ ಅಲ್ಲದೆ ಪಾದ್ರಿಯ ಮಗಳನ್ನು ವಿವಾಹವಾಗುತ್ತಾನೆಂಬ ವದಂತಿಯಿಂದ ದೇವಮ್ಮನ ಹೃದಯಕ್ಕೆಕಿಚ್ಚಿಟ್ಟಂತೆ ಆಗುತ್ತದೆ. ಮೊದ ಮೊದಲು ದೇವಯ್ಯನಿಗೆ ತಾನು ಪಾದ್ರಿಯ ವಿಚಾರಗಳಿಂದ, ಅವನು ಒಡ್ಡುತ್ತಿದ್ದ ಆಮಿಷಗಳಿಂದ ಆಕರ್ಷಿತನಾಗುತ್ತಿದ್ದವನಿಗೆ ತಾನು ಯಾವ ಪರಿಣಾಮದತ್ತ ಸಾಗುತ್ತಿದ್ದೇನೆಂಬ ಪರಿವೆಯಿಲ್ಲದೆ ಕಡೆಗೆ ಪಾದ್ರಿಯ ಮಗಳ

ಜೊತೆಗಿನ ಪ್ರಣಯ ಸಂಬಂಧ ವಿವಾಹದ ಹಂತವನ್ನು ತಲುಪಿದಾಗ, ದೇವಯ್ಯನಿಗೇ ದಿಕ್ಕು ತೋಚದಂತಾಗುತ್ತದೆ. ದೇವಮ್ಮ ಈ ವಿವಾಹಕ್ಕೆ ಎಂದೂ ಸಮ್ಮತಿಸಲಾರಳು; ದೇವಯ್ಯ ಹೆಂಡತಿಯಿಂದ ವಿಚ್ಛೇದನ ಪಡೆಯಲು ಒಪ್ಪಲಾರ! ಇಂತಹ ಪರಿಸ್ಥಿತಿಯಲ್ಲಿ ದೇವಯ್ಯ ದೇವಮ್ಮ ಇಬ್ಬರೂ ಅಗ್ನಿದಿವ್ಯದ ಎದುರು ನಿಂತಂತಾಗುತ್ತಾರೆ. ದೇವಮ್ಮನಿಗೆ, ದೇವಯ್ಯನ, ಅಂತಕ್ಕ ಸೆಟ್ಟಿಯ ಮಗಳಾದ ಕಾವೇರಿಯ ಜೊತೆಗಿನ ಪ್ರೇಮ ಸಂಬಂಧದ ಬಗ್ಗೆ ತಿಳಿದಿದ್ದರೂ, ಗಂಡನನ್ನು ಅವಳು ನಿರ್ಬಂಧಿಸುವುದಿಲ್ಲ, ಹೆಂಡತಿಯ ಜೊತೆಗೆ, ಹೊರಗೆ ಬೇರೆ ಹೆಣ್ಣುಗಳೊಂದಿಗೆ ಪುರುಷರು ಸಂಬಂಧಗಳನ್ನು ಇರಿಸಿಕೊಳ್ಳುವುದು ಗಂಭೀರ ವಿಷಯವೇನೂ ಆಗಿರಲಿಲ್ಲ. ಆದ್ದರಿಂದ ದೇವಮ್ಮ ಗಂಡನ ಎಲ್ಲ ಅಪರಾಧಗಳನ್ನು ಮನ್ನಿಸುವಷ್ಟು ಉದಾರಳಾಗಿದ್ದಳಾದರೂ, ಕ್ರೈಸ್ತ ಜಾತಿಗೆ ಸೇರಿದ ಹೆಣ್ಣಿನ ಸಹವಾಸವನ್ನಾಗಲೀ, ಅವಳೊಡನೆ ವಿವಾಹ ಸಂಬಂಧವಾಗಲೀ, ಇಲ್ಲವೆ ಕ್ರೈಸ್ತ ಮತಾಂತರಗೊಳ್ಳುವುದನ್ನಾಗಲೀ ಅವಳಿಗೆ ಭರಿಸಲು ಸಾಧ್ಯವಿರಲಿಲ್ಲ. ತನ್ನ ಅಳಲನ್ನು ತೋಡಿಕೊಳ್ಳಲು, ದೇವಯ್ಯನ ನೈತಿಕ ಪತನವನ್ನು ನಿವಾರಿಸಲು ಅವಳಿಗೆ ತೋಚಿದ್ದು, ಮುಕುಂದಯ್ಯ! ಅದಕ್ಕಾಗಿಯೇ ಮುಕುಂದಯ್ಯನನ್ನು, ಮದುವೆ ಮತ್ತು ಮತಾಂತರಗಳಿಂದ ರಕ್ಷಿಸಲು ಅಂಗಲಾಚಿ ಬೇಡಿಕೊಳ್ಳುತ್ತಾಳೆ. ಹೀಗೆಯೇ ಇಲ್ಲಿನ ಮೇಲುವರ್ಗದ ಸ್ತ್ರೀಯರು ಅತಂತ್ರರಾಗಿ, ಅಸಹಾಯಕರಾಗಿ ಪುರುಷನ ಅಧೀನತೆಯೊಳಗೇ ಉಳಿದು, 'ಅವರ ವಿಚಾರಗಳಿಗೆ, ಅವರ ನಡವಳಿಕೆಗೆ ಯಾವುದೇ ಬಗೆಯಲ್ಲಿ ವಿರೋಧವನ್ನಾಗಲೀ, ಪ್ರತಿಭಟನೆಯನ್ನಾಗಲೀ ತೋರಲಾಗದೆ ನಿಟ್ಟುಸಿರಿನ ಕ್ಷೀಣದನಿಯೊಂದಿಗೆ, ಅವನದೇ ನಿರ್ಧಾರ, ತೀರ್ಮಾನಗಳಿಗೆ ಮೂಕವಾಗಿ ಒಪ್ಪಿಗೆಯ ನ್ನೀಯುತ್ತಾರೆ.

ಮಕ್ಕಳಾಗದ ಕಾರಣಕ್ಕಾಗಿ ಅಸಮಾಧಾನದಿಂದಲೇ ಗಂಡನ ಎರಡನೆ ಮದುವೆಗೆ ಒಪ್ಪಿಗೆ ನೀಡುವ ಜಟ್ಟಮ್ಮ, ವಯಸ್ಸಾದರೂ ಅಪ್ಪನ ಉದಾಸೀನತೆಯಿಂದ ಮದುವೆಯಾಗದೆ ಉಳಿಯುವ ಮಂಜಮ್ಮ, ಕೇವಲ ಒಂದು ಜಡವಸ್ತುವಾಗಿ ಗಂಡ ಮಕ್ಕಳ ಸೇವೆ, ಶುಶ್ರೂಷೆಯಲ್ಲಿ ನಡೆಯುವ ಶಂಕರ ಹೆಗ್ಗಡೆಯ ಹೆಂಡತಿ, ಗಂಡನ ಇತಿ ಗತಿಗಳನ್ನು ತಿಳಿಯದೆ, ತೀರ್ಥಯಾತ್ರೆಗೆಂದು ಹೋದವನ ವಿಚಾರದಲ್ಲಿ ತರತರದ ವದಂತಿಗಳನ್ನು ಕೇಳಿದ ಮತ್ತು ಮಾವ, ಮೈದುನರ ಭರ್ತ್ಸ್ಯನೆಗೆ ಒಳಗಾಗಿ ಮಾನಸಿಕ ಅಸ್ವಸ್ಥತೆಯಿಂದ ನರಳುವ ಧರ್ಮುವಿನ ತಾಯಿ- ಹೀಗೆ ಶೂದ್ರ ಹೆಂಗಸರ ಸ್ಥಿತಿ ಒಂದೊಂದು ತೆರನಾಗಿದ್ದರೆ ದಲಿತ ಹೆಂಗಸರ ಗೋಳು ಮತ್ತೊಂದು ತೆರನಾದ್ದು. ಕೊಳಕು ಕೇರಿಗಳಲ್ಲಿ, ರೋಗ ರುಜಿನಗಳಿಂದ, ದಾರಿದ್ರ್ಯದಿಂದ ನರಳುವ ಕುಟುಂಬದ ಪೋಷಣೆಯಲ್ಲಿ ಬದುಕುಗಳನ್ನೇ ನರಕವಾಗಿಸುವ ಗಂಡಸರ ಕೈಯಲ್ಲಿ ಹಿಂಸೆ, ದೌರ್ಜನ್ಯಗಳನ್ನು ಅನುಭವಿಸುತ್ತಾರೆ. ಪಿಜಿಣನಂತಹ ರೋಗಿಷ್ಠನ ರೋತೆಯನ್ನೆಲ್ಲ ಸಹಿಸಿಕೊಂಡು ಅವನಿಗೆ ಸೇವೆ ಮಾಡುವ ಅಕ್ಕಣಿ, ಸಂಪಾದನೆಗೆ ಹೋಗಲು ಸಾಧ್ಯವಿಲ್ಲದ ಗಂಡನನ್ನು, ತಾನೇ ದುಡಿದು ಅವನ ಪೋಷಣೆಯನ್ನೂ ಮಾಡುವುದಲ್ಲದೆ ಅವನಿಗೆ ನಿಷ್ಠೆಯಿಂದ ನಡೆದುಕೊಳ್ಳುತ್ತಾಳೆ. ನೆರೆಯವರು ತನ್ನ ಬಗ್ಗೆ ಆಸಕ್ತಿವಹಿಸಿ ನೆರವಾಗುತ್ತಿದ್ದುದರ ಹಿಂದೆ ಇದ್ದ ಅವರ ಅಂತರ್ಯದ ಸ್ವಾರ್ಥ, ನಿರೀಕ್ಷೆ ಅರ್ಥವಾಗಿದ್ದರೂ ಅಕ್ಕಣಿಯ ಮನಸ್ಸು ಚಂಚಲವಾಗುವುದಿಲ್ಲ. ತಾನು ಗರತಿ. ಅಲ್ಲದೆ ತನ್ನ ಗಂಡನಿಗೆ, ಈಗಿರುವ

ಸ್ಥಿತಿಯಲ್ಲಿ ಹೆಚ್ಚಿನ ಆರೈಕೆ, ಶುಶ್ರೂಷೆಗಳು ಬೇಕಾಗಿರುವ ದಿನಗಳಲ್ಲಿ ಅವನಿಗೆ ಮೋಸ ಮಾಡುವುದನ್ನು ಕನಸಿನಲ್ಲಿಯೂ ಊಹಿಸಲಾರಳು. ಗಂಡನ ದೈನ್ಯ ಸ್ಥಿತಿಗೆ, ಶವದಂತೆ ಬಿದ್ದುಕೊಂಡಿರುವ ಅವನಿಗೆ, ಅಕ್ಕಣಿಯ ಸಹಾನುಭೂತಿಯಿದೆ. ಅಕ್ಕಣಿಯ ನಿಷ್ಠೆ ಗಂಡನ ಬಗ್ಗೆ ಹೀಗಿದ್ದರೆ, ದೇಯಿಯದು ಅತ್ಯಂತ ದಾರುಣ ಸ್ಥಿತಿ. ಚೀಂಕ್ರನಂತಹ ಕ್ರೂರಿ ಗಂಡನ ಬಿಡುವಿಲ್ಲದ ಲೈಂಗಿಕ ಅತ್ಯಾಚಾರಗಳಿಗೆ ಬಲಿಯಾಗಿ ಒಂದರ ಮೇಲೆ ಒಂದರಂತೆ ಹೆತ್ತು, ನಿತ್ರಾಣವಾಗಿ ಮೈಯಲ್ಲಿ ರಕ್ತವಿಲ್ಲದೆ, ಮಾನಸ್ಸಮಾಧಾನಕ್ಕೆ ಚೀಂಕ್ರನ ಪ್ರೀತಿಯೂ ಇಲ್ಲದೆ ಸಾಯುತ್ತಾಳೆ.

ತಿಮ್ಮಿ, ಗುತ್ತಿಯನ್ನು ಅಪಾರವಾಗಿ ಪ್ರೀತಿಸಿ, ತನ್ನ ಇಚ್ಛೆಗೆ ವಿರುದ್ಧವಾಗಿ ಬೈರನೊಡನೆ ಮದುವೆ ನಡೆಯುವುದನ್ನು ಪ್ರತಿಭಟಿಸಿ, ಕಡೆಗೆ ಏನೆಲ್ಲ ಸಾಹಸಮಾಡಿ, ಗುತ್ತಿಯನ್ನೇ ಮದುವೆಯಾಗುವ ದಿಟ್ಟತನವನ್ನು ತೋರುತ್ತಾಳೆ. ತಿಮ್ಮಿಯ ತಾಯಿಯೂ ಪಿತೂರಿಯಲ್ಲಿ ಶಾಮೀಲಾಗಿ ಅಳಿಯ ಮಗಳು ಇಬ್ಬರೂ ಓಡಿ ಹೋಗುವಂತೆ ಪ್ರೋತ್ಸಾಹಿಸುತ್ತಾಳೆ. ಸಿಂಬಾವಿ ಭರಮೈ ಹೆಗ್ಗಡೆಯವರ ಆಶ್ರಯದಲ್ಲಿ ಬದುಕುವುದು ಅವರ ಯೋಜನೆಯಾಗಿತ್ತು. ತಿಮ್ಮಿ ಕಾಡಿನ ಮಗಳಾಗಿದ್ದಳು. ಅವಳಿಗೆ ಕಾಡಿನ ಮೂಲೆಮೂಲೆಯ ಪರಿಚಯವಾಗಿತ್ತು. ಐತನ ಹೆಂಡತಿ ಪೀಂಚಲುವಿನ ಸಹಕಾರ, ಆಶ್ರಯ ಪಡೆದು, ಅಲ್ಲಿ ತಂಗಿದ್ದು, ಗುತ್ತಿಯೊಂದಿಗೆ ರಹಸ್ಯವಾಗಿ ಸಂಧಿಸಿ ಮುಂದಿನ ಸಾಹಸಕ್ಕೆ ಅಣಿಯಾಗುತ್ತಾರೆ. ಗುತ್ತಿಯ ಒರಟುತನದೊಳಗಿನ ಪ್ರೀತಿಯನ್ನು ಬಲ್ಲವಾಗಿದ್ದಾಳೆ.

ಒಟ್ಟಾರೆಯಾಗಿ ಇಲ್ಲಿ ಬರುವ ಸ್ತ್ರೀ ಚಿತ್ರಗಳು, ವಿಭಿನ್ನ ಜಾತಿ, ವರ್ಗ, ಸಂಸ್ಕೃತಿಗಳ ಹಿನ್ನೆಲೆಯಲ್ಲಿ, ರೂಢಿಯಿಂದ ಬಂದ ಭಾರತೀಯ ಸಮಾಜದಲ್ಲಿ ಸ್ತ್ರೀಯರಿಗಿದ್ದ ಸವಲತ್ತು ನಿರ್ಬಂಧಗಳೊಂದಿಗ ಬಿಂಬಿತವಾಗಿವೆ. ಮೇಲು ವರ್ಗದವರ ಹೆಂಗಸರ ಮೇಲಿದ್ದ ಶೋಷಣೆ, ನಿರ್ಬಂಧಗಳಿಂದ ಮುಕ್ತವಾಗಿದ್ದರೂ, ಕೆಳವರ್ಗದ ಹೆಂಗಸರು ತಮ್ಮಿಷ್ಟದಂತೆ, ಪುರುಷ ಸಂಬಂಧಗಳನ್ನು ಸ್ವೇಚ್ಛೆಯಿಂದ ರೂಪಿಸಿಕೊಳ್ಳ ಬಹುದಾಗಿದ್ದರೂ, ಇಲ್ಲಿ ಬಂದಿರುವ ಕೆಳವರ್ಗದ ಪೀಂಚಲು, ತಿಮ್ಮಿ, ಅಕ್ಕಣಿಯರು, ಮೇಲು ವರ್ಗದ ಯಾವ ಹೆಂಗಸರಿಗೂ ಕಡಿಮೆ ಇಲ್ಲದಂತೆ ನಡೆದುಕೊಳ್ಳುತ್ತಾರೆ. ಅವರವರ ವೈಯಕ್ತಿಕ ಮನಃಸಂಸ್ಕಾರಗಳು ಅವರಲ್ಲಿ ಸ್ವೇಚ್ಛೆಗಿಂತ ಮಾನವೀಯ ನೆಲೆಯಲ್ಲಿಯೇ ಸ್ಪಂದಿಸುತ್ತಾರೆ. ನಿಷ್ಕಲ್ಮಶ ಪ್ರೀತಿಗೆ ಬೆಲೆ ಕೊಡುತ್ತಾರೆ. ವೈಯಕ್ತಿಕ ಕ್ಷೇಮಕ್ಕಿಂತ ಗಂಡಂದಿರ ದೈಹಿಕ, ಮಾನಸಿಕ ಅಸ್ವಸ್ಥತೆಗಳ ಕಡೆ ಕಾಳಜಿ ವಹಿಸುತ್ತಾರೆ. ಅನುಮಾನ, ಅತ್ಯಾಚಾರಗಳನ್ನು ಸಹಿಸಿಕೊಂಡು ಬದುಕುತ್ತಾರೆ. ಆದರೆ ಹೆಂಗಸರಿಗೆ ಸಂಬಂಧಪಟ್ಟಂತೆ. ಒಂದು ವಾಸ್ತವ ಸತ್ಯವನ್ನು ಈ ಕಾದಂಬರಿ ಪ್ರಸ್ತುತ ಪಡಿಸುತ್ತದೆ. ಜಾತಿ ವರ್ಗಗಳು ಏನೇ ಆದರೂ ಪುರುಷನದೇ ಮೇಲುಗೈ. ಅವರ ವಿಚಾರ, ನಂಬಿಕೆ, ಮತ್ತು ಸಾಮಾಜಿಕ ಕಟ್ಟು ಕಟ್ಟಳೆಗಳನ್ನು ವಿರೋಧಿಸದೆ, ಪುರುಷರ ನಿರೀಕ್ಷೆಗಳಂತೆಯೇ ಬದುಕುತ್ತಾ ಅವರು ಯಾವುದೇ ರೀತಿಯಲ್ಲಿ ತಮ್ಮ ಮೇಲೆ ಆಗುವ ದೌರ್ಜನ್ಯ, ಅತ್ಯಾಚಾರ, ಕ್ರೌರ್ಯಗಳನ್ನು ಅನುಭವಿಸುತ್ತ, ತಮಗೆ ನೀಡಿದ ಸೀಮಿತ ಸ್ವಾತಂತ್ರ್ಯದ ಪರಿಧಿಯಲ್ಲಿಯೇ ಪರಿಭ್ರಮಿಸುತ್ತ ವೈಯಕ್ತಿಕ ನೋವುಗಳನ್ನು ನಲಿವುಗಳನ್ನು ಪರಸ್ಪರ ಹಂಚಿಕೊಳ್ಳುತ್ತಲೋ ಇಲ್ಲವೆ ಮೌನವಾಗಿ ತಮ್ಮೊಳಗೇ ಮಂಜುಗಟ್ಟಿಸಿಕೊಂಡೋ

ಬದುಕುತ್ತಾರೆ. ಮಲೆನಾಡಿನ ಪರಿಸರದ, ಸಮಾಜದ ಈ ಸ್ತ್ರೀ ಚಿತ್ರಗಳು, ಬೇರೆ ಬೇರೆ ಸಮಾಜಗಳಲ್ಲಿನ ಚಿತ್ರಗಳಿಗಿಂತ ಭಿನ್ನವಾಗೇನೂ ಉಳಿದಿಲ್ಲ. ಹೆಂಗಸರ ನೋವಿನ ಸ್ವರೂಪ ಸಾರ್ವತ್ರಿಕವಾದುದು. ಎಲ್ಲಿಂದ ಎಲ್ಲಿಗೆ ಹೋದರೂ ಒಂದೇ ತೆರನಾಗಿರುತ್ತದೆ.

**ಸಾಮಾಜಿಕತೆ**

ಕೆ. ವಿ. ಸುಬ್ಬಣ್ಣ ಅವರು ಹೇಳುವಂತೆ "ಮಲೆಗಳಲ್ಲಿ ಮದು ಮಗಳು", ಮಲೆನಾಡಿನ ರಾಮಾಯಣ ಅಥವಾ ಮಲೆನಾಡಿನ ಮಹಾಭಾರತ. ವ್ಯಾಪಕವಾದ, ವಿಸ್ತಾರವಾದ ಕಥಾಭಿತ್ತಿಯನ್ನು ಒಳಗೊಂಡು, ಈ ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಪಾತ್ರಗಳು ಸನ್ನಿವೇಶಗಳು, ಆಶಯಗಳು, ಮೊದಲಾದವು ಸಂಖ್ಯೆಯಲ್ಲಿ ಅಪಾರ ಮತ್ತು ವೈವಿಧ್ಯಮಯವಾದುದು. ಕುವೆಂಪು ಅವರೇ ಹೇಳುವಂತೆ ಈ ಕಾದಂಬರಿಯಲ್ಲಿ, ಯಾರೂ ಮುಖ್ಯವಲ್ಲ;ಯಾರೂ ಅಮುಖ್ಯರಲ್ಲ; ಯಾವುದೂ ಯಃಕಶ್ಚಿತವಲ್ಲ; ಇಲ್ಲಿ ಯಾವುದೂ ಎಲ್ಲಿಯೂ ನಿಲ್ಲುವುದಿಲ್ಲ; ಕೊನೆ ಮುಟ್ಟುವುದೂ ಇಲ್ಲ; ಒಟ್ಟಾರೆಯಾಗಿ ಎಲ್ಲವೂ ಅಂದಿನ, ಅಲ್ಲಿನ ಸಾಮಾಜಿಕ ಸ್ವರೂಪದ ನಿರ್ಮಿತಿಯಲ್ಲಿ ಅನಿವಾರ್ಯ ಸಹಕಾರ ನೀಡಿವೆ. ಮಲೆನಾಡಿನ ಸಮಾಜದ ಸಂಕೀರ್ಣ ಬದುಕಿನ ಸಮಗ್ರ ಚಿತ್ರಣವನ್ನು ಅದರ ಎಲ್ಲ ಸೂಕ್ಷ್ಮವಿವರಗಳೊಂದಿಗೆ ಯಶಸ್ವಿಯಾಗಿ ನೀಡಿದ್ದಾರೆ. ಸಂಕ್ಷೇಪವಾಗಿ ಹೇಳುವುದಾದರೆ, ವಿಭಿನ್ನ, ಜಾತಿ, ವರ್ಗ ಸಮಾಜಗಳಿಗೆ ಸೇರಿದ ವ್ಯಕ್ತಿಗಳ ಬದುಕು, ಆಲೋಚನೆಗಳ ಮೂಲಕ, ಒಂದು ಪ್ರದೇಶದ ಒಂದು ಕಾಲದ, ಸಂಕೀರ್ಣವಾದ ಸಾಂಸ್ಕೃತಿಕ, ಸಾಮಾಜಿಕ ಚರಿತ್ರೆಯೊಂದನ್ನು ಒಂದು ಪ್ರಾದೇಶಿಕತೆಯ ರಂಗಿನಲ್ಲಿ ನೀಡುವುದೇ ಈ ಕಾದಂಬರಿಯ ಪ್ರಮುಖ ಆಶಯವಾಗಿದೆ.

ಈ ಕಾದಂಬರಿ ಸ್ವಾತಂತ್ರ್ಯ ಪೂರ್ವದಲ್ಲಿನ ತೀರ್ಥಹಳ್ಳಿ ತಾಲೂಕಿನ ಕೊಂಪೆ ಸೀಮೆಯೊಂದರ ಸಾಮಾನ್ಯ ಜನ ಸಮುದಾಯದ ಬದುಕಿನ ರೀತಿ- ನೀತಿ, ನಡವಳಿಕೆ, ಆ ಸಮಾಜದಲ್ಲಿನ ಜಾತಿ, ವರ್ಗ ವ್ಯವಸ್ಥೆ ಇತ್ಯಾದಿಗಳನ್ನು ಚಿತ್ರಿಸುತ್ತದೆ. ಇಲ್ಲಿನ ಸಮಾಜದ ಬದುಕಿನಲ್ಲಿ ವೈವಿಧ್ಯವಿದೆ; ಗತಿಶೀಲತೆಯಿದೆ; ಜೀವಂತಿಕೆಯೂ ಇದೆ. ಬದುಕು ಏರಿಳಿತಗಳ ಮೂಲಕವೂ ಮುಂದುವರೆದು ಸಾಗುತ್ತದೆ. ಜಡಬದುಕಿನ ರೂಢಿಯ ನೀತಿ- ರೀತಿಗಳನ್ನು ನಡವಳಿಕೆಯನ್ನು ಬಿಂಬಿಸುವುದರ ಜೊತೆಗೆ ಅದರಲ್ಲಿ ಸ್ವಲ್ಪ ಮಟ್ಟಿಗಿನ ಸಂಚಲನವನ್ನು ತಂದೊಡ್ಡುವ ಆಧುನಿಕತೆಯ, ಹೊಸ ನಾಗರೀಕತೆಯ ಅಂಶಗಳು ಕ್ರಿಶ್ಚಿಯನ್ ಪಾದ್ರಿಯ ಪ್ರವೇಶದೊಂದಿಗೆ ಪ್ರವೇಶಿಸುವುದನ್ನೂ, ಅದರಿಂದ ಕೆಲವರ ಬದುಕುಗಳಲ್ಲಿ ಉಂಟಾಗುವ ಸಮಸ್ಯೆ ಸಂದಿಗ್ಧಗಳನ್ನೂ ಸ್ಪಷ್ಟವಾಗಿ ನಿರೂಪಿತವಾಗಿರುವುದನ್ನು ಗಮನಿಸುತ್ತೇವೆ. ಜೊತೆಗೆ ಅಂತಹ ಸಮಾಜದ ಸಾಂಸ್ಕೃತಿಕ ನಂಬಿಕೆಗಳಿಗೆ ಪೂರಕವಾಗಿ ದೇವರು, ಧರ್ಮ, ಅಂಧ ವಿಶ್ವಾಸಗಳು, ಅನೇಕ ಅಲೌಕಿಕ ಅಥವಾ ಅವಾಸ್ತವ ಸಂಗತಿಗಳೂ ಕಾಣಿಸಿಕೊಳ್ಳುವುದು ವೈಚಾರಿಕ ದೃಷ್ಟಿಯಿಂದ ಅಸಂಬದ್ಧವೆನಿಸಿದರೂ ಕಾದಂಬರಿಯ ಐತಿಹಾಸಿಕ, ಸಾಮಾಜಿಕ, ಪ್ರಾದೇಶಿಕ ಮತ್ತು ಒಂದು ನಿರ್ದಿಷ್ಟ ಕಾಲ ಘಟ್ಟದ ಹಿನ್ನೆಲೆಯಲ್ಲಿ ಈ ಕಾದಂಬರಿಯ ಆಶಯಕ್ಕೆ ಪೂರಕವಾಗಿದೆ. ಅಲ್ಲದೆ ಸನಾತನ ಸಂಸ್ಕೃತಿ, ಹಿಂದೂ ಧರ್ಮದ ಬಗೆಗೆ ಅಪಾರ ಶ್ರದ್ಧೆಯನ್ನಿರಿಸಿಕೊಂಡ ಕುವೆಂಪು ಅವರ ದೃಷ್ಟಿಯಲ್ಲಿ ಪವಾಡ ಪುರುಷರೂ, ವಿಭೂತಿ

ಪುರುಷರೂ, ತಮ್ಮ ಭಕ್ತಿಯೋಗ ಸಾಧನೆಯಿಂದ ಅತೀಂದ್ರಿಯ ಶಕ್ತಿಯನ್ನು ಪಡೆದುಕೊಂಡಿರುವಂತಹ ಮಹಾ ಚೇತನರು ಇರುವುದನ್ನು, ಇದ್ದುದನ್ನು ಅಲ್ಲಗಳೆಯಲಾಗುವುದಿಲ್ಲ. ಅಲ್ಲದೆ ಒಂದು ಸಮಾಜದ ಸಮಗ್ರವಾದ ಸಾಂಸ್ಕೃತಿಕ ಚಿತ್ರವನ್ನು ನೀಡುವಾಗ ಅಸಂಗತವಿಚಾರಗಳು ಅಮಾನುಷ ಅಂಶಗಳು, ಅಂಧವಿಶ್ವಾಸಗಳು ಇಂತಹವುಗಳಲ್ಲಿ ವಿಶ್ವಾಸವನ್ನು ಇರಿಸಿಕೊಂಡಿರುವವರು, ಇಲ್ಲದಿರುವವರು, ಎರಡೂ ಬಗೆಯ ವ್ಯಕ್ತಿಗಳು ಸಹಜವಾಗಿ ಕಾಣಿಸಿಕೊಳ್ಳುತ್ತಾರೆ. ಈ ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಸಮಾಜ ಇಂತಹ ನಂಬಿಕೆಗಳಲ್ಲಿ ಶ್ರದ್ಧೆಯನ್ನು ಇರಿಸಿಕೊಂಡದ್ದೇ ಆಗಿದೆ. ಜನ್ಮಾಂತರ ಸಂಬಂಧಗಳು ಭವಿಷ್ಯದಲ್ಲಿ ನಡೆಯುವ ಸಂಗತಿಗಳ, ಘಟನೆಗಳ ಪೂರ್ವ ಸೂಚನೆ- ಇವೆಲ್ಲವೂ ಅಲ್ಲಿನ ವ್ಯಕ್ತಿಗಳ ಬದುಕಿನ ಕ್ರಮದ ಒಂದು ಭಾಗವೇ ಆಗಿದೆ.

ರೂಢಿಯಿಂದ ಬಂದ ಜಾತಿ, ವರ್ಗ ವ್ಯವಸ್ಥೆಗೆ ಬದ್ಧವಾಗಿ ಒಂದೊಂದು ಜಾತಿ, ವರ್ಗಕ್ಕೆ ಇರುವ ನಂಬಿಕೆ., ಶ್ರದ್ಧೆಗಳು, ಎಲ್ಲರನ್ನು ಅವರದೇ ಅಸಮಾಧಾನ, ಗೊಣಗಾಟಗಳಿಗೆ ಗುರಿ ಮಾಡಿದರೂ ಎಂದೂ ಮೇಲು ಪದರದಲ್ಲಿ ಪ್ರತಿಭಟನೆಯಾಗಿ, ವಿರೋಧವಾಗಿ ಕಾಣಿಸಿಕೊಳ್ಳುವುದಿಲ್ಲ.

ಇಲ್ಲಿ ಮುಖ್ಯವಾಗಿ ಕಾಣಿಸಿಕೊಳ್ಳುವ ಜಾತಿ, ವರ್ಗಗಳೆಂದರೆ ಶೂದ್ರರು, ಗೌಡರು ಅಥವಾ ಜಮೀಂದಾರಿ ವರ್ಗ, ಬ್ರಾಹ್ಮಣರು, ಮುಸಲ್ಮಾನರು, ದಲಿತರು. ಪ್ರತಿಯೊಂದು ಜಾತಿಗೂ ಅದರದೇ ಆದ ಸಾಮಾಜಿಕ ಕಟ್ಟು ಕಟ್ಟಳೆ, ರೀತಿ - ರಿವಾಜುಗಳಿವೆ. ಅದನ್ನು ನಿಷ್ಠೆಯಿಂದ ಪಾಲಿಸುತ್ತಾರೆ. ಒಮ್ಮೊಮ್ಮೆ ಇದೆಲ್ಲವನ್ನೂ ಮೀರುವ ಮಾನವೀಯ ನೆಲೆಯೊಂದು ಜಾತಿ- ರೀತಿಗಳನ್ನು ಬದಿಗಿರಿಸುವ ಪ್ರಸಂಗಗಳಿವೆ. ಹೊಲೆಯರು, ಬೇಲರು, ಮಾದಿಗರು, ಬಿಲ್ಲವರು, ಹಲಸರು ಹಾಗೂ ಹಳೆಪೈಕದವರು- ಇವರೆಲ್ಲರೂ ಅಸ್ಪೃಶ್ಯರು; ದಲಿತ ವರ್ಗಕ್ಕೆ ಸೇರಿದವರು. ಸಾಮಾನ್ಯವಾಗಿ ಇವರೆಲ್ಲರೂ ಆಳು ಮಕ್ಕಳು; ಇವರಿಗೆ ಸ್ವಂತ ಜಮೀನಿಲ್ಲ. ಎಲ್ಲಿಯೋ ಕೆಲವರಿಗೆ ಮಾತ್ರ, ಅದೂ ಹಳೆ ಪೈಕದವರಲ್ಲಿ ಬೆರಳೆಣಿಕೆಯ ಮಂದಿಗೆ ಅಲ್ಪ ಸ್ವಲ್ಪ ಜಮೀನೂ ಇರುತ್ತಿತ್ತು. ಬಡತನದಲ್ಲಿಯೇ ಹುಟ್ಟಿ, ಬಡತನದಲ್ಲೇ ಬೆಳೆದು ಕೊಳೆತು, ಅನಾರೋಗ್ಯಗಳಿಂದ ನರಳುತ್ತ, ಹೊಲಸು ಕೇರಿಗಳಲ್ಲಿ, ಗುಡಿಸಲು ಅಥವಾ ಬಿಡಾರಗಳನ್ನು ಹೊಂದಿರುತ್ತಿದ್ದರು. ಜಮೀಂದಾರರಿಗಾಗಿ ದುಡಿಯುವವರೇ ಹೊರತು, ಅವರಿಗೆ ಸ್ವತಂತ್ರ ಬಾಳ್ವೆ ಸಾಧ್ಯವಿರಲಿಲ್ಲ. ವಿದ್ಯೆಯೂ ಅವರ ಪಾಲಿಗೆ ಇಲ್ಲವಾಗಿತ್ತು. ಇವರಿಗೆ ಅಂಟಿದ ಅಸ್ಪೃಶ್ಯತೆಯ ಬಗ್ಗೆ ಗೊಣಗಾಟವಿಲ್ಲ. ಜಾತಿ ಸಂಬಂಧವಾದ ಮಡಿ- ಮೈಲಿಗೆಗಳ ವಿಷಯದಲ್ಲಿ ತುಂಬ ಶ್ರದ್ಧೆ. ಜಾತಿಯ ಕಟ್ಟು ಕಟ್ಟಳೆಯನ್ನು ಮೀರುವುದು ಮಹಾ ಪಾಪವೆಂದೇ ಅವರ ನಂಬಿಕೆ. ತಿಮ್ಮಪ್ಪ ಹೆಗ್ಗಡೆ ಆಳುಗಳನ್ನು ಕರೆದು ಕೊಂಡು ಹೋಗಲು ಒಡೆಯರ ದಿಬ್ಬದ ಬಳಿಗೆ ಬಂದು ಕೂಗಾಡುತ್ತಾನೆ. ಒಡೆಯರ ದಿಬ್ಬಕ್ಕೆ ಉಳಿದೆಲ್ಲ ಬಿಡಾರಗಳಿಗಿಂತ ಸಮೀಪವಾಗಿದ್ದದ್ದು ಮಂಜ ಮತ್ತು ತಿಮ್ಮನ ಬಿಡಾರಗಳು, ಆದ್ದರಿಂದ ಸಿಟ್ಟಿನಲ್ಲಿ ತಿಮ್ಮಪ್ಪ ಹೆಗ್ಗಡೆ ತಮ್ಮ ಕೇರಿ ಒಳಗೆ ಪ್ರವೇಶಿಸಿ ಬಿಟ್ಟರೆ ತಮಗೆಲ್ಲಿ ಅನಿಷ್ಟ ಸಂಭವಿಸುವುದೋ ಎಂದು ಅವರು ಹೆದರಿ ಹೌಹಾರುತ್ತಾರೆ. ಕೇರಿ ಪ್ರವೇಶಿಸಿದರೆ, ಇಡೀ ಕೇರಿಗೇ

ಹಾನಿಯಾಗುತ್ತದೆ ಎಂದು ನಂಬಿದವರು. ಅಸ್ಪೃಶ್ಯರಲ್ಲಿ ಸ್ವಲ್ಪ ಮೇಲಿದ್ದವರೆಂದರೆ ಹಳೆ ಪೈಕದವರು. ಇಲ್ಲಿ ಬರುವ ಸೇಸನಾಯ್ಕನಿಗೆ ತನ್ನ ಜಾತಿಯ ಬಗ್ಗೆ ತಾವು ವಂಚಿತರಾದ ಕೆಲವು ಸವಲತ್ತುಗಳ ಬಗ್ಗೆ ಆಗಾಗ ಅಸಮಾಧಾನವಾಗುವುದುಂಟು; ಮನಸ್ಸು ಕಸಿವಿಸಿಯಾಗುವುದೂ ಉಂಟು. ಮೇಲುವರ್ಗದ ಶೂದ್ರರ ಅಥವಾ ಜಮೀಂದಾರರ ವೈಭವದ ಬದುಕು, ಆಡಂಬರ, ಅಬ್ಬರಗಳಿಗೆ ತಮಗೇಕೆ ಹಕ್ಕಿರಬಾರದು?- ಎಂಬುದು ಅವನ ಪ್ರಶ್ನೆ! ಒಕ್ಕಲಿಗರಂತೆ ದರ್ಜಾಗಿ ಬಾಳಬೇಕೆಂಬ ಹಂಬಲ. ಇದ್ದ ಮೂರೇ ಮೂರು ಹಳೆ ಪೈಕದ ಮನೆಗಳು ವಾಸ್ತವವಾಗಿ ಈ ಅಸ್ಪೃಶ್ಯ ಜನಾಂಗಗಳು ತಮ್ಮ ವಾಸದ ಮನೆಗಳನ್ನು ಮನೆಗಳೆಂದು ಕರೆಯದೆ ಬಿಡಾರ, ಗುಡಿಸಲೆಂದು ಕರೆಯುತ್ತಿದ್ದರು. ತಾವೂ ಹಾಗೆ ಕರೆಯುವುದು, ಅವಮಾನಕರವೆಂಬ ಹಳೆ ಪೈಕದವರು ತಮ್ಮ ಜೋಪಡಿಗಳನ್ನು 'ಮನೆ' ಗಳೆಂದೇ ಕರೆದುಕೊಳ್ಳುತ್ತಿದ್ದರು. ಆದರೆ ಹೊಲಸು! ಕೋಳಿ, ಕುರಿ, ಹಂದಿ, ದನ ಸಗಣಿ, ಬೂದಿ ಮೊದಲಾದವುಗಳು ಎಲ್ಲೆಂದರಲ್ಲಿ ಕಾಣುತ್ತ, ದುರ್ನಾತದ ಅಸಹ್ಯ ಪರಿಸರ ಬವಳಿ ಬರುವಂತಾಗಿಸುತ್ತಿತ್ತು. ಆದರೆ ಒಕ್ಕಲಿಗರ ಮೇಲಿನ ರೋಷ, ಅವರಿಗಿಂತ ತಾವೇನೂ ಕಡಿಮೆಯಿಲ್ಲವೆಂಬಂತಾಗಿತ್ತು. ಅದಕ್ಕೆಂದೇ ತನ್ನ ಮನೆಯಲ್ಲಿ ನೆರೆದ ಮುಖಂಡರ ಮುಂದೆ, ನಮ್ಮ ದಂಡಿಗೆ ಹಕ್ಕಿಗೆ, ಕುದುರೆ ಹಕ್ಕಿಗೆ, ಗೌಡ ಮಕ್ಕಳು ಅಡ್ಡ ಬರುವುದು ಯಾವ ನ್ಯಾಯ? ನಾವೇಕೆ ಹೊಡೆದಾಟಕ್ಕೆ ಹೆದರಬೇಕು? ನಾಳೆ ನನ್ನ ಮಗನ ಮದುವೆಗೆ, ದಂಡಿಗೆ ಸಿಕ್ಕದಿದ್ದರೂ ಕುದುರೆ ಮೇಲಾದರೂ ಹೆಣ್ಣು, ಗಂಡು ಕೂರಿಸಿ ದಿಬ್ಬಣ ತಗೊಂಡು ಹೋಗಲೇ ಬೇಕು". ಎಂದು ಪೌರುಷದೊಂದಿಗೆ ಸವಾಲಿನ ಮಾತಾಡುವುದೇ ಅಲ್ಲದೆ ತನ್ನ ಜಾತಿಯವರೆಲ್ಲ ತನ್ನ ನೆರವಿಗೆ ನಿಂತರೆ, ಅವರಿಗೆ ಸರಿಯಾಗಿ ಬುದ್ಧಿ ಕಲಿಸಲು ತಾನು ಮುಂದಾಗುತ್ತೇನೆ ಎಂದು ಬೀಗುತ್ತಾನೆ. ಬಂಡುಕೋರು ನಾಯಕನಂತೆ ಮಾತನಾಡುತ್ತಾನೆ.

ಸಾಮಾನ್ಯವಾಗಿ ಇವರೆಲ್ಲರೂ ಒಕ್ಕಲಿಗ ಒಡೆಯರ ಒಕ್ಕಲುಗಳಾಗಿದ್ದು ಕೊಂಡು ಬಗನಿಯ ಮರದಿಂದ ಕಳ್ಳು ಇಳಿಸಿ ಕುಡಿದು ಮಾರಿ ಜೀವನ ಮಾಡುವ ಈ ಹಳೇ ಪೈಕದವರಿಗೆ'ದೀವರು' ಎಂಬ ಹೆಸರೂ ಇತ್ತು. ಇವರಿಗೆ ಸ್ವಂತ ಜಮೀನು ಎಂಬುದು ಅಪರೂಪವಾಗಿತ್ತು. ಅಲ್ಲದೆ ಸ್ವಂತ ಜಮೀನು ಇಟ್ಟು ಕೊಳ್ಳುವುದು ಅನಾಚಾರವೆಂಬ ನಂಬಿಕೆಯೂ ಕೆಲವರಲ್ಲಿತ್ತು. ವೇದ ಕಲಿಕೆ ಶೂದ್ರರಿಗೆ ನಿಷಿದ್ಧವಿದ್ದಂತೆ, ಸ್ವಂತ ಜಮೀನು ಮಾಡುವುದು ಹಳೆ ಪೈಕದವರಿಗೆ ನಿಷಿದ್ಧವಾಗಿತ್ತು. ಮದುವೆ ಮೊದಲಾದ ಸಂಭ್ರಮಗಳಲ್ಲಿ ಹಳೆ ಪೈಕದವರು ಗೌಡರನ್ನು ಯಾವ ವಿಧದಲ್ಲಿಯೂ ಅನುಕರಿಸಬಾರದಾಗಿತ್ತು. ಆದ್ದರಿಂದಲೇ ದಂಡಿಗೆ ಮೇಲೆ ಮೆರವಣಿಗೆ ಆದರೆ ಮದು ಮಕ್ಕಳಿಗೆ ಉಳಿಗಾಲವಿರಲಿಲ್ಲ. ಸೇಸನಾಯ್ಕನ ಈ ವೀರಘೋಷದ, ಬಂಡಾಯದ ಪರಿಣಾಮ, ಚರ್ಚೆಯಾಗಿ, ಸರ್ಕಾರದವರೆಗೂ ಹೋಗಿ, ಕಡೆಗೆ ತೀರ್ಮಾನ ಗೌಡರ ಪರವಾಗಿಯೇ ಇತ್ತು. ಸರ್ಕಾರಕ್ಕೂ ಕೂಡ ಸಮಾಜದ ಒಂದು ವರ್ಗದವರ ಸಂಪ್ರದಾಯ ವಿಧಿ, ನಿಷೇಧಗಳನ್ನು ಬದಲಾಯಿಸುವುದಾಗಲೀ ಪ್ರತಿಪಕ್ಷದವರ ಕಡೆಗೆ ತೀರ್ಮಾನ ನೀಡುವುದಾಗಲೀ ಸಾಧ್ಯವಿರಲಿಲ್ಲ, ಮೇಲು ವರ್ಗದವರ ಹಿತರಕ್ಷಣೆಗೇ ಕಾನೂನಿನ ಮುದ್ರೆ ಬೀಳುವುದು, ಇಂತಹ ಪರಿಸ್ಥಿತಿಯಲ್ಲಿ ಸಹಜವಾಗಿತ್ತು.

ಶೂದ್ರರು ಅಥವಾ ಒಕ್ಕಲಿಗರು ಹಳೆ ಪೈಕದವರಿಗಿಂತ ಜಾತಿಯಲ್ಲಿ ಮೇಲಿದ್ದರೂ, ಬ್ರಾಹ್ಮಣರ ಎದುರಿನಲ್ಲಿ ಕೆಳಜಾತಿಯೆಂದೇ ಪರಿಗಣಿಸಲಾಗುತ್ತಿತ್ತು. ಎಲ್ಲ ಜಾತಿ, ವರ್ಗದವರೂ ಬ್ರಾಹ್ಮಣರ ವಿಚಾರದಲ್ಲಿ ಭಯ ಭಕ್ತಿ ಗೌರವಗಳೊಂದಿಗೆ ನಡೆದುಕೊಳ್ಳುತ್ತಿದ್ದರು. ಬ್ರಾಹ್ಮಣರೂ ಕೂಡಾ ಜಾತಿ ಸವಲತ್ತಿನಿಂದಾಗಿ ತಮಗಿಂತ ಬೇರೆಯಾದ ಜಾತಿಯವರನ್ನು ಅಸ್ಪೃಶ್ಯರಂತೆ ನಡೆಸಿ ಕೊಳ್ಳುತ್ತಿದ್ದರು. ಬ್ರಾಂಬ್ರ ರೀತಿ- ರಿವಾಜುಗಳು ಮಡಿ, ಮೈಲಿಗೆಗಳ ಸೀಮಾರೇಖೆಯಲ್ಲಿಯೇ ಇರುತ್ತಿತ್ತು. ಪೂಜೆ, ಪುನಸ್ಕಾರ, ಜಾತ್ರೆ, ಗುಡಿ ಇತ್ಯಾದಿಗಳಲ್ಲಿ ಬ್ರಾಹ್ಮಣರಿಗೆ, ಬ್ರಾಹ್ಮಣ ಹೆಂಗಸರಿಗೆ ಮೇಲಿನ ಸ್ಥಾನ. ಪೂಜೆಯ ಸಂದರ್ಭದಲ್ಲಿ ಜಗಲಿಯಂತ ಎತ್ತರವಾಗಿದ್ದ ಅಂಗಳದ ಮೇಲ್ಭಾಗದಲ್ಲಿ ಬ್ರಾಹ್ಮಣ ಮುತ್ತೈದೆಯರಿಗೆ ಕೂರಲು ಅವಕಾಶ. ಕೆಳಗಿನ ಅಂಗಳದಲ್ಲಿ ಶೂದ್ರ ವರ್ಗದವರು. ಇನ್ನು ಅಸ್ಪೃಶ್ಯ ಸ್ತ್ರೀಯರಿಗಂತೂ ದೇವಸ್ಥಾನಗಳಲ್ಲಿ ಪೂಜೆಗೂ ಪ್ರವೇಶಕ್ಕೂ ಅವಕಾಶವೇ ಇರಲಿಲ್ಲ. ದೈಯ್ಯದ ಬನ, ದೈಯ್ಯದ ಬಲಿ, ಮಾಟ, ಮಂತ್ರ ಮುಂತಾದವುಗಳಲ್ಲಿ ಅಪಾರವಾದ ನಂಬಿಕೆ. ಮುಟ್ಟು ಚಿಟ್ಟುಗಳ ಬಗ್ಗೆ ನಿಷ್ಠುರ ನಿಯಮಗಳಿದ್ದವು. ದೈಯ್ಯದ ಬನ, ದೇವಸ್ಥಾನ ಮುಂತಾದ ಕಡೆ ಮುಟ್ಟಾದ ಹೆಂಗಸರು ಸುಳಿಯುವ ಹಾಗಿರಲಿಲ್ಲ. ಈ ನಿಯಮ ಬ್ರಾಹ್ಮಣ ಹೆಂಗಸರಲ್ಲಿ ಮಾತ್ರವಲ್ಲದೆ ಶೂದ್ರ ಅಸ್ಪೃಶ್ಯ ಹೆಂಗಸರೂ ಕೂಡಾ ನಿಷ್ಠುರವಾಗಿ ಪಾಲಿಸುತ್ತಿದ್ದರು. ಅಸ್ಪೃಶ್ಯರ ಜೊತೆಗೆ ಲೈಂಗಿಕ ಸಂಬಂಧವಂತು ಸಾಧ್ಯವೇ ಇರಲಿಲ್ಲ. ಕಟ್ಟು ಮಸ್ತಾದ ಗುತ್ತಿಯನ್ನು ಅಂತಕ್ಕ ಸೆಟ್ಟಿಯ ಮಗಳಾದ ಕಾವೇರಿ ತನ್ನ ವರ್ಗಕ್ಕೆ ತನ್ನ ಜಾತಿಗೆ ಸೇರದವನೆಂಬ ಕಾರಣಕ್ಕಾಗಿ ಅವನ ಸ್ಫುರದ್ರೂಪವನ್ನು ಗಂಡು ಹೆಣ್ಣು ಭಾವನೆಯಿಂದ ಹೊರತುಪಡಿಸಿ, ಹೋರಿಮಿಗವನ್ನೋ, ಸುಂದರವಾದ ಪಕ್ಷಿಯೊಂದನ್ನೋ ನೋಡುವಂತೆ ನೋಡುತ್ತಾಳೆ. ಹಾಗೆಯೇ ಪೀಂಚಲು ಮುಕುಂದಯ್ಯನನ್ನು ತಾನೆಷ್ಟೇ ಆರಾಧಿಸಿದರೂ ಜಾತಿಯಿಂದ ಅಸ್ಪೃಶ್ಯಳಾದ್ದರಿಂದ ಅವಳು ಮನಸ್ಸಿನಲ್ಲಿ ಆಸೆಪಟ್ಟರೂ, ಲೈಂಗಿಕ ಸಂಬಂಧವನ್ನು ನಿರೀಕ್ಷಿಸಲಾರಳು. ಜಾತಿ ವ್ಯವಸ್ಥೆ ಹೀಗೆ ತನ್ನದೇ ಆದ ರೀತಿಯಿಂದ ಸಮಾಜದಲ್ಲಿನ ವ್ಯಕ್ತಿಗಳನ್ನು ನಿಯಂತ್ರಿಸುತ್ತಿತ್ತು.

ಏನಾದರೂ ಬ್ರಾಹ್ಮಣ ಜಾತಿಯಲ್ಲಿನ ಸ್ತ್ರೀಯರಿಗಿದ್ದ ನೈಷ್ಠುರ್ಯ ಬೇರೆ ಜಾತಿಗಳಲ್ಲಿ ಇರಲಿಲ್ಲ. ಬಾಲ್ಯ ವಿವಾಹ, ವಿಧವಾ ವಿವಾಹಗಳ ವಿಚಾರದಲ್ಲಿ ಬ್ರಾಹ್ಮಣರ ಶಾಸ್ತ್ರ ನಿಯಮಗಳು ಬೇರೆ ಬೇರೆ ಆಗಿದ್ದವು. ಬ್ರಾಹ್ಮಣರಲ್ಲಿ ಎಳೆಯ ವಯಸ್ಸಿನಲ್ಲಿಯೇ ಹೆಣ್ಣು ಮಕ್ಕಳಿಗೆ ಮದುವೆ ಮಾಡುವುದು, ಗಂಡನನ್ನು ಕಳೆದುಕೊಂಡವಳಿಗೆ ಪುನರ್ವಿವಾಹಕ್ಕೆ ಅವಕಾಶವಿಲ್ಲದ್ದು, ಜೊತೆಗೆ ವಿಧವೆಯಾದವಳಿಗೆ ತಲೆ ಬೋಳಿಸಿ, ಕೆಂಪು ಸೀರೆ ಉಡಿಸಿ ವಿಕಾರ ಗೊಳಿಸುವುದು ಮೊದಲಾದ ವಿಕೃತ ಸಂಪ್ರದಾಯಗಳು ಅನ್ಯ ಜಾತಿಯವರಿಗೆ ಅನ್ವಯಿಸುತ್ತಿರಲಿಲ್ಲ. ಇವರ ಈ ಕೆಟ್ಟ ಸಂಪ್ರದಾಯಗಳು ಅನ್ಯ ಸಮಾಜೀಯರಲ್ಲಿ ಹೇಸಿಗೆ, ಜಿಗುಪ್ಸೆ ಮೂಡಿಸುತ್ತಿದ್ದವು. ಸುಬ್ಬಣ್ಣ ಹೆಗ್ಗಡೆಯ ಮಗಳಾದ ಮಂಜಮ್ಮನಿಗೆ ವಯಸ್ಸಾಗಿದ್ದರೂ, ಕೆಡುಕೆನಿಸಲಾರದು. ಸುಬ್ಬಣ್ಣ ಹೆಗ್ಗಡೆಯ ತರ್ಕದಲ್ಲಿ, ವಯಸ್ಸಾದವಳಂತೆ ಮಂಜಮ್ಮ ಸುಪುಷ್ಟವಾಗಿ ಬೆಳೆದರೆ, ಮದುವೆಯ ವಯಸ್ಸು ಮೀರಿತೆಂದು ಹೇಳುವುದು ನ್ಯಾಯ ಸಮ್ಮತವಲ್ಲ. ಅಲ್ಲದೆ ವಯಸ್ಸು ಮೀರುವುದರ

ಅರ್ಥವಾದರೂ ಏನೆಂಬುದು ಅವನ ಪ್ರಶ್ನೆ. ಜೊತೆಗೆ ವಯಸ್ಸಾಯಿತೆಂದು ಹೆದರಲು ತಾವೇನೂ ಹಾರುವರಲ್ಲವಲ್ಲ ಎಂಬ ಸಮಾಧಾನ. ಮದುವೆಗೆ ಮುಂಚೆ ದೊಡ್ಡವಳಾದರೆ ಕಾಡಿಗೆ ಅಟ್ಟಬೇಕೆಂಬ ಭಯವೂ ಇಲ್ಲ; ನಿಯಮವೂ ಇಲ್ಲ. ಹಾಗಾಗಿ ಬ್ರಾಹ್ಮಣೇತರ ಜಾತಿಗಳಲ್ಲಿ ಮದುವೆ ಒಂದು ಸಮಸ್ಯೆಯೇ ಆಗಿರಲಿಲ್ಲ; ಗಂಭೀರವಾದ ವಿಷಯವೂ ಅಲ್ಲ. ಈ ಬಗೆಯ ಆಲೋಚನೆಗಳು ಶೂದ್ರರಿಗೆ ಮಾತ್ರವೇ ಸಾಧ್ಯ. ಅಸ್ಪೃಶ್ಯರಲ್ಲಿ ಇದಕ್ಕೂ ಮೀರಿದ ಸವಲತ್ತುಗಳಿದ್ದವು. ಮುಕ್ತ ಲೈಂಗಿಕತೆ ಸಮಾಜಬಾಹಿರವಾಗಿರಲಿಲ್ಲ. ಗುತ್ತಿ. ತಿಮ್ಮಿ, ಅಕ್ಕಣಿ ಇವರುಗಳೇ ಇದಕ್ಕೆ ಸಾಕ್ಷಿ. ಮುಕ್ತ ಲೈಂಗಿಕತೆಯ ಜೊತೆಗೆ, ಕೂಡಿಕೆಯ ಸಂಪ್ರದಾಯವೂ ಸೇರಿದ್ದು, ಅಸ್ಪೃಶ್ಯ ಹೆಣ್ಣುಗಳು ಬಯಸಿದಲ್ಲಿ ಪುರುಷ ದೌರ್ಜನ್ಯ, ದಬ್ಬಾಳಿಕೆ, ಹಿಂಸೆ ಅವನ ಬಗ್ಗೆ ಬೇಸರಗಳ ನೆಪದಲ್ಲಿ ಸಲೀಸಾಗಿ ಗಂಡಿಂದ ಬಿಡುಗಡೆ ಪಡೆದು ಮತ್ತೊಬ್ಬನನ್ನು ಸೀರುಡಿಕೆಯ ಮೂಲಕ ಗಂಡನಾಗಿ ಸ್ವೀಕರಿಸಲು ಯಾವುದೇ ಬಗೆಯ ಸಾಮಾಜಿಕ ನಿಷೇಧ, ವಿಧಿ ನಿಯಮಗಳು ಇರಲಿಲ್ಲ. ನಾಗತ್ತೆ ಮತ್ತು ನಾಗಕ್ಕ ಇಬ್ಬರೂ ಸೀರುಡಿಕೆಯ ಮೂಲಕ ನಾಗಣ್ಣನ ತಂದೆಯನ್ನೂ, ವೆಂಕಟಪ್ಪನಾಯಕನನ್ನೂ ಕ್ರಮವಾಗಿ ಸೇರುತ್ತಾರೆ. ಬ್ರಾಹ್ಮಣ ಹೆಂಗಸರಿಗಿಂತ ಇವರಿಗೆ ಆರ್ಥಿಕ, ಸಾಮಾಜಿಕ ಭದ್ರತೆಗಳು ಸಾಧ್ಯವಾಗಿವೆ. ಜಾತಿ ವ್ಯವಸ್ಥೆಯಲ್ಲಿ ಅತ್ಯಂತ ಮೇಲಿನವರಾದ ಬ್ರಾಹ್ಮಣರು ತಮ್ಮ ತಿಳಿವಳಿಕೆ, ಬೌದ್ಧಿಕತೆಗಳಿಂದಾಗಿ, ಕೆಳವರ್ಗದವರಲ್ಲಿನ ಮೌಢ್ಯವನ್ನು ಬಂಡವಾಳವಾಗಿಸಿಕೊಂಡಿದ್ದಾರೆ. ಯಂತ್ರ, ತಂತ್ರ, ಮಂತ್ರ, ಪೂಜೆ, ಪುರಾಣ, ದೇವರು, ಧರ್ಮ, ಬೂದಿ, ಕುಂಕುಮಗಳಿಂದ ಉಳಿದ ಜಾತಿಗಳವರನ್ನು ಶೋಷಣೆ ಮಾಡಲು ತೊಡಗುತ್ತಾರೆ. ಅವರಲ್ಲಿನ ಮೌಢ್ಯ, ಅಂಧ ವಿಶ್ವಾಸಗಳನ್ನು ತಮ್ಮ ನಯದ, ಜಾಣ್ಮೆಯ ವಂಚನೆಯ ಮಾತುಗಳಿಂದ ತಮ್ಮ ಬಂಡವಾಳವನ್ನಾಗಿಸಿಕೊಂಡು ದುರ್ಲಾಭ ಪಡೆಯುತ್ತಾರೆ ಮತ್ತು ಬಲಪಡಿಸುತ್ತಾರೆ, ಬ್ರಾಹ್ಮಣರು ಆರಾಧ್ಯರು, ಮಡಿವಂತರು, ಮುಟ್ಟಿಸಿಕೊಂಡರೆ ಪಾಪ ಬರುತ್ತದೆಂಬ ಭೀತಿ. ಐಗಳ ಮೂಲಕವಾಗಿ ಶೂದ್ರರಿಗೆ ಪುರಾಣ, ಪುಣ್ಯಕತೆಗಳನ್ನು ಕೇಳುವ ಅವಕಾಶ, ಮುಕುಂದಯ್ಯನಂತಹವರು ಅಕ್ಷರ ಕಲಿಯಲು ಐಗಳಂತಹವರ ಪ್ರೋತ್ಸಾಹ, ಬೆಂಬಲ ಒಂದು ಕಡೆಯಾದರೆ, ಜಾತಿಯಲ್ಲಿ ಬ್ರಾಹ್ಮಣನಾಗಿ, ಜಾತಿ ವಿರೋಧಿ ವ್ಯವಹಾರಗಳಲ್ಲಿ ತೊಡಗಿದವನು ಮಂಜಯ್ಯಭಟ್ಟ. ಸ್ವಾರ್ಥಕ್ಕಾಗಿ, ಜಾತಿ ಹಿತಕ್ಕಾಗಿ ಏನನ್ನಾದರೂ ಮಾಡಲು ಸಿದ್ಧನಾಗಿದ್ದವನು. ದಕ್ಷಿಣ ಕನ್ನಡದ ಕಡೆಯಿಂದ ಉದ್ಧರಣೆ ಪಂಚಪಾತ್ರೆ ಹಿಡಿದು ಬಂದವನು ಕ್ರಮೇಣ ತನ್ನ ಜಾಣತನದಿಂದ ಬೆಳೆದು ಭೂಮಿಯ ಒಡೆತನ ಪಡೆದು ಜಮೀಂದಾರನೆನಿಸಿಕೊಂಡದ್ದೇ ಅಲ್ಲದೆ ಅಸ್ಪೃಶ್ಯರಾದಿಯಾಗಿ ಎಲ್ಲರಿಗೂ ಸಾಲವನ್ನು ಕೊಟ್ಟು ಸಮಾಜದಲ್ಲಿ ಎಲ್ಲರಿಗೂ ಬೇಕಾದ ಪ್ರತಿಷ್ಠಿತ ವ್ಯಕ್ತಿಯಾಗಿದ್ದ. ಸಾಲ ವಸೂಲಿಗಾಗಿ ಕರಿಮೀನು ಸಾಬಿ, ಪುಡಿಸಾಬಿಯಂತಹ ಗೂಂಡಾಗಳನ್ನೂ ತನ್ನ ಬೆಂಬಲಕ್ಕೆ ಪೋಷಿಸಿಕೊಂಡಿದ್ದ. ಹಣದ ಎದುರು ಸಹಾನುಭೂತಿ, ಮಾನವೀಯತೆಗಳು ಅವನ ದೃಷ್ಟಿಯಲ್ಲಿ ಏನೇನೂ ಆಗಿರಲಿಲ್ಲ. ಹೊನ್ನಾಳಿ ಹೊಡೆತದ ವಿಧಾನಗಳಿಂದಲೂ ಮುಲಾಜಿಲ್ಲದೆ ಸಾಲವನ್ನು ಕಕ್ಕಿಸುತ್ತಿದ್ದ. ವೆಂಕಟಪ್ಪನಾಯಕನಂತಹವರಿಗೂ ಸಾಲ ಕೊಡುವಷ್ಟು ಆರ್ಥಿಕವಾಗಿ ಸುಭದ್ರನಾಗಿದ್ದ. ಅಷ್ಟೇ ಅಲ್ಲದೆ ವೆಂಕಟಪ್ಪ ನಾಯಕನಿಗೆ

ಸಾಲ ಕೊಟ್ಟೂ ಕೊಟ್ಟೂ ಕಡೆಗೆ ಅವನ ಅಸಹಾಯಕತೆಯ ಪ್ರಯೋಜನ ಪಡೆದು ಅವನ ಭೂಮಿ ಕಾಣೆಯೆಲ್ಲವನ್ನೂ ಲಪಟಾಯಿಸಿ ಬಹುದೊಡ್ಡ ಬಂಡವಾಳ ಗಾರನಾಗಿ ಕೊಬ್ಬಿ ಬೆಳೆದಿದ್ದ.

ಊಟೋಪಚಾರ ಸಂಬಂಧದಲ್ಲಿಯೂ ಶ್ರೇಣೀಕೃತ ಧೋರಣೆ ಬ್ರಾಹ್ಮಣ ಮತ್ತು ಇತರ ಜಾತಿಗಳ ನಡುವೆ ಕಾಣಿಸಿಕೊಳ್ಳುತ್ತಿತ್ತು. ಬ್ರಾಹ್ಮಣ ಭೋಜನವೆಂದರೆ ಬಾಯಿ ಬಿಟ್ಟುಕೊಂಡು ಜೊಲ್ಲು ಸುರಿಸುತ್ತಿದ್ದ ಅಸ್ಪೃಶ್ಯರಿಗೆ, ತಮ್ಮ ವಿಷಯವಾಗಿ ಎಷ್ಟೇ ನಿಕೃಷ್ಟವಾಗಿ ನೋಡಿಕೊಂಡು, ನಡೆದು ಕೊಳ್ಳುತ್ತಿದ್ದರೂ ಸಮಾಜದಲ್ಲಿ ತಮ್ಮ ಬಗೆಗಿದ್ದ ಕೀಳುತನವನ್ನು ಯಾವುದೇ ಪ್ರತಿಭಟನೆ, ಅಸಮಾಧಾಗಳಿಲ್ಲದೆ ಒಪ್ಪಿ ಕೊಂಡಿದ್ದರಿಂದ, ಊಟಕ್ಕೆ ದೂರದಲ್ಲಿ ಕೂರಿಸಿದರೂ ಅವರು ಅದನ್ನು ಮನಸ್ಸಿಗೆ ತೆಗೆದುಕೊಳ್ಳದೆ ಸಂತೋಷವಾಗಿ, ಸ್ವರ್ಗಭೋಗದಂತೆ ಆಸ್ವಾದಿಸುತ್ತಿದ್ದರು. ಒಂದು ವಿಪರ್ಯಾಸವೆಂದರೆ, ಬ್ರಾಹ್ಮಣರಿಗೆ ತಮ್ಮ ಬಗ್ಗೆ ಯಾವ ನಿಲುವಿತ್ತೋ, ಕ್ರಿಶ್ಚಿಯನರ ಬಗ್ಗೆ ಅಸ್ಪೃಶ್ಯರೂ, ಮುಸ್ಲಿಮರೂ ಅದೇ ನಿಲುವನ್ನು ತಳೆದಿದ್ದರು. ಕ್ರಿಶ್ಚಿಯನ್ ಆದವನು ಎಲ್ಲ ಜಾತಿಯವರ ದೃಷ್ಟಿಯಲ್ಲಿ ಅತ್ಯಂತ ಕೀಳಾಗಿ ಪರಿಗಣಿಸಲಾಗುತ್ತಿತ್ತು ಸಿಂಧುವಳ್ಳಿ ಚಿನ್ನಪ್ಪನ ಜೊತೆಗೆ ಬಂದ ಪಾದ್ರಿಗೆ, ಊಟಎಲ್ಲಿ ಬಡಿಸಬೇಕೆಂಬುದು, ದೇವಯ್ಯನಿಗೆ ಒಂದು ದೊಡ್ಡ ಸಮಸ್ಯೆಯಾಗುತ್ತದೆ. ಹಿತ್ತಲ ಕಡೇಲಿ, ಹಳೆಪೈಕದವರನ್ನು ಕೂರಿಸುವ ಜಾಗದಲ್ಲಿ ಕೂರಿಸುವುದೇ?... ಊಟವನ್ನು ಅವನಿಗೆ ಯಾರು ಬಡಿಸಬೇಕು?... ಎಂಬೆಲ್ಲ ಪ್ರಶ್ನೆಗಳು ಅವನನ್ನು ಕಾಡುತ್ತವೆ. ಹೆಂಗಸರು ಯಾರೂ ಕಿರಿಸ್ತಾನದ ಪಾದ್ರಿಗೆ ಬಡಿಸಲು ಮುಂದೆ ಬರುವುದಿಲ್ಲ. ಹೆಂಗಸರಷ್ಟೇ ಅಲ್ಲ, ಆಳು ಕಾಳುಗಳೂ ಅವನಿಗೆ ಬಡಿಸಲು ಹಿಂಜರಿಯುತ್ತಾರೆ. ಮೊರದಲ್ಲಿ ಎಲೆಯಿಟ್ಟು ಅದರಲ್ಲಿ ಬಡಿಸಿ ಕೊಡುತ್ತಾರೆ. ಅದನ್ನು ಬೇಕಾದರೆ ಆ ಮೇಲೆ ಸುಟ್ಟು, ಸೆಗಣಿ ನೀರಿನಲ್ಲಿ ಶುದ್ಧಿ ಮಾಡಿಕೊಳ್ಳಲು ಅವಕಾಶವಿದೆಯೆಂಬ ಸಮಾಧಾನವೇ ಅವರನ್ನು ಈ ರೀತಿ ಬಡಿಸಲು ಪ್ರೇರೇಪಿಸುತ್ತದೆ. ಹೀಗೆ ಜಾತಿ ವ್ಯವಸ್ಥೆಯೊಳಗಿನ ಕಟ್ಟು ಕಟ್ಟಳೆ, ಮಡಿ ಮೈಲಿಗೆಗಳು ಬಹಳ ನಿಷ್ಠುರವಾಗಿ ಪಾಲನೆಯಾಗುತ್ತಿದ್ದವು. ಅತಿ ಕ್ರಮಿಸುವ ಎದೆಗಾರಿಕೆ ಇನ್ನೂ ಅಷ್ಟಾಗಿ ಜನರಲ್ಲಿ ಮೂಡಿರಲಿಲ್ಲ. ಶೋಷಣೆ, ದಬ್ಬಾಳಿಕೆಗಳು ಯಾವುದೇ ಸಮಾಜದ ಒಂದು ಅನಿವಾರ್ಯ ಭಾಗವಾಗಿ ಕಾಣಿಸಿಕೊಳ್ಳುತ್ತದೆ. ಮೇಲು ಜಾತಿಯವರು ಕೆಳಜಾತಿಯವರನ್ನು ಬಂಡವಾಳಗಾರ ಅಥವಾ ಶ್ರೀಮಂತ ಕೂಲಿ ಕಾರರನ್ನು, ಪುರುಷರು ಸ್ತ್ರೀಯರನ್ನು ಅವರವರದೇ ಆದ ರೀತಿಯಲ್ಲಿ ಶೋಷಣೆಮಾಡುತ್ತ ಹೋಗುವುದನ್ನು ಇಲ್ಲಿಯೂ ಕಾಣುತ್ತೇವೆ. ಬ್ರಾಹ್ಮಣರನ್ನು ಹೊರತು ಪಡಿಸಿದರೆ, ತಮ್ಮ ಹೊಲ. ಗದ್ದೆಗಳಲ್ಲಿ, ಮನೆಗಳಲ್ಲಿ ಜೀತದಾಳುಗಳ ಮೇಲೆ ಅಧಿಕಾರ. ದಬ್ಬಾಳಿಕೆಗಳು ನಿರಂತರವಾಗಿ ನಡೆಯುತ್ತವೆ. ಒಕ್ಕಲಿಗೆ ಜಮೀಂದಾರರು ಯಾರೇ ಜೀತದಾಳುಗಳು ತಮ್ಮಿಚ್ಛೆಗೆ ವಿರೋಧವಾಗಿ ನಡೆದುಕೊಂಡರೆ ಹೊನ್ನಾಳಿ ಹೊಡೆತದ ಮೂಲಕ ಹಾದಿಗೆ ಹಚ್ಚುವ ನಿರಂತರ ಪ್ರಯತ್ನಗಳು ನಡೆಯುತ್ತವೆ. ಅಲ್ಲದೆ ದಲಿತರ ಬದುಕಿನ ಎಲ್ಲ ಆಗು ಹೋಗುಗಳಿಗೆ, ಜನನ, ಮರಣ, ಮದುವೆ, ಹಬ್ಬ, ಸಾಲ-ಸೋಲ ಇತ್ಯಾದಿಯಾಗಿ ಎಲ್ಲಕ್ಕೂ ಹೆಗ್ಗಡೆಗಳೇ ವಿಧಾತೃಗಳಾಗಿದ್ದರು. ಸಣ್ಣ ಬೀರನನ್ನು ಕಂಬಕ್ಕೆ ಕಟ್ಟಿಸಿ ಹುಣಿಸೆ ಬರಲಿನಿಂದ ಲುಂಗಿ ಸಾಬಿಯ ಕೈಯಲ್ಲಿ ಬೆನ್ನು, ಮೈಯ್ಯಿ ಬಾಸುಂಡೆಗಳು

ಬರುವಂತೆ ಹೊಡೆಸುವ ಕಲ್ಲಯ್ಯ ಗೌಡರಂತಹವರ ರೀತಿ ಎಲ್ಲ ಗೌಡರುಗಳ ರೀತಿಯಾಗಿತ್ತು. ಅವರ ಆರ್ತ ಪ್ರಾರ್ಥನೆಗಳಾಗಲೀ, ಪ್ರತಿಭಟನೆಗಳಾಗಲೀ ಗೌಡರ ಮನಗಳನ್ನು ಕರಗಿಸುತ್ತಿರಲಿಲ್ಲ, ಹೆದರಿಸುತ್ತಲೂ ಇರಲಿಲ್ಲ. ಗೌಡರ ಜೊತೆಗೆ ಮಂಜಯ್ಯಭಟ್ಟರಂತಹವರೂ ಸೇರಿಕೊಂಡು ದಲಿತ ಮಕ್ಕಳನ್ನು ನೋವು, ಸಾವುಗಳ ದುರಂತ ಕೂಪಕ್ಕೆ ತಳ್ಳುತ್ತಿದ್ದರು.

ಮಲೆನಾಡಿನ ಸಮಾಜದ ಮತ್ತೊಂದು ಜಾತಿವರ್ಗಗಳು ಮುಸ್ಲಿಂ ಮತ್ತು ಕ್ರಿಶ್ಚಿಯನರಾಗಿದ್ದರು. ಈ ಎರಡೂ ಜಾತಿಗಳು ಅಸ್ಪೃಶ್ಯರ ದೃಷ್ಟಿಯಲ್ಲಿಯೂ ಅಸ್ಪೃಶ್ಯ ಜಾತಿಗಳಾಗಿದ್ದವು. ಎಲ್ಲಿಂದಲೋ ಬಂದು ಸಣ್ಣ ಪುಟ್ಟ ವ್ಯಾಪಾರ, ವ್ಯವಹಾರ, ಹಣದ ಲೇವಾದೇವಿ, ಕಳ್ಳತನ, ದರೋಡೆಗಳಲ್ಲಿ ತೊಡಗಿಕೊಂಡು, ಊರಿನ ಗೌಡರ, ಸಾಹುಕಾರರ ಬಲಗೈ ಬಂಟರಾಗಿ, ಅವರ ಸ್ವಾರ್ಥಕ್ಕೆ ಅಸ್ತ್ರಗಳಾಗಿ, ದಲಿತರ ಮೇಲೆ ಜೀತದಾಳುಗಳ ಮೇಲೆ ಗೂಂಡಾಗಿರಿ ಮಾಡುತ್ತ, ದೌರ್ಜನ್ಯಗಳನ್ನು ನಡೆಸುತ್ತಾ, ಹೊನ್ನಾಳಿ ಹೊಡೆತಗಳ ಪ್ರತೀಕಗಳಾಗುತ್ತ ಊರಿನವರಿಗೆ ಭಯಂಕರ ಸ್ವಪ್ನವಾಗಿ ಕಾಡುತ್ತ, ಬಲಿತು ಬೆಳೆಯುತ್ತಿದ್ದರು. ಕ್ರಿಶ್ಚಿಯನರು ಕ್ರೈಸ್ತಧರ್ಮ ಪ್ರಚಾರೋದ್ದೇಶಕ್ಕಾಗಿ ರೂಢಿಗತ ಸಮಾಜವನ್ನು ಪ್ರವೇಶಿಸಿ ಅವರ ಹೊಸದಾದ ಆಧುನಿಕವಾದ ವಿಚಾರಗಳ ಮೂಲಕ ಮತ್ತು ನವ ನಾಗರೀಕ ವಸ್ತುಗಳನ್ನು ಪರಿಚಯಿಸುವುದರ ಮೂಲಕ, ಜಡವಾಗಿ ಸ್ಥಗಿತ ಗೊಂಡಿದ್ದ ಸಾಮಾಜಿಕ ಬದುಕಿನಲ್ಲಿ ಸ್ವಲ್ಪ ಮಟ್ಟಿಗಿನ ಬದಲಾವಣೆಗಳನ್ನು ತರುವ ಪ್ರಯತ್ನ ನಡೆಯುತ್ತದೆ. ಸಮಾಜದ ಎಲ್ಲ ವರ್ಗದವರೂ ಪಾದ್ರಿ ಜೀವರತ್ನಯ್ಯನ ಹೊಸ ವಿಚಾರಗಳಿಗೆ ಸ್ಪಂದಿಸುವುದೂ ಇಲ್ಲ ಮತ್ತು ಆತನು ಮತಾಂತರ ಪ್ರಯತ್ನದಲ್ಲಿ ಇರುವುದನ್ನು ಗಮನಿಸಿದರೂ ನೇರವಾದ ಪ್ರತಿಭಟನೆಗೆ ನಿಲ್ಲುವುದೂ ಇಲ್ಲ. ಮತಾಂತರ ಪ್ರಕ್ರಿಯೆ ಬೇಡವಾದರೂ ಜೀವರತ್ನಯ್ಯನ ಆಧುನಿಕ ವಿಚಾರಗಳು ಅವನ ಸಲಹೆ ಸಹಕಾರಗಳು, ವಿಶೇಷವಾಗಿ, ವಿದ್ಯಾವಂತನಾದ ಜೀವರತ್ನಯ್ಯನಿಗೆ, ಕೋರ್ಟು, ಕಛೇರಿ, ಕಾನೂನು, ಸರಕಾರಿ ನಿಯಮಗಳು- ಮುಂತಾದುವಕ್ಕೆ ಸಂಬಂಧಿಸಿದಂತೆ ಇದ್ದ ಅರಿವು ಅವರೆಲ್ಲರಿಗೂ ಬೇಕಾಗುತ್ತಿತ್ತು. ಕೋರ್ಟು, ಕಛೇರಿ, ಕಾನೂನು, ಪೋಲೀಸು, ಅಮಲ್ದಾರ, ಪೋಸ್ಟ್ ಆಫೀಸ್- ಮುಂತಾದವುಗಳ ಬಗ್ಗೆ ಯಾವುದೋ ಬಗೆಯ ಅವ್ಯಕ್ತ ಭೀತಿ ಈ ಮಲೆನಾಡಿನ ಜನವನ್ನು ಕಾಡುತ್ತಿದ್ದ ಸನ್ನಿವೇಶದಲ್ಲಿ 'ಜೀವರತ್ನಯ್ಯ' ಅವರಿಗೆ ನೈತಿಕಬಲವಾಗಿ ಪರಿಣಮಿಸಿದ್ದ, ಜೀವರತ್ನಯ್ಯನ ಚಟುವಟಿಕೆಗಳಿಗೆ ಇದರಿಂದಾಗಿ ದಾರಿ ಸುಗಮವಾಗಿತ್ತು. ಮಲೆನಾಡಿನ ಹಳ್ಳಿ ಜನಕ್ಕೆ ಇಂತಹ ವಿಷಯಗಳಲ್ಲಿ ನೆರವು ನೀಡುವ, ಸ್ಕೂಲು, ಆಸ್ಪತ್ರೆಯಂತಹ ಜನೋಪಕಾರಿ ಕಾರ್ಯಗಳ ಮೂಲಕ ಜನರ ಮನಸ್ಸನ್ನು ಗೆಲ್ಲುವ ಪ್ರಯತ್ನಗಳೂ ನಡೆಯುತ್ತವೆ. ಕ್ರೈಸ್ತ ಪಾದ್ರಿಗಳಿಂದ ಮೇಗರವಳ್ಳಿಯಲ್ಲಿ ಜನರ ಸಹಕಾರದೊಂದಿಗೆ ಶಾಲೆಯೊಂದು ಸ್ಥಾಪಿತವಾಗುತ್ತದೆ. ಮತಾಂತರ ಭೀತಿಯನ್ನು ತಪ್ಪಿಸಲು ಬ್ರಾಹ್ಮಣರನ್ನೇ ಉಪಾಧ್ಯಾಯರಾಗಿ ನೇಮಿಸಲಾಗುತ್ತದೆ. ಶಾಲೆಗೆ ಬರುವ ವಿಧ್ಯಾರ್ಥಿಗಳ ಅನುಕೂಲಕ್ಕಾಗಿ ಅಂತಕ್ಕ ಸೆಟ್ಟಿಯ 'ಓಟ್ಲುಮನೆ' ವಿಧ್ಯಾರ್ಥಿ ನಿಲಯವಾಗಿ ಪರಿವರ್ತನೆಯಾಗುತ್ತದೆ. ಕಾದಂಬರಿಯಲ್ಲಿ ಇದೊಂದು ಮಹತ್ವದ ಘಟನೆಯಾಗಿ ಪರಿಣಮಿಸಿದೆ ''ಮೇಗರವಳ್ಳಿಯ ಮತ್ತು ಮಲೆನಾಡಿನ ಮತ್ತು ಕನ್ನಡನಾಡಿನ, ಭರತ ಭೂಮಿಯ

ಭಾವೀ ಪ್ರಗತಿಯ ಮತ್ತು ಜಾಗೃತಿಯ ದೃಷ್ಟಿಯಿಂದ ನಿಜವಾಗಿಯೂ ಬಹುಮುಖ್ಯವಾದದ್ದು... ಅಗೋಚರವಾಗಿ, ಅಂತರ್ಗತವಾಗಿ, ಗೂಢವಾಗಿ, ಹಳೆ ಮನೆ, ಕೋಣೂರು, ಹೂವಳ್ಳಿ, ಬೆಟ್ಟಳ್ಳಿ. ಕಲ್ಲೂರು, ಸಿಂಬಾವಿ ಮೊದಲಾದ ಸುತ್ತಮುತ್ತಣ ಹಳ್ಳಿಗಳಲ್ಲಿದ್ದು ಓದು ಬರಹ ಕಲಿಯಲು ಇಷ್ಟಪಡುವ ಹುಡುಗರೆಲ್ಲ ಅಂತಕ್ಕನ ಮನೆಯಲ್ಲಿದ್ದುಕೊಂಡು ಮಿಶನ್ ಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡುವುದೆಂದಾಗಿತ್ತು" ( ಪುಟ 720 ) ಎಂದು ಲೇಖಕರು ಆ ಹಳ್ಳಿಯಲ್ಲಿ ವಿದ್ಯಾಭ್ಯಾಸದ ಹೊಸ ವ್ಯವಸ್ಥೆಯೊಂದರ ಪ್ರವೇಶದ ಸ್ವರೂಪವನ್ನು ವಿವರಿಸಿದ್ದಾರೆ. ಮತಾಂತರದ ಭೀತಿಯ ಹೊರಗೆ ನಿಂತು ನೋಡಿದಾಗ ಕ್ರಿಶ್ಚಿಯನ್ ಮಿಶನರಿಗಳ ಜನೋಪಕಾರಿ ಕೆಲಸಗಳು ಅತ್ಯಂತ ಮಹತ್ವಪೂರ್ಣವೂ ಮತ್ತು ಹೊಸ ವಿಚಾರಗಳ ಪರಿಣಾಮವಾಗಿ ಕೊಂಪೆಯಂತಹ ಹಳ್ಳಿಗಳೂ ಸಾಕಷ್ಟು ಸುಧಾರಣೆಯ ದಿಕ್ಕಿನಲ್ಲಿ ಸಾಗುತ್ತಿದ್ದುದು ಸ್ಪಷ್ಟಗೋಚರವಾಗುತ್ತಿತ್ತು. ಪಾದ್ರಿಗಳ ಪ್ರವೇಶಕ್ಕೆ ಮುಂಚೆ ಕೂಲಿ ಮಠಗಳ ವಿದ್ಯಾಭ್ಯಾಸ ಪದ್ಧತಿಗಳು ಜಾರಿಯಲ್ಲಿದ್ದವು. ಆದರೆ ಆಂಗ್ಲರ ಪ್ರವೇಶದೊಂದಿಗೆ ಕೂಲಿಮಠಶಿಕ್ಷಣ ಪದ್ಧತಿಯನ್ನು ಮತ್ತು ಇದರ ಪ್ರಭಾವದ ಮುಂಬೆಳಕನ್ನು ಮೊತ್ತ ಮೊದಲು ತಂದವರಲ್ಲಿ ಕ್ರೈಸ್ತ ಪಾದ್ರಿಗಳು. ಇವರ ಇಂತಹ ಕಾರ್ಯ ಚಟುವಟಿಕೆಗಳು, ಗಣನೀಯವೂ,ಶ್ಲಾಘನೀಯವೂ ಆಗಿತ್ತು. ಆದರೆ ಇವೆಲ್ಲವೂ ಮತಾಂತರ ಪ್ರಕ್ರಿಯೆಗೆ ಪೂರ್ವ ಪೀಠಿಕೆಯಾಗಿ, ಆಮಿಷವಾಗಿ ಇದ್ದವು. ಹಿಂದೂಸಮಾಜದಲ್ಲಿ ಹಿಂದೂ ಧರ್ಮದಲ್ಲಿ, ಜಾತಿ ನೀತಿಯಿಂದಾಗಿ, ಹಿಂದುಗಳಲ್ಲಿಯೇ ತಾರತಮ್ಯವಿತ್ತು. ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ವ್ಯತ್ಯಾಸಗಳು, ಮೇಲು ಜಾತಿಗಳವರಿಂದ ಕೆಳಜಾತಿಯವರ ಶೋಷಣೆ, ಬ್ರಾಹ್ಮಣರಂತಹವರಿಂದ ಅಸ್ಪೃಶ್ಯ, ದಲಿತ ಜನ ಜಾತಿಗಳ ಮೌಢ್ಯ, ಬಡತನಗಳಿಂದಾಗಿ ಸುಲಿಗೆ ನಡೆಯುತ್ತಿದ್ದ ಕಾಲ, ಪರಿಸರದಲ್ಲಿ, ಪಾದ್ರಿಗಳಿಗೆ ತಮ್ಮ ಧರ್ಮ, ದೇವರು ದೃಷ್ಟಿಯಲ್ಲಿರುವ ಸಮಾನತೆ, ಜಾತ್ಯಾತೀತತೆ ಮುಂತಾದವುಗಳ ಬಗ್ಗೆ ಅತ್ಯಂತ ಆಕರ್ಷಕವಾಗಿ ಮಾತಾಡಲು ಅನುಕೂಲವಾಗಿತ್ತು. ಹೊಲ, ಗದ್ದೆ ಭೂಮಿ ಕಾಣಿಯ ಆಮಿಷವೊಡ್ಡಿ, ಆಸ್ಪತ್ರೆ, ಶಾಲೆಗಳ ಸ್ಥಾಪನೆಯ ಪ್ರಯೋಜನ ವಿವರಿಸಿ, ಮಲೇರಿಯಾ ಮುಂತಾದ ರೋಗಗಳಿಗೆ ಈಡಾಗಿ ಸಾಯುತ್ತಿದ್ದ ಬಾಣಂತಿ ಬಸಿರಿ ಹೆಂಗಸರಾದಿಯಾಗಿ ಅನೇಕರನ್ನು ರಕ್ಷಿಸಿ, ಜನರ ಪ್ರೀತಿ, ವಿಶ್ವಾಸಗಳನ್ನು ಗಳಿಸಿಕೊಳ್ಳುವ ನಿರಂತರ ಪ್ರಯತ್ನದಲ್ಲಿದ್ದು, ಸಾಕಷ್ಟು ಸಫಲತೆಯನ್ನೂ ಪಡೆದರು.

19ನೇ ಶ.ದ ಪಾಶ್ಚಾತ್ಯರ ಉದಾರವಾದಿ ನೀತಿಯಿಂದಾಗಿ ಭಾರತೀಯ ಸಮಾಜವನ್ನು ಪ್ರವೇಶಿಸಿದ ವ್ಯಕ್ತಿ ಸ್ವಾತಂತ್ರ್ಯ ಸಾಮಾಜಿಕ ಪರಿಕಲ್ಪನೆಗಳು, ತೀರಾ ಸಂಕುಚಿತವಾದ ಮತ್ತು ಜಾತಿ, ಮತ ವೈಷಮ್ಯಗಳಿಂದಾಗಿ ವ್ಯಕ್ತಿ ಪ್ರತಿಷ್ಠೆಗೇ ಭಂಗವಾದುಂತಿದ್ದ ಸಮಾಜದಿಂದ ರೋಸಿಹೋಗಿದ್ದ ದೇವಯ್ಯನಂತಹ ಯುವ ಪೀಳಿಗೆಯ ವ್ಯಕ್ತಿಗಳಿಗೆ ಅತ್ಯಂತ ರೋಮಾಂಚಕಾರಿ ಅನಿಸಿ ಅದರ ಕಡೆಗೆ ಆಕರ್ಷಿತವಾಗುವುದು ಸಹಜವೆನ್ನುವಂತಾಯಿತು. ಬ್ರಾಹ್ಮಣರ ಧಾರ್ಮಿಕ, ಬೌದ್ಧಿಕ ದಬ್ಬಾಳಿಕೆಯಿಂದಾಗಿ ಅಸಮಾಧಾನಗೊಂಡಿದ್ದ ಮನಸ್ಸುಗಳಿಗೆ ಸ್ವಾಗತಾರ್ಹವಾದ ವಿಚಾರಗಳಾಗಿದ್ದವು. ಬ್ರಾಹ್ಮಣವಿರೋಧಿ ನಿಲುವು ಇಲ್ಲಿ ನೇರವಾಗಿ ಚಳುವಳಿಯ ಸ್ವರೂಪವನ್ನು

ಪಡೆಯದಿದ್ದರೂ, ಬ್ರಾಹ್ಮಣೇತರರ ಮೇಲೆ ಹೊರಿಸಲಾಗಿದ್ದ ಸಾಮಾಜಿಕ, ಧಾರ್ಮಿಕ ನಿರ್ಬಂಧಗಳನ್ನು ಧಿಕ್ಕರಿಸುವ ವಿರೋಧಿಸುವ ಕ್ರೈಸ್ತಮತ ದೇವಯ್ಯನಂತಹವರಿಗೆ ಅತ್ಯಂತ ಪ್ರಿಯವಾಗುವುದು ಸ್ವಾಭಾವಿಕವಾಗಿತ್ತು. ಮತಾಂತರದ ಆಲೋಚನೆಗೆ ಬಿದ್ದರೂ ಮತಾಂತರಗೊಳ್ಳದೆ, ಹಿಂದುವಾಗಿಯೇ ಉಳಿದಿದ್ದರೂ ಬ್ರಾಹ್ಮಣರನ್ನು, ಬ್ರಾಹ್ಮಣರಿಂದ ರೂಢಿಗೆ ಬಂದ ದೇವರು, ಧರ್ಮ, ಶಾಸ್ತ್ರ, ಪೂಜೆ, ಮಡಿ, ಮೈಲಿಗೆ, ಯಂತ್ರ ಮಂತ್ರ ಇತ್ಯಾದಿಗಳೆಲ್ಲವನ್ನೂ ವಿರೋಧಿಸುತ್ತ, ನಿರಾಕರಿಸುತ್ತ ಹೋಗುತ್ತಾನೆ. ಪಾದ್ರಿ ಜೀವರತ್ನಯ್ಯ, ಅವನ ಕುಟುಂಬ ಎಲ್ಲವೂ ದೇವಯ್ಯನಿಗೆ ಪ್ರಿಯವಾಗುತ್ತದೆ. ಅವರ ದಟ್ಟವಾದ ಪ್ರಭಾವಕ್ಕೆ ಸಿಕ್ಕಿ, ಆಧುನಿಕ ಬದುಕಿನ ಶೈಲಿಯನ್ನು ಅನುಕರಿಸುವ ಪ್ರಯತ್ನದಲ್ಲಿ ಕ್ರಾಪುಮಾಡಿಸಿಕೊಳ್ಳುತ್ತಾನೆ. ಗಡಿಯಾರ, ಬೈಸಿಕಲ್ಲು, ಶೋಕಿಯಾದ ಬಟ್ಟೆ ಮೊದಲಾದ ವಸ್ತುಗಳನ್ನು ಕೊಂಡು ತರುತ್ತಾನೆ. ಹೊರಗೆ ಬದಲಾಗುತ್ತಲೇ ಆಂತರಿಕವಾಗಿಯೂ ಬದಲಾಗುತ್ತ ಅಲ್ಲಿಯವರೆಗಿನ ಹಿಂದೂ ಸಮಾಜದ ಆಚಾರ ವಿಚಾರ. ಸಂಪ್ರದಾಯ ನಂಬಿಕೆಗಳನ್ನು ಲೇವಡಿ ಮಾಡುತ್ತ ಹೋಗುತ್ತಾನೆ. ಹೆಂಡತಿಗಿದ್ದ ದೈವ ಭೀತಿ, ಧರ್ಮ ಭೀರುತ್ವ, ಯಂತ್ರ ಮಂತ್ರಗಳ ಶ್ರದ್ಧೆಯನ್ನು ಅವಹೇಳನ ಮಾಡುವುದಲ್ಲದೆ ಮಗುವಿನ ರಕ್ಷೆಗೆಂದು ಕಟ್ಟಿದ್ದ ಯಂತ್ರವನ್ನು ಕಿತ್ತು ಬಿಸಾಡಿ ಹೆಂಡತಿಗೆ ಮಾನಸಿಕ ಆಘಾತವನ್ನು ಉಂಟುಮಾಡುತ್ತಾನೆ. ಅಲ್ಲದೆ ಇನ್ನು ಮುಂದೆ ಇಂತಹ ಅನಿಷ್ಟ ಆಚಾರಗಳನ್ನು ಬಿಟ್ಟು ತನ್ನನ್ನು ಅನುಕರಿಸುವಂತೆ ತಾಕೀತು ಮಾಡುತ್ತಾನೆ. ದೇವಯ್ಯ ಆಧುನಿಕ ಶೈಲಿಯ ಬದುಕಿಗೆ ಎಷ್ಟು ಮಾರುಹೋಗಿದಾನೆಂದರೆ ಜೀವರತ್ನಯ್ಯನ ಮಗಳನ್ನು ಪ್ರೀತಿಯುವುದೂ ಬದುಕಿನ ಭಾಗವೆಂದು ನಂಬಿದಂತೆ ತೋರುತ್ತದೆ. ತಾನು ಮಾಡುತ್ತಿರುವುದೆಲ್ಲ ಸರಿ ಎಂಬ ನೈತಿಕ ನಂಬಿಕೆಯ ಮೇಲೆ ಮುಂದುವರೆಯುತ್ತಾನೆ. ತನ್ನ ಕ್ರಿಯೆಗಳನ್ನು ತಾನೇ ತನ್ನಲ್ಲಿ ಸಮರ್ಥಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾನೆ. ಹೆಂಡತಿಯ ಮನಸ್ಸಿಗೆ ನೋವಾಗಿರಬಹುದಾದರೂ', ತಾನು ಮಾಡಿದ್ದರಲ್ಲಿ ತಪ್ಪೇನಿದೆ? ಮಗುವಿನ ಜ್ವರಕ್ಕೆ ಔಷಧಿಕೊಟ್ಟು ಗುಣ ಪಡಿಸುವುದಕ್ಕೆ ಬದಲಾಗಿ ತಾಯಿತಿ ಕಟ್ಟಿದ್ದನ್ನು ಕಿತ್ತು ಹಾಕಿದ್ದು ತಪ್ಪೇ? ದಿಷ್ಟಿಮಣೆಯ ಹೆಸರಿನಲ್ಲಿ ಕೂಸಿಗೆ ಕಟ್ಟಿದ ಜೊಲ್ಲು ವಾಸನೆ, ಕಕ್ಕಸು, ಹೇಲು, ಉಚ್ಚೆಮಣ್ಣು ಕೊಳೆ, ಎಲ್ಲ ಹಿಡಿದು ಅಸಹ್ಯವಾಗಿದ್ದನ್ನು ತೆಗೆದು ಎಸೆದದ್ದು ತಪ್ಪೆ? ಧರ್ಮದ ಹೆಸರಿನಲ್ಲಿ ಆರೋಗ್ಯ ಮತ್ತು ನೈರ್ಮಲ್ಯಗಳನ್ನು ನಿರ್ಲಕ್ಷಿಸಿದ್ದನ್ನು ಖಂಡಿಸಿದ್ದು ತಪ್ಪೆ? ಕಲ್ಲು ಮಣ್ಣನ್ನು ದೇವರೆಂದು ನಂಬಿ, ಪೂಜಿಸಿ, ಹಾಳಾಗಿ ಹೋಗುತ್ತಿದ್ದಾರಲ್ಲ ಎಂದು ತುಳಸಿಕಲ್ಲನ್ನು ಕಿತ್ತು ಹಾಕಲು ಹೋಗಿದ್ದು ಸ್ವಲ್ಪ ತಪ್ಪಿರಬಹುದು! ಆದರೆ ಆ ಜೋಯಿಸ ಇವರಿಂದ ಸತ್ಯನಾರಾಯಣ ವ್ರತ ಮಾಡಿಸಿ ಇವರಿಗೆ ದಾರಿ ತಪ್ಪಿಸುವುದಲ್ಲದೆ, ದಿಕ್ಕನ್ನೂ ತಪ್ಪಿಸುತ್ತಿದ್ದಾನಲ್ಲ, ಅದನ್ನು ತಡೆದದ್ದು ತಪ್ಪೆ?''-ಎಂದು ತನ್ನ ಸಮಾಜದಲ್ಲಿ ಬೇರು ಬಿಟ್ಟಿದ್ದ ಅಂಧವಿಶ್ವಾಸ, ಅರ್ಥವಿಲ್ಲದ ಆಚರಣೆಗಳೆಲ್ಲವನ್ನು ತರ್ಕದ ಮೂಲಕ ಪ್ರಶ್ನಿಸುತ್ತಲೇ ತನ್ನನ್ನು ಪರೋಕ್ಷವಾಗಿ ಸಮರ್ಥಿಸಿ ಕೊಳ್ಳುತ್ತಾನೆ. ಈ ಹಿನ್ನೆಲೆಯಲ್ಲಿ ಆಧುನಿಕತೆ, ವಸಾಹತು ಸಂಸ್ಕೃತಿಯ ಪ್ರಭಾವದಿಂದ, ಆಧುನಿಕವಾದ್ದನ್ನು, ತರ್ಕಬದ್ಧವಾದ್ದನ್ನು ನಿರೀಕ್ಷಿಸುವ, ಅಪೇಕ್ಷಿಸುವ ಯುವ ಪೀಳಿಗೆಯ ಪ್ರಾತಿನಿಧಿಕ

ಧ್ವನಿಯಾಗಿನಿಲ್ಲುತ್ತಾನೆ, ದೇವಯ್ಯ. ಬೆಟ್ಟಳ್ಳಿ ಮುಖ್ಯವಾಗಿ ಕ್ರೈಸ್ತಮತ ಪ್ರಭಾವಕ್ಕೆ ಒಳಗಾಗುತ್ತದೆ. ಇಷ್ಟೆಲ್ಲ ಪ್ರಭಾವಕ್ಕೆ ವ್ಯಕ್ತಿಗತವಾಗಿ ಒಳಗಾಗಿ ಬಲಿಬೀಳುವವರು ದೇವಯ್ಯ ಮತ್ತು ಸಿಂಧುವಳ್ಳಿ ಚಿನ್ನಪ್ಪನಂತಹ ಕೆಲವರು, ಮಾತ್ರವೇ!ನಾಗರಿಕತೆಯ ಹೆಸರಿನಲ್ಲಿ ಪ್ರವೇಶಿಸುವ ಬೀಸೆಕಲ್ಲು ಸುತ್ತ ಮುತ್ತಲಿನ ಹಳ್ಳಿಗಳ ಜನಕ್ಕೆ ಕುತೂಹಲ, ರೋಮಾಂಚಕ ಅನುಭವಗಳಿಗಷ್ಟೇ ವಸ್ತುವಾಗುತ್ತದೆ. ಯಾರಲ್ಲಿಯೂ ಅದನ್ನು ಪಡೆಯಬೇಕೆಂಬ ತಹತಹಿಕೆ ಕಾಣುವುದೇ ಇಲ್ಲ. ಒಂದು ಕಡೆ ದೇವಯ್ಯ ನಂತಹವರು ಹಿಂದೂ ಸಂಪ್ರದಾಯದ ಸಂಕೋಲೆಗಳಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರೆ ಮತ್ತೊಂದು ಕಡೆ ಹಿಂದೂ ಸಂಪ್ರದಾಯಗಳನ್ನು ಅಚ್ಚಳಿಯದಂತೆ ಉಳಿಸಿಕೊಳ್ಳುವ ಪ್ರಯತ್ನಗಳು ನಡೆಯುತ್ತಿರುತ್ತವೆ. ಶಂಕರಪ್ಪ ದೇವಯ್ಯನಂತೆ ಬ್ರಾಹ್ಮಣ ವಿರೋಧವನ್ನು ತೋರದೆ, ಬ್ರಾಹ್ಮಣ ಸಂಸ್ಕೃತಿಯನ್ನು ಅನುಕರಿಸುತ್ತಾನೆ. ಅವರಿಗಿಂತ ಹೆಚ್ಚಾಗಿ ಮಡಿ, ಮೈಲಿಗೆಗಳನ್ನು, ದೇವರ. ಪೂಜೆ. ಇತ್ಯಾದಿಗಳನ್ನು ಕಟ್ಟು ನಿಟ್ಟಾಗಿ ಪಾಲಿಸುತ್ತಾನೆ. ಜಾತಿ, ನೀತಿ, ಪೂಜೆ, ಪುನಸ್ಕಾರ, ಬಿರಾಂಬರು, ದೇವರು, ದೆಯ್ಯ, ಆಚಾರ, ಕಟ್ಟಳೆಗಳಲ್ಲಿ ಸಂಪ್ರದಾಯಗಳಲ್ಲಿ ವೀರಾನುಯಾಯಿಯಾಗಿದ್ದ ಶಂಕರಪ್ಪನಿಗೆ ದೇವಯ್ಯನ ಬದಲಾದ ವೇಷ, ವಿಚಾರಗಳು ಬೇಸರ, ಅಸಮಾಧಾನವನ್ನುಂಟು ಮಾಡುತ್ತವೆ. ಹಾಗೆಯೇ ಮುಕುಂದಯ್ಯ ಪಾದ್ರಿಗಳು ಬ್ರಾಹ್ಮಣರ ವಿಚಾರಗಳಲ್ಲಿ ಹೇಳುವ ಮಾತುಗಳಲ್ಲಿನ ಸತ್ಯಾಂಶವನ್ನು ಮೆಚ್ಚಿಕೊಳ್ಳುತ್ತಾನಾದರೂ, ದೇವಯ್ಯನಂತೆ ಹಿಂದುತ್ವವನ್ನು ಬಿಟ್ಟು ಕ್ರೈಸ್ತ ಮತಾಂತರ ಹೊಂದುವುದಕ್ಕೆ ಮುಂದಾಗುವುದಿಲ್ಲ. ತನ್ನ ವಿಚಾರಗಳನ್ನು ಬದಲಾಯಿಸಿಕೊಳ್ಳುವುದೂ ಇಲ್ಲ. ಅಲ್ಲದೆ ಒಂದು ಹಂತದಲ್ಲಿ 'ಹಿಂದುತ್ವ'ದ ರಕ್ಷಕನಂತೆಯೂ ಕಾಣುತ್ತಾನೆ.

ಮತ್ತೊಂದು ಈ ಕಾದಂಬರಿಯ ಸಾಮಾಜಿಕ ಅಂಶವೆಂದರೆ ಸ್ತ್ರೀ ಸಂಬಂಧವಾಗಿ ಆ ಸಮಾಜದಲ್ಲಿ ರೂಢಿಯಲ್ಲಿದ್ದ ಧೋರಣೆಗಳು. ಹಿಂದೂ ಸಮಾಜದಲ್ಲಿ ಪ್ರಚಲಿತವಿದ್ದ ಯಜಮಾನ ಸಂಸ್ಕೃತಿ ಅಥವಾ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಡಿಯಲ್ಲಿ ಹೆಂಗಸರು ಪುರುಷಾಧೀನರಾಗಿಯೇ ಬದುಕುಬೇಕಿತ್ತು. ಪುರುಷನ ದರ್ಪ, ದಬ್ಬಾಳಿಕೆ, ದೌರ್ಜನ್ಯಗಳಿಗೆ ಒಳಗಾಗಿಸಿಕೊಳ್ಳುತ್ತಾ ಅಕ್ಷರವಂಚಿತರಾಗಿ, ಅಧಿಕಾರವಂಚಿತರಾಗಿ, ಗಂಡ, ಮಕ್ಕಳು ಬಂಧು, ಬಳಗವನ್ನು ಒಳಗೊಂಡ ಕುಟುಂಬ ಕಲ್ಯಾಣ ಚಿಂತನೆಯಲ್ಲಿಯೇ ಬದುಕನ್ನು ಸವೆಸಬೇಕಾಗಿತ್ತು. ಪುರುಷನ ಸಲಹೆ, ಸೂಚನೆ ಕೊಡುವ ಸಾಹಸಕ್ಕೆ ಅವಕಾಶವೇ ಇರಲಿಲ್ಲ. ಮೇಲು ಜಾತಿ ವರ್ಗದ ಬ್ರಾಹ್ಮಣ ಹೆಂಗಸರ ಪಾಡಂತೂ ಮತ್ತೂ ದುರಂತಕರವಾಗಿತ್ತು. ಸ್ಮೃತಿ, ಶಾಸ್ತ್ರಗಳು ಹೆಂಗಸರಿಗೆ, ವಿಧವೆಯರಿಗೆ, ಹೆಣ್ಣುಮಕ್ಕಳಿಗೆ ನಿರ್ದೇಶಿಸಿದ, ವಿಧಿಸಿದ ಕಟ್ಟು ಪಾಡುಗಳು ಚಾಚೂತಪ್ಪದಂತೆ ಹೇರಿಕೆಯಾಗುತ್ತಿದ್ದವು. ಬ್ರಾಹ್ಮಣರನ್ನು ಹೊರತು ಪಡಿಸಿದರೆ, ಪುರುಷರೂ ಅನಕ್ಷರಸ್ಥರಾಗಿದ್ದ ಈ ಸಮಾಜದಲ್ಲಿ ಹೆಣ್ಣುಮಕ್ಕಳು ಶಾಲೆಗೆ ಹೋಗುವುದಾಗಲೀ, ವಿದ್ಯಾಭ್ಯಾಸ ಮಾಡುವುದಾಗಲೀ, ಕಲ್ಪನೆಗೂ ಮೀರಿದ ಅಂಶವಾಗಿತ್ತು. ಚಿನ್ನಮ್ಮನನ್ನು ಶಾಲೆಗೆ ಏಕೆ ಕಳಿಸಬಾರದೆಂಬ ಸಲಹೆಗೆ ವೆಂಕಪ್ಪನಾಯಕ''ಹೌದು ಕಣೋ ಬರಾವು ಕಲ್ತು ಮಣೆಗಾರಿಕೆ ಮಾಡೋದೊಂದೇ ಬಾಕಿ''- ಎಂದು

ಲೇವಡಿ ಮಾಡಿದ್ದು, ಹೆಣ್ಣು ಮಕ್ಕಳ ವಿದ್ಯಾಭ್ಯಾಸದ ಬಗೆಗಿದ್ದ ಧೋರಣೆಗೆ ಪ್ರತೀಕವಾಗಿದೆ. ಹೆಂಗಸರೆಂದರೇನೇ ಒಂದು ಬಗೆಯ ಅಸಡ್ಡೆಯ ಭಾವನೆ. ಒಮ್ಮೊಮ್ಮೆ ಅವರೂ ತಮ್ಮಂತೆ ಮನುಷ್ಯರೆಂಬ ಪ್ರಜ್ಞೆಯೇ ಸತ್ತು ಮೃಗಗಳಂತೆ ಭಾವಿಸಿ ಹಿಂಸಿಸುವ ಪ್ರಕರಣಗಳೂ ಸಾಮಾನ್ಯವಾಗಿತ್ತು, ಸಾಮಾಜಿಕ ಬದುಕಿನಿಂದ ದೂರ ಉಳಿದಿದ್ದ ಈ ಸಮಾಜದ ಹೆಂಗಸರಿಗೆ ಒಂದೇ ಒಂದು ಅವಕಾಶವೆಂದರೆ ಹಬ್ಬ ಹರಿದಿನ, ಮದುವೆ, ಮುಂಜಿ ಮುಂತಾದ ಸಮಾರಂಭಗಳಲ್ಲಿ, ಭಾಗವಹಿಸಲು ಪಡೆದಿದ್ದ ಸ್ವಾತಂತ್ರ್ಯ ಮಾತ್ರ!

ಹೆಂಗಸರಿಗೆ ಸ್ವಾತಂತ್ರ್ಯವಿದ್ದುದು, ಮೇಲು ಜಾತಿಯವರಿಗಿಂತ ಅಸ್ಪೃಶ್ಯರು ಮತ್ತು ದಲಿತ ಹೆಂಗಸರಿಗೆ. ಅವರಿಗೆ ಅವರದೇ ಆದ ನಂಬಿಕೆ, ನಿಯಮಗಳು ಇದ್ದರೂ ಪುರುಷ-ಸ್ತ್ರೀ ಸಂಬಂಧಗಳಲ್ಲಿ ಅಂತಹ ನಿಯಮಗಳಿರಲಿಲ್ಲ. ಮುಕ್ತ ಲೈಂಗಿಕತೆಗೆ, ವಿವಾಹಬಾಹಿರ ಸಂಬಂಧಗಳಿಗೆ, ಪುನರ್ ವಿವಾಹಕ್ಕೆ ಯಾವುದೇ ಬಗೆಯ ನಿರ್ಬಂಧಗಳಾಗಲೀ, ನಿಷೇಧಗಳಾಗಲೀ ಇರಲಿಲ್ಲ. ಗಂಡ-ಹೆಂಡತಿ ನಡುವಿನ ಸರಸ- ವಿರಸಗಳು ವಿವಾಹ ಅಥವಾ ದಾಂಪತ್ಯದ ಮುಂದುವರಿಕೆಯನ್ನು ನಿರ್ಧರಿಸುತ್ತಿದ್ದವು. ಆಯ್ಕೆಯ ಸಂಬಂಧದಲ್ಲಿ ಪುರುಷನಿಗೆ ಇದ್ದಷ್ಟೇ ಸ್ವಾತಂತ್ರ್ಯ, ಸಮಾನತೆಗಳು ಅವರಿಗೂ ಇರುತ್ತಿದ್ದವು. ಆದರೆ ಇದೇ ಬಗೆಯ ಸ್ವಾತಂತ್ರ್ಯ ಚಿನ್ನಮ್ಮ, ಮುಕುಂದಯ್ಯರಿಗೆ ಸಾಧ್ಯವಾಗುವುದಿಲ್ಲ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಒಂದು ಪ್ರಾದೇಶಿಕ ಹಿನ್ನಲೆಯಲ್ಲಿ, ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಸಾಮಾಜಿಕ ಬದುಕಿನ ಹಲವು ಮಗ್ಗುಲುಗಳನ್ನು ತೆರೆದಿಡುವುದರ ಜೊತೆಗೆ, ರೂಢಿಗತ, ಸಾಂಪ್ರದಾಯಿಕ ಸಮಾಜವು ವಸಾಹತು ಸಂಸ್ಕೃತಿಯ ಪ್ರವೇಶದೊಂದಿಗೆ ಬದಲಾವಣೆಗೆ ಒಳಗಾಗುತ್ತಿರುವ ಪ್ರಕ್ರಿಯೆಯ ಸ್ವರೂಪವನ್ನೂ ಸೂಕ್ಷ್ಮವಾಗಿ ಕಟ್ಟಿಕೊಡುತ್ತದೆ.

## ಲೈಂಗಿಕ ಸಂಬಂಧಗಳು

ಈ ಕಾದಂಬರಿ ಮಲೆನಾಡಿನ ಸಂಕೀರ್ಣ ಬದುಕಿನ ಸಮಗ್ರಚಿತ್ರವನ್ನು ನೀಡುವುದರ ಜೊತೆಗೆ, ವಿಶಾಲವಾದ, ವಿಸ್ತಾರವಾದ ಮಾನವ ಸಮಾಜದಲ್ಲಿನ ಜಾತಿ, ವರ್ಗ ವೈವಿಧ್ಯತೆಗಳ ಬಗ್ಗೆ ಸ್ಪಷ್ಟ ವಿವರಗಳನ್ನು ನೀಡುತ್ತಲೇ ಮಾನವ ಸ್ವಭಾವ, ಸಂಬಂಧಗಳ ಸೂಕ್ಷ್ಮ ಎಳೆಗಳ ಸ್ವರೂಪವನ್ನು ಬಿಡಿಸಿಡುತ್ತದೆ. ಮಾನವಸಂಬಂಧಗಳಲ್ಲಿ ಮುಖ್ಯವಾದ ಗಂಡು– ಹೆಣ್ಣಿನ ಸಂಬಂಧಗಳ ಅದ್ಭುತ ಚಿತ್ರಣ, ಮೂಲ ಕಥಾಭಿತ್ತಿಯ ಆಶಯಕ್ಕೆ ಪೂರಕವಾಗಿ ಕಾಣಿಸಿಕೊಳ್ಳುತ್ತದೆ. ಹತ್ತು ಹಲವಾರು ರೀತಿಯ ವ್ಯಕ್ತಿಗಳಿಂದ ನಿರ್ಮಿತವಾದ ಸಮಾಜದಲ್ಲಿ ಸಂಬಂಧಗಳೂ ಕೂಡಾ ಸಾಮಾಜಿಕ ಕಟ್ಟು ಕಟ್ಟಳೆಗಳಿಂದ ನಿಯಂತ್ರಿತವಾಗುತ್ತವೆ. ಇಲ್ಲವೆ ಸಾಮಾಜಿಕವಾಗಿ ಸ್ವಾತಂತ್ರ್ಯ ನೀಡುತ್ತದೆ. ಕೆ. ವಿ. ಸುಬ್ಬಣ್ಣ ಅವರು ಗುರುತಿಸುವಂತೆ ಈ ಕಾದಂಬರಿಯ ಕೇಂದ್ರ ಪಾತ್ರವಾದ ಮದುಮಗಳು ಹೆಣ್ಣೇ ಆಗಿರುವುದಲ್ಲದೆ ಮದುಮಗಳು, ವಿಶೇಷಣವೇ ಹೆಣ್ಣು – ಗಂಡು ಸಂಬಂಧ ಲೈಂಗಿಕತೆ. ದಾಂಪತ್ಯ ಇತ್ಯಾದಿಗಳನ್ನು ಧ್ವನಿಸುತ್ತದೆ; ಮತ್ತು ಅದನ್ನೇ ಸಮರ್ಥಿಸುತ್ತದೆ. ಕಾದಂಬರಿಯಲ್ಲಿ ಬರುವ ಹೆಚ್ಚಿನ ವಿವರಗಳು ಗಂಡು– ಹೆಣ್ಣು ಸಂಬಂಧಕ್ಕೆ, ಸಂಬಂಧಗಳು, ಗಂಡ–ಹೆಂಡತಿ, ಪ್ರಣಯಿಗಳು

ಹಾದರ, ಅತ್ಯಾಚಾರ, ಪ್ರೀತಿ, ಸೆಳೆತ, ಕಾಮ ಇತ್ಯಾದಿ ನೆಲೆಗಳಲ್ಲಿ ವಿವರಣೆಗೊಂಡಿವೆ. ಹೀಗೆ ಮ ರೀತಿಯಲ್ಲಿ ಈ ಲೈಂಗಿಕ ಸಂಬಂಧಗಳೇ ಕಾದಂಬರಿಯ ಪ್ರಧಾನ ವಸ್ತುವೂ ಕೂಡ ಆಗಿರುವುದು. ನಮ್ಮ ಗಮನಕ್ಕೆ ಬರುತ್ತದೆ. ಇಲ್ಲಿನ ಘಟನೆಗಳು, ಸನ್ನಿವೇಶ ಸಂದರ್ಭಗಳು, ಸಾಹಸಗಳು– ಎಲ್ಲವೂ ಗಂಡು– ಹೆಣ್ಣಿನ ಸುತ್ತ ಕೇಂದ್ರಿತವಾಗಿವೆ. ಕಾದಂಬರಿಯ ಪ್ರಾರಂಭವಾಗುವುದೂ ಕೂಡ ದಾಂಪತ್ಯದಲ್ಲಿನ ಸಮಸ್ಯೆಯೊಂದಕ್ಕೆ ಪರಿಹಾರವನ್ನು ಅರಸಿ ಹೊರಟ ಪ್ರಯಾಣದೊಂದಿಗೆ. ಭರಮೈ ಹೆಗ್ಗಡೆ– ಜಟ್ಟಮ್ಮರ ನಡುವಿನ ದಾಂಪತ್ಯ ಸಂತಾನದ ಕೊರತೆಯಿಂದ ವಿಷಮತೆಗೆ ಹೊರಳುತ್ತದೆ. ದಾಂಪತ್ಯದಲ್ಲಿ ಪ್ರೀತಿ, ಪ್ರೇಮಗಳು, ಅನ್ಯೋನ್ಯತೆ. ಸಂತಾನದಿಂದಲೇ ಸಾಧ್ಯವಾಗುತ್ತದೆ ಎನ್ನುವ ಸತ್ಯವನ್ನು ಬಿಂಬಿಸುವಂತೆ ಭರಮೈ ಹೆಗ್ಗಡೆ–ಜಟ್ಟಮ್ಮರ ಸಂಬಂಧವಿದೆ. ಸಂತಾನದ ಕೊರತೆಯನ್ನು ನಿವಾರಿಸಿಕೊಳ್ಳಲು ಆಗಿನ ಕಾಲಕ್ಕೆ ಮರು ಮದುವೆ ಅಥವಾ ಮತ್ತೊಂದು ಮದುವೆಯೇ ಪರಿಹಾರವೆಂಬ ನಂಬಿಕೆಯಲ್ಲಿ ಚಿನ್ನಮ್ಮನನ್ನು ಭರಮೈ ಹೆಗ್ಗಡೆ ಮದುವೆಯಾಗುವ ಪ್ರಯತ್ನಕ್ಕೆ ಮುಂದಾಗುತ್ತಾನೆ. ಜಟ್ಟಮ್ಮ ಈ ಪ್ರಯತ್ನವನ್ನು ಭಂಗಗೊಳಿಸುವ ಪ್ರಯತ್ನದಲ್ಲಿ, ತನಗೆ ಸಂತಾನವಾಗಲು ಕಣ್ಣಾಪಂಡಿತರಿಂದ ಔಷಧಿತರಲು ಗುತ್ತಿಯನ್ನು ನೇಮಿಸುತ್ತಾಳೆ. ಹೀಗಾಗಿ ಲೈಂಗಿಕ ವ್ಯಾಪಾರದಲ್ಲಿ ಎಷ್ಟೆ ವಿಕಾರಗಳು ನಿಷ್ಫಲತೆಗಳು ಬೆರತಿದ್ದರೂ ಸಂತಾನದ ಮೂಲಕ ನಿರಂತರತೆಯನ್ನು ಸ್ಥಾಪಿಸಿಕೊಳ್ಳಬೇಕಾದ ಅಗತ್ಯ ಏರ್ಪಡುತ್ತದೆ. ಕುವೆಂಪು ಅವರು ತಮ್ಮ ಈ ಕಾದಂಬರಿಯಲ್ಲಿ ಲೈಂಗಿಕ ವ್ಯಾಪಾರದಲ್ಲಿನ ಸರಸ, ವಿರಸ, ಸಾಫಲ್ಯ, ನಿಷ್ಫಲತೆ ಮುಂತಾದ ಪರಿಣಾಮ ಸ್ವರೂಪಗಳನ್ನು ಮತ್ತು ಇವುಗಳಿಗೆ ಕಾರಣವಾಗುವ ಸನ್ನಿವೇಶ, ಸಂದರ್ಭಗಳ ಹಿನ್ನೆಲೆಯಲ್ಲಿ ವಿವರಿಸುತ್ತಾರೆ.

ಲೈಂಗಿಕ ಪ್ರಕ್ರಿಯೆಗಳ ಜಗತ್ತಿನಲ್ಲಿ ನಮಗೆ ಇಲ್ಲಿ ಕಾಣಿಸುವುದು ಪ್ರಮುಖವಾಗಿ ಗುತ್ತಿ-ತಿಮ್ಮಿ, ಐತ- ಪೀಂಚಲು, ದೇವಮ್ಮ- ದೇವಯ್ಯ ಕಾವೇರಿ, ವೆಂಕಟಪ್ಪನಾಯಕ- ನಾಗಕ್ಕ- ನಾಗತ್ತೆ, ಚೀಂಕ್ರ-ಪಿಜಿಣ-ಅಕ್ಕಣಿ,- ಅಕ್ಕಣಿ- ರಂಗಪ್ಪಗೌಡರು, ನಾರಾಯಣಭಟ್ಟ-ಐತಾಳನ ಹೆಂಡತಿ. ಕಾವೇರಿ-ಸಾಬರು, ಮುಕುಂದಯ್ಯ- ಚಿನ್ನಮ್ಮ ಮೊದಲಾದವರು. ಇದರ ಜೊತೆಗೆ ಕೆಲವರ ನಡುವೆ ತ್ರಿಕೋಣ ಪ್ರೇಮಸಂಬಂಧಗಳನ್ನು ಕಾಣುತ್ತೇವೆ. ಗುತ್ತಿ- ತಿಮ್ಮಿ-ಬಚ್ಚ, ಚೀಂಕ್ರ-ಪಿಜಿಣ- ಅಕ್ಕಣಿ ಹೀಗೆ! ಆದರೆ ಲೈಂಗಿಕ ಸಂಬಂಧಗಳ ವಿಸ್ತೃತ ವರ್ಣನೆ ಪ್ರಮುಖವಾಗಿ ಕಾಣುವುದು ಐತ-ಪೀಂಚಲು; ಮುಕುಂದಯ್ಯ-ಚಿನ್ನಮ್ಮ;ಗುತ್ತಿ -ತಿಮ್ಮಿ-ಇವರುಗಳ ನಡುವೆ ಮಾತ್ರ. ಉಳಿದವರ ನಡುವಿನ ಸಂಬಂಧಗಳು ಪ್ರಾಸಂಗಿಕವಾಗಿ, ಸಾಂದರ್ಭಿಕವಾಗಿ ಬರುತ್ತವೆ. ದಲಿತ ಬದುಕಿನಲ್ಲಿ ನೋವು, ದಾರಿದ್ರ್ಯ, ಅನಾರೋಗ್ಯ, ಹೊಲಸು ಪರಿಸರಗಳ ನಡುವೆಯೇ ದಾಂಪತ್ಯದಲ್ಲಿನ ವೈಷಮ್ಯಗಳನ್ನು ಮತ್ತು ಅವುಗಳಿಗೆ ಕಾರಣಗಳನ್ನು ಸೂಕ್ಷ್ಮವಾಗಿ ವಿವರಿಸುತ್ತಾರೆ.

ಸಮಾಜದಲ್ಲಿ ಲೈಂಗಿಕ ಸ್ವೇಚ್ಛೆಗೆ ಅವಕಾಶ ಮೇಲು ವರ್ಗಗಳಲ್ಲಿ ಸಾಧ್ಯವೇ ಇಲ್ಲ. ಸಂಪ್ರದಾಯ, ಕಟ್ಟು, ಕಟ್ಟಳೆ, ಮನೆತನಗಳಿಂದಾಗಿ ನೈತಿಕ ಶಿಸ್ತು ಸ್ತ್ರೀ ಪುರುಷರಿಬ್ಬರಲ್ಲಿಯೂ ಅನಿವಾರ್ಯವೇ ಆದರೂ ಪುರುಷನಿಗೆ ಸ್ವೇಚ್ಛೆಯಿದೆ; ಪುರುಷನ ವಿಚಾರದಲ್ಲಿ ಸಮಾಜ ಉದಾರವಾಗಿದೆ. ಆದರೆ ಒಂದು ಹೆಣ್ಣು ಪುರುಷನೊಬ್ಬನನ್ನು ಪ್ರೀತಿಸುವುದಾಗಲೀ, ಅವನೊಡನೆ ಓಡಿಹೋಗುವುದಾಗಲೀ

ಸಾಧ್ಯವಿರಲಿಲ್ಲ. ಮುಕುಂದಯ್ಯ ಚಿನ್ನಮ್ಮರು ಪರಸ್ಪರ ಪ್ರೀತಿಸಿದರೂ, ಎಷ್ಟೇ ಬಲವತ್ತರವಾದ ಸೆಳೆತವಿದ್ದರೂ ಸಮಾಜದ ಎದುರಿನಲ್ಲಿ ಮಾರ್ಯಾದೆಯ ಸೀಮೆಯನ್ನು ದಾಟುವ ಹಕ್ಕು ಇರಲಿಲ್ಲ. ಬಾಲ್ಯದಿಂದಲೂ ಪರಿಚಯ, ಸಲುಗೆಗಳಿದ್ದರೂ, ಲೈಂಗಿಕ ಸಂಬಂಧಗಳ ವಿಚಾರದಲ್ಲಿ ಮಾತ್ರ ಎಚ್ಚರಿಕೆಯ ಸಂಯಮಗಳೊಂದಿಗೆ ದೂರವಿರುತ್ತಾರೆ. ಅಲ್ಲದೆ ಹೆಣ್ಣು ಮಕ್ಕಳು ಬೆಳೆಯುವ ಪರಿಸರವೂ ಅವರನ್ನು ಮರ್ಯಾದೆಯ ಮಿತಿಯೊಳಗೇ ಉಳಿಸುತ್ತದೆ. ಚಿನ್ನಮ್ಮನಿಗೆ ಮುಕುಂದಯ್ಯ 'ಅವರಾ'ಗಿರುವ ಭಾವನೆ. ಅಲ್ಲದೆ ಮನೆಯವರೂ ಚಿನ್ನಮ್ಮನಿಗೆ ಮುಕುಂದಯ್ಯನನ್ನು ತೋರಿಸಿ 'ಇಂವ'ಯಾರೆಂದಾಗ, ಅತೀಂದ್ರಿಯ ಅನುಭವದ ಮೂಲಕ ಮುಕುಂದಯ್ಯನಲ್ಲಿ ತನ್ನ ಹಿಂದಿನ ಜನ್ಮದ ಗಂಡನನ್ನು ಕಂಡು ಮತ್ತು ಗಂಡನನ್ನಾಗಿ ಅನುಭವಿಸಿದ್ದರಿಂದಲೇ, ನಾಚಿಕೆಯಿಂದ 'ಅವರು' ಎಂದು ಸಂಬೋಧಿಸುತ್ತಾಳೆ. ತೀರಾ ಎಳೆತನದ ಸಲುಗೆ ಸ್ವಲ್ಪ ಪ್ರಾಯಕ್ಕೆ ಬರುತ್ತಿದ್ದಂತೆ ನಾಚಿಕೆ, ಸಂಕೋಚಗಳಿಂದಾಗಿ ದೂರ ದೂರವಾಗಿಯೇ ಇರುತ್ತಾರೆ. ಚಿನ್ನಮ್ಮನ ಮನ;ಸ್ಥಿತಿ ಇದಾದರೆ ಮುಕುಂದಯ್ಯನಿಗೆ ಚಿನ್ನಮ್ಮನ ವಿಷಯದಲ್ಲಿ ಅತಿಯಾದ ಆಸಕ್ತಿ, ಕುತೂಹಲಗಳಾಗಲೀ, ಅತೀಂದ್ರಿಯ ಅನುಭವದ ಮೂಲಕ ತನ್ನ ಹೆಂಡತಿ' ಎಂಬ ಗ್ರಹಿಕೆಯಾಗಲೀ ಇರಲಿಲ್ಲ. ಚಿನ್ನಮ್ಮ, ಮುಕುಂದಯ್ಯ ತನ್ನ ಜನ್ಮಾಂತರದ ಗಂಡನೆಂಬ ಬಲವಾದ ನಂಬಿಕೆಯಿಂದ ಅವನತ್ತ ಹೆಚ್ಚು ಹೆಚ್ಚು ತುಡಿಯುತ್ತಿದ್ದಳು; ಸೆಳೆತಕ್ಕೆ ಒಳಗಾಗುತ್ತಿದ್ದಳು. ಪ್ರೀತಿಯ ವಿಷಯದಲ್ಲಿ ಚಿನ್ನಮ್ಮ ಪ್ರಬುದ್ಧಳಂತೆ ನಡೆದುಕೊಳ್ಳುತ್ತಿದ್ದಳು.

ವಯಸ್ಸುಪ್ರಾಯಕ್ಕೆ ತಿರುಗುತ್ತಿದ್ದಂತೆ ಪರಸ್ಪರರ ನಡುವಿನ ಸಂಬಂಧಗಳು, ಪ್ರತಿಕ್ರಿಯೆಗಳೂ ವ್ಯತ್ಯಾಸಗೊಳ್ಳುತ್ತಿತ್ತು. ಮುಕುಂದಯ್ಯನಲ್ಲಿನ ಮಾನಸಿಕ ಪರಿವರ್ತನೆಗಳು, ಪರಿಣಾಮವಾಗಿ ನಡವಳಿಕೆಗಳು ಮೊದಲಿಗಿಂತ ಭಿನ್ನವಾದವು. ದೈಹಿಕ ಮಾನಸಿಕ ಪರಿರ್ವತನೆಗಳು ಇಬ್ಬರ ಅನುಭವಕ್ಕೂ ಬರತೊಡಗಿದವು. ಚಿನ್ನಮ್ಮನ ಬಗೆಗೆ ಮೊದಲಿಗಿದ್ದ ಅನಾಸಕ್ತಿ ಮರೆಯಾಗಿ ಅವಳ ದೈಹಿಕ ಸ್ಪರ್ಷಕ್ಕಾಗಿ ಮುಕುಂದಯ್ಯ ಹಾತೊರೆಯುತ್ತಿದ್ದನಾದರೂ, ಬೆಳೆದು ಬಂದ ಪರಿಸರ ಅವನನ್ನು ಮರ್ಯಾದೆ ಮೀರದ ರೀತಿಯಲ್ಲಿ ತಡೆದಿತ್ತು. ಬಾಲ್ಯದಲ್ಲಿನ ಸಾಮೀಪ್ಯ, ಸಾಹಸಗಳು ಈಗ ಸಾಧ್ಯವಿರಲಿಲ್ಲ. ಅವರೊಳಗಿನ ನೈತಿಕ ಪ್ರಜ್ಞೆ ಅವರನ್ನು ನಿಯಂತ್ರಿಸುತ್ತಿತ್ತು. ದೇಹದಿಂದ ದೂರವಾದಷ್ಟೂ ಮನಸ್ಸಿನಿಂದ ಹತ್ತಿರವಾಗುತ್ತಿದ್ದರು. ಕಣ್ಣುಗಳು ಸಂಧಿಸಿದಾಗ ಬಾಯಿಂದ ಆಡಿ ಹೇಳಲಾಗದ್ದನ್ನು ಮತ್ತು ಹೇಳಲಾಗದ ಪ್ರಣಯ ಸಂದೇಶಗಳನ್ನು ನೋಟಗಳಿಂದಲೇ ರವಾನಿಸುತ್ತಿದ್ದನು.

ಮುಕುಂದಯ್ಯನ ಪ್ರೀತಿ ಪರಿಶುದ್ಧವಾದದ್ದು. ಸನಾತನ ಸಂಸ್ಕೃತಿಯ ಮತ್ತು ನಮ್ಮ ಪುರಾಣ ಪರಂಪರೆಯ ಅರಿವಿದ್ದವನು. ಚಿನ್ನಮ್ಮನ ಪ್ರೀತಿ, ನಿಷ್ಠೆಗೇ ಬದ್ಧನಾಗಿದ್ದವನಾದರೂ ಐತ ಪೀಂಚಲು ದಾಂಪತ್ಯ ಅವನಿಗೆ ಆದರ್ಶರೂಪದ್ದಾಗಿ ಕಾಣಿಸುತ್ತದೆ. ಪೀಂಚಲು ಮತ್ತು ಮುಕುಂದಯ್ಯನ ನಡುವಿನ ಸಂಬಂಧಕ್ಕೆ ಒಂದು ನಿರ್ದಿಷ್ಟವಾದ ಹೆಸರನ್ನು ಕೊಡುವುದು ಸಾಧ್ಯವಿಲ್ಲ. ಪೀಂಚಲು-ಮುಕುಂದಯ್ಯರ ನಡುವೆ ಒಂದು ವಿಚಿತ್ರವಾದ ಆರ್ಕಷಣೆ ಮತ್ತು ಸೆಳೆತಗಳು ಇದ್ದವು, ಇವರಿಬ್ಬರ

ಸ್ನೇಹ ಹಿಂದಿನಿಂದ ನಡೆದು ಬಂದಿದೆ. ಐತನೊಡನೆ ಮದುವೆಯಾಗುವುದಕ್ಕೆ ಮೊದಲಿದ್ದುದು ಮುಂದೆಯೂ ಹಾಗೆಯೇ ಮುಂದುವರೆಯುತ್ತದೆ. ಪೀಂಚಲು 'ಹೆಣ್ಣು' ಎಂಬ ಅರಿವಷ್ಟೇ ಇತ್ತಲ್ಲದೆ; ಚಿನ್ನಮ್ಮನೊಂದಿಗಿನ ಸ್ನೇಹದಂತೆ ಪೀಂಚಲು ಸ್ನೇಹವಿರಲಿಲ್ಲ. "ತನ್ನೊಡನೆ ಬೇಟೆಗೆ ಬರುವ ತಮ್ಮ ಮನೆಯ ಒಂದು ಒಳ್ಳೆಯ ಜಾತಿಯ ಮತ್ತು ರೂಪದ ಹೆಣ್ಣು ನಾಯಿಯ ವಿಚಾರವಾಗಿ ಇರಬಹುದಾಗಿದ್ದ ಮೆಚ್ಚುಗೆ, ಪ್ರಶಂಸೆಗಳೇ ಹೊರತು ಬೇರೆಯಾವ ಬಗೆಯ ಆರ್ಕಷಣೆ, ಅನುಭವಗಳಿಗೆ ಎಡೆ ಇರಲಿಲ್ಲ. ಆದರೆ ಪೀಂಚಲುವಿನ ವಿಚಾರವೇ ಬೇರೆ. ಅಸ್ಪೃಶ್ಯರಲ್ಲಿ, ದಲಿತರಲ್ಲಿ, ಕೆಳವರ್ಗದ ಹೆಣ್ಣುಗಳಲ್ಲಿ ನೈತಿಕ ನಿರ್ಬಂಧದಸಂಕೋಲೆಗಳು ಇರಲಿಲ್ಲ. ದೇಹದ ಆರ್ಕಷಣೆಗೆ ಒಳಗಾಗುವುದು ಒಂದು ರುಚಿಯಾದ ತಿಂಡಿಯನ್ನು ಬಯಸುವಷ್ಟೇ ಸಹಜವಾಗಿತ್ತು. ಹೆಣ್ಣು-ಗಂಡಿನ ಆರ್ಕಷಣೆಲೈಂಗಿಕ ಪ್ರಕ್ರಿಯೆಗಳಲ್ಲಿ ಪರಿವರ್ತಿತವಾಗುವುದು ತೀರಾ ಸ್ವಾಭಾವಿಕ ಮತ್ತು ಪ್ರಾಕೃತಿಕವೆಂಬಂತೆ ಭಾವಿಸಿ, ಧರ್ಮಭೀರುತ್ವವೂ ಇಲ್ಲದೆ ಸಹಜವಾಗಿ ವರ್ತಿಸುತ್ತಾರೆ. ಹಾಗೆಯೇ ಪೀಂಚಲು ಮುಕುಂದಯ್ಯನ್ನು ಪ್ರೀತಿಸುತ್ತಾಳಾದರೂ, 'ಜಾತಿ'ಪ್ರಜ್ಞೆ, ಮನೆತನ, ಒಡೆಯ ಎಂಬ ಭಾವನೆ ಅವಳನ್ನು ದೂರವಿರಿಸುತ್ತದೆ. ಮುಕುಂದಯ್ಯನ ಬಗ್ಗೆ ಆರಾಧ್ಯಭಾವನೆ ಇರಿಸಿಕೊಂಡಿರುವುದರಿಂದ ಅವನ ಜೊತೆ ಗಂಭೀರವಾಗಿಯೇ ವರ್ತಿಸುತ್ತಾಳೆ. ತನ್ನ ಜಾತಿಯ ಹೆಣ್ಣುಗಳಿಗಿಂತ ಸುಸಂಸ್ಕೃತಳಂತೆ ಕಾಣಿಸುತ್ತಾಳೆ. ಒಡೆಯರ ಜಾತಿ, ವರ್ಗಕ್ಕೆ ಸೇರಿದ ಮುಕುಂದಯ್ಯನನ್ನು ತಾನೆಂದೂ ಮುಟ್ಟಲಾರದ, ಮುಟ್ಟಬಾರದಷ್ಟು ದೂರದಲ್ಲಿಯೇ ಇದ್ದುಕೊಂಡು, ಪೂಜಿಸುತ್ತ, ಪ್ರಶಂಸಿಸುತ್ತ ಇದ್ದವಳಲ್ಲಿ, ಅವನ ಬಗ್ಗೆ ಇರಿಸಿಕೊಂಡಿದ್ದ ಶೃಂಗಾರಭಾವ ಅವಳ ಆರಾಧನೆಯ ಒಂದು ಭಾಗವೇ ಆಗಿತ್ತು. ಮುಕುಂದಯ್ಯನ ಸ್ಪರ್ಶಸುಖ ಸ್ವರ್ಗವೇ ಅವಳಿಗೆ ಕಾಣಿಸುವುದರಲ್ಲಿ ಸಂಶಯವಿರಲಿಲ್ಲ. ಆದರೆ ಜಾತಿ, ವರ್ಗದಿಂದ ನಿಯಂತ್ರಿತ ಸಮಾಜದಲ್ಲಿ ಅದು, ಅವಳಿಗೆ ಸಾಧ್ಯವಿರಲಿಲ್ಲ. ಮದುವೆಯಾಗಿ ಐತನೊಡನೆ ಪಡೆದ ದಾಂಪತ್ಯ ಸುಖ ಸಂತೃಪ್ತವಾಗಿದ್ದರೂ, ಕಟ್ಟಿಕೊಂಡ ಗಂಡನಿಗೇ ಮೀಸಲಾಗಿರಬೇಕೆಂಬ, ಮೇಲುವರ್ಗದವರ ನಿಯಮ ನಿರ್ಬಂಧಗಳು ಅವಳಿಗಿರಲಿಲ್ಲ. ಇನ್ನೊಬ್ಬ ಸುಂದರ ಪುರುಷನನ್ನು ಬಯಸಿದರೆ, ಕಾಮಿಸಿದರೆ ಗಂಡನನ್ನು, ಗಂಡನೊಡನಿದ್ದ ಸಂಬಂಧಗಳನ್ನು ತಿರಸ್ಕರಿಸುವುದಾಗಿರಲಿಲ್ಲ. ಪಾತಿವ್ರತ್ಯ ಭಂಗವೂ ಆಗಿರಲಿಲ್ಲ. ಅದಕ್ಕೆ "ಸಮಾಜದ ಭೀತಿಯಾಗಲೀ, ಭಯದ ಭಿತ್ತಿಯಾಗಲೀ, ಆದರ್ಶಸಾಧನೆಯ ಸಾಣೆಯಾಗಲೀ, ಆಕರ್ಷಣೆಯಾಗಲೀ ಇರಲಿಲ್ಲ. ಅದು ತೀರ ನೈಸರ್ಗಿಕವಾಗಿತ್ತು.(ಮ.ಮ.ಪು-150) ಹಾಗೆಂದು ವಿಕೃತ ಕಾಮಿಯಾಗಿ ಕಂಡ ಕಂಡ ಪುರುಷರನ್ನು ಅವಳು ಬಯಸಲಿಲ್ಲ; ಮದುವೆಗೆ ಮೊದಲಿನಿಂದಲೂ ಬೆಳೆಸಿಕೊಂಡಿದ್ದ ಮುಕುಂದಯ್ಯನ ಬಗೆಗಿನ ಅಭಿಮಾನ, ಆದರಗಳು ಇನ್ನೂ ಅಕ್ಷತವಾಗಿಯೇ ಉಳಿದಿದ್ದವು. ಮುಕುಂದಯ್ಯ ಒಂದು ವೇಳೆ ಪೀಂಚಲುವನ್ನು ಬಯಸಿದ್ದರೆ, ಪೀಂಚಲು ಸರ್ವಸಮರ್ಪಣ ಭಾವದಿಂದ ತನಗಿಂತಲೂ ಮಹತ್ತಾದ ಚೇತನವೊಂದಕ್ಕೆ ಒಪ್ಪಿಸಿಕೊಂಡು ಬಿಡುತ್ತಿದ್ದಳು. ಇದು ಅವಳಿಗೆ ಆತ್ಮ ಸೈವೇದ್ಯವಾಗಿ ಅನುಭವವಾಗುತ್ತಿತ್ತೇ ಹೊರತು ಅನ್ಯಥಾ ಅಲ್ಲ. ಗಂಡನಿಗೆ ದ್ರೋಹ ಮಾಡುತ್ತಿದ್ದೇನೆಂಬ ಪ್ರಜ್ಞೆ, ಎಳ್ಳಿನಷ್ಟೂ ಅವಳನ್ನು ಕಾಡುವ ಸಾಧ್ಯತೆ

ಇರಲಿಲ್ಲ. ಏಡಿ ಹಿಡಿಯುವ ಸಂದರ್ಭದಲ್ಲಿ ನೀರಿಗೆ ಬೀಳಲಿದ್ದ ಪೀಂಚಲುವನ್ನು ರಕ್ಷಿಸಲು ಹೋದಾಗ ಮುಕುಂದಯ್ಯನ ಹಸ್ತ ಸ್ಪರ್ಶ ತನ್ನ ಬತ್ತಲೆಯದೆಗೆ ಆದಾಗ ಪೀಂಚಲುವಿಗೆ ಹಿತವಾಗಿ, ಆಪ್ಯಾಯಮಾನವಾಗಿ ಇತ್ತಾದರೂ ಮುಕುಂದಯ್ಯ ಮಾತ್ರ ನಿರ್ವಿಕಾರನಾಗಿಯೇ ಇದ್ದ. ಅವನಿಗೆ ಆ ಕ್ಷಣದಲ್ಲಿ ಅವಳನ್ನು ಕಾಪಾಡಬೇಕೆಂಬ ಮಾನವೀಯ ದೃಷ್ಟಿ ಇತ್ತೇ ಹೊರತಾಗಿ, ಜಾತಿ, ಕುಲ, ಹೆಣ್ಣು- ಎಂಬ ಭಾವನೆಗಳಿರಲಿಲ್ಲ. ಪೀಂಚಲು ಮತ್ತು ಮುಕುಂದಯ್ಯರ ನಡುವೆ ಚಿನ್ನಮ್ಮ' ನಿಗಾಗಿ ಸಖ್ಯ ಇನ್ನಷ್ಟು ಬಲಗೊಳ್ಳುತ್ತದೆ. ಚಿನ್ನಮ್ಮ, ಮುಕುಂದಯ್ಯರ ನಡುವೆ ಹಂಸದೂತಿಯಾಗಿ ಅವರಿಬ್ಬರ ಅನನ್ಯ ಪ್ರೇಮವನ್ನು ಮತ್ತಷ್ಟು ಗಟ್ಟಿಗೊಳಿಸುತ್ತಾಳೆ; ಅವರಿಬ್ಬರ ಗುಟ್ಟುಗಳ ರಕ್ಷಕಳೂ ಆಗುತ್ತಾಳೆ.

ಐತ-ಪೀಂಚಲು ಅವರದು ಆದರ್ಶದಾಂಪತ್ಯ. ಒಬ್ಬರನ್ನೊಬ್ಬರು ಎಡಬಿಡದೆ ಹೊಂದಿಕೊಂಡು ಹೋಗುವ ಅನ್ಯೋನ್ಯ ದಾಂಪತ್ಯದ ಪ್ರತೀಕವಾಗಿ ಇವರು ಕಾಣಿಸಿಕೊಳ್ಳುತ್ತಾರೆ. ಹೊಸ ದಾಂಪತ್ಯದಲ್ಲಿ ಕ್ಷಣದ ಅಗಲಿಕೆಯೂ ನೋವಿನ ಸಂಗತಿಯಾಗುತ್ತಿತ್ತು. ಒಬ್ಬರನ್ನೊಬ್ಬರು ಅನುಸರಿಸಿಕೊಂಡು ಬದುಕುವ ಇವರು ಮುಕುಂದಯ್ಯನಿಗೆ, " ಈ ಕಾಡಿನ ಹಿನ್ನೆಲೆಯಲ್ಲಿ, ಏಕಾಂತದಲ್ಲಿ ಆ ವಿರಳ ಪಕ್ಷಿಕೂಜನದ ಸಂಮೋಹಕತೆಯಲ್ಲಿ ಅವರಿಬ್ಬರೂ ಗಟ್ಟದ ತಗ್ಗಿನಿಂದ ಹೊಟ್ಟೆ ಪಾಡಿಗಾಗಿ ದುಡಿಯಲು ಬಂದಿದ್ದ ಬಲ್ಲವರ ಜಾತಿಯ ತಮ್ಮ ಬಡಕೂಲಿಯಾಳುಗಳಂತೆ ಕಾಣಿಸುತ್ತಿರಲಿಲ್ಲ. ಆ ತರುಣ ದಂಪತಿ ಪ್ರಪ್ರಾಚೀನ ಕಾಲದಲ್ಲಿ ಪೌರಾಣಿಕಯುಗದಲ್ಲಿ ದಂಡಕಾರಣ್ಯಕ್ಕೋ, ನೈಮಿಷಾರಣ್ಯಕ್ಕೋ ಕಾರ್ಯಾರ್ಥವಾಗಿ ಅವತರಿಸಿ ಅಲೆಯುತ್ತಿದ್ದಿರಬಹುದಾದ ಬಿಲ್ಲವೇಷದ ಶಿವ ಶಿವಾಣಿಯರಂತೆ ತೋರಿದರು." (ಮ.ಮ.ಪು-143) ಆದರೆ ಇಂತಹ ಅನ್ಯೋನ್ಯ ಸಂಬಂಧಗಳನ್ನು ಹಾಳು ಮಾಡಲು ಚೀಂಕ್ರನಂತಹ ಕಿಡಿಗೇಡಿಗಳು ಪ್ರಯತ್ನಿಸಿ ಐತನ ಮನಸ್ಸಿನಲ್ಲಿ ಅನುಮಾನದ ಬೀಜ ಬಿತ್ತುತ್ತಾರೆ. ಅತಿಯಾಗಿ ಪ್ರೀತಿಸುವ ಮನಸ್ಸುಗಳಿಗೆ ಅಲ್ಪ ಅಘಾತವೂ ಅಸಹನೀಯವಾಗಿ ಮತ್ತು ಅಪಾಯಕಾರಿಯಾಗಿ ಪರಿಣಮಿಸುತ್ತದೆ. ಇಂತಹ ಪರಿಸ್ಥಿತಿಗೆ ಕಾರಣ ಶೀಲ ಶಂಕೆಯಲ್ಲ! ಬದಲಾಗಿ ತನ್ನನ್ನು ನಿರ್ಲಕ್ಷಿಸಲಾಗುತ್ತಿದೆ ಎನ್ನುವ ಭಾವನೆ!! ಪ್ರೀತಿಸುವ ವ್ಯಕ್ತಿಗಳ ಮನಸ್ತತ್ವ ಇದಾಗಿರುತ್ತದೆ, ಅಷ್ಟೆ! ಗುಡಿಸಲಿಗೆ ಬಂದಾಗ ಪೀಂಚಲುವಿನ ಅನುಪಸ್ಥಿತಿ ಐತನ ಮನಸ್ಸನ್ನು ಕದಡುತ್ತದೆ. "ಬಿಡಾರದೊಳಗೆ ಹೆಜ್ಜೆ ಇಡುತ್ತಿದ್ದಂತೆ ಸವಿದನಿಯಿಂದ ಇದಿರುಗೊಂಡು ವಿನೋದವಾಗಿ ಮಾತನಾಡಿಸಿ, ಮೋಹಮಾಡಿ, ಮುದ್ದಾಡಿ ತಿನ್ನಲಿಕ್ಕೆ ಏನನ್ನಾದರೂ ಕೊಟ್ಟು ಆದರಿಸುತ್ತಾಳೆಂದು ನಿರೀಕ್ಷಿಸಿದ್ದವನಿಗೆ ಎದುರಾದ ಕತ್ತಲು, ನಿಶ್ಶಬ್ದತೆ, ಮುಚ್ಚಿದ ಬಾಗಿಲುಗಳು ಅವನನ್ನು ಅಣಕಿಸಿದ್ದೇ ಅಲ್ಲದೆ ಬೇರೆ ಕತೆ ಹೇಳುತ್ತಿರುವಂತೆನಿಸಿತು. ಮನಸ್ಸೆಲ್ಲ ಶೂನ್ಯವಾದಂತೆನಿಸಿತು. ಮಂಕು ಹಿಡಿದು ಏನು ಮಾಡಲೂ ತೋಚದೆ ಕುಳಿತು ಬಿಡುತ್ತಾನೆ. ಹಠಾತ್ತನೆ ಜಗತ್ತು ಅವನಿಗೆ ನಿಷ್ಠುರವಾದಂತೆನಿಸುತ್ತದೆ. ಬದುಕು ಬೂದಿಯಾದಂತೆನಿಸುತ್ತದೆ. ಆದರೆ ಇದೆಲ್ಲವೂ ಸ್ವಲ್ಪ ಕಾಲ. ಪೀಂಚಲು ಕಣ್ಣಿಗೆ ಕಾಣುತ್ತಿದ್ದಂತೆ ನಿರಾಸೆ, ಹತಾಶೆಗಳು ಮಾಯವಾಗುತ್ತವೆ. ಆಳವಾಗಿ ಪ್ರೀತಿಸುವ ಮನಸ್ಸುಗಳ ಹೊಯ್ದಾಟಗಳನ್ನು ಕುವೆಂಪು ಸೂಕ್ಷ್ಮವಾಗಿ ಚಿತ್ರಿಸುತ್ತಿದ್ದಾರೆ.

ಕಂಡ ಕ್ಷಣದಲ್ಲಿ ಗೆಲುವಾದ ಮನಸ್ಸು, ಹೊಸ ಸೀರೆ, ಮಲ್ಲಿಗೆ ಹೂವು, ಹೋಳಿಗೆಗಳು ಅವನಲ್ಲಿ ಕ್ಷಣಾರ್ಧದಲ್ಲಿ ಅನುಮಾನವನ್ನು ಹುಟ್ಟು ಹಾಕುತ್ತದೆ. ಪೀಂಚಲು ಜಾಣೆ ಐತನ ಒಳಗಿನ ಕುದಿ, ಆತಂಕ, ಅಸಮಾಧಾನ, ಅನುಮಾನಗಳನ್ನು ಅವೆಲ್ಲ ತನಗೆ ದೊರೆತ ರೀತಿಯನ್ನು ವಿವರಿಸಿ ಸಮಾಧಾನ ಪಡಿಸುತ್ತಾಳೆ. ಅವಲ ಮೈ ಸೋಂಕಿನಿಂದ ಐತ, ಪೀಂಚಲುವಿನ ನಡುವಿನ ದಟ್ಟವಾದ ಮಂಜಿನ ತೆರೆ ಕರಗಿ ಹೃದಯಗಳು ಗೆಲುವಾಗುತ್ತವೆ.

ಐತ, ಪೀಂಚಲು ನಡುವಿನ ದಾಂಪತ್ಯ ಆದರ್ಶಪೂರ್ಣವಾದದ್ದು. ಆರೋಗ್ಯಕರವಾದದ್ದು. ಗುತ್ತಿ-ತಿಮ್ಮಿಯರ ಪ್ರೀತಿಯೂ ಕೂಡ. ಆದರೆ ಗುತ್ತಿಗೆ ಇನ್ನೊಬ್ಬ ಪ್ರತಿಸ್ಪರ್ಧಿ ಇದ್ದು, ಕಡೆಗೆ ಗೆಲುವು ಇವನದೇ ಆಗುತ್ತದೆ, ಗುತ್ತಿ-ತಿಮ್ಮಿಯರ ಪ್ರೀತಿ ಅನೇಕ ಅಡ್ಡಿ, ಆತಂಕ, ಪ್ರತಿಭಟನೆಗಳನ್ನು ಎದುರಿಸಿ ಮುಂದೆ ಸಾಗುತ್ತದೆ. ಇವರಿಬ್ಬರ ಪ್ರಣಯ ಸಾಹಸದ ವಿವರಗಳು ಅತ್ಯಂತ ರೋಮಾಂಚಕಾರಿಯಾಗಿ ಚಿತ್ರಿತವಾಗಿವೆ. ಐತ-ಪೀಂಚಲುವಿನ ಆದರ್ಶ ದಾಂಪತ್ಯ, ಗುತ್ತಿ-ತಿಮ್ಮಿಯರ ಮೆಚ್ಚುಗೆಗೆ ಪಾತ್ರವಾಗುವುದೇ ಅಲ್ಲದೆ ಅವರಿಬ್ಬರಂತೆ ತಮ್ಮ ದಾಂಪತ್ಯವೂ ಆಗಬೇಕೆಂಬುದು ಗುತ್ತಿಯ ಸುಪ್ತಾಕಾಂಕ್ಷೆ "ತಿಮ್ಮಿಯ ಚಿತ್ರವನ್ನು ಕಲ್ಪಿಸಿಕೊಂಡು ಅವಳ ಅಂಗಾಂಗ ಸೌಂದರ್ಯ, ನಿಂತ ಭಂಗಿಗಳೆದುರು ಸೋತು ಅವಳನ್ನು ಕಾಣುವಾತುರದಲ್ಲಿ ರಾಗೋದ್ರೇಕದಿಂದಾಗಿ ವೇಗವಾಗಿ ಹೆಜ್ಜೆ ಹಾಕಿ ತಿಮ್ಮಿಯ ಮನೆಯ ಕಡೆ ನಡೆಯುತ್ತಾನೆ. ತಿಮ್ಮಿಯ ಬಯಕೆಗೆ ವಿರುದ್ಧವಾಗಿ ಬಚ್ಚನ ಜೊತೆ ಮದುವೆ ನಿಶ್ಚಯವಾಗಿದ್ದು, ಪ್ರತಿಭಟಿಸಲಾರದೆ, ನಿರಾಸೆ, ಹತಾಶೆ, ಅಸಹಾಯಕತೆಗಳಿಂದ ಅನ್ಯಮನಸ್ಕಳಾಗಿ ನಿಟ್ಟುಸಿರು ಬಿಡುತ್ತಿದ್ದ ತಿಮ್ಮಿಗೆ ಗುತ್ತಿಯ ಆಗಮನ ಸಂಭ್ರಮಾಶ್ಚರ್ಯಗಳಿಗೆ ದಾರಿಯಾಗುತ್ತದೆ. ಪರಿಸ್ಥಿತಿಯೊಂದಿಗೆ ರಾಜಿ ಮಾಡಿಕೊಳ್ಳಲು ಹೊರಟು ನಿಂತಿದ್ದ ತಿಮ್ಮಿಯಲ್ಲಿ ಗುತ್ತಿಯ ಆಗಮನ ಸಂಭ್ರಮಾಶ್ಚರ್ಯಗಳನ್ನು ಚಿಗುರೊಡೆಸುತ್ತದೆ. ಆದರೂ ತನ್ನ ಮತ್ತು ಗುತ್ತಿಯ ಮದುವೆ ಅಸಂಭಾವ್ಯವೆಂಬ ಭಾವನೆಯಿಂದ ಮನಸ್ಸು ಮತ್ತೆ ಮುದುಡುತ್ತದೆ. ಊಳಿಗಮಾನ್ಯ ವ್ಯವಸ್ಥೆಯಲ್ಲಿ ಜೀತ, ಮತ್ತು ಲೈಂಗಿಕ ಅಸಹಾಯಕತೆಗಳಿಗೆ ಮುಕ್ತಿಯೆಂಬುದೇ ಇಲ್ಲವಾಗುತ್ತದೆ. ದುಡಿಮೆಯನ್ನು ಒಡೆಯರಿಗೆ, ಜಮೀಂದಾರರಿಗೆ ಮುಡಿಪಿರಿಸಿ, ದುಡಿಯುತ್ತಾರೆ. ಸರ್ವಸ್ವವನ್ನು ಧಾರೆಯೆರೆದು ತಮ್ಮ ಪಾಲಿಗೆ ಬಡತನ, ಹಸಿವು, ಅಸಹಾಯಕತೆಗಳನ್ನೇ ಉಳಿಸಿಕೊಳ್ಳುತ್ತಾರೆ. ತಮ್ಮ ಹೆಂಡತಿಯರನ್ನೂ, ಹೆಣ್ಣು ಮಕ್ಕಳನ್ನೂ ಜೀತದಾಳುಗಳಾಗಿ ದುಡಿಸುತ್ತಾ, ಒಡೆಯರ ಕಾಮದತೀಟೆಗೆ ಬಲಿ ಗೊಡುವ ದುರದೃಷ್ಟಕ್ಕೆ ಒಳಗಾಗುತ್ತಾರೆ. ಮಡಿ, ಮೈಲಿಗೆ, ಅಸ್ಪೃಶ್ಯತೆಗಳು ಕಾಮ ಸಂಬಂಧವಾದ ಚಟುವಟಿಕೆಗಳಿಗೆ ಎಂದಿಗೂ ಅಡ್ಡಿಯಾಗುವುದಿಲ್ಲ! ಗದ್ದೆಯ ಬದುವೋ, ಹೊಟ್ಟಿನ ಬಣಬೆಯೋ ಅವರ ವಿಹಾರ ಸ್ಥಾನಗಳಾಗುತ್ತವೆ. ಯಾರ ಆಕ್ರಮಣವಾಗಲೀ, ದಣಿಗಳಾದ್ದರಿಂದ ಪ್ರಶ್ನಿಸುವುದಿಲ್ಲ; ಪ್ರತಿಭಟಿಸುವುದಿಲ್ಲ. ಇದಕ್ಕೆ ಸಹಾಯಕವಾಗುವಂತೆ ಅಸ್ಪೃಶ್ಯವರ್ಗಗಳಲ್ಲಿ ಶೀಲ ಹರಣವಾಗಲೀ ಲೈಂಗಿಕ ಸಂಬಂಧಗಳಾಗಲೀ ನೀತಿಯ ಪ್ರಶ್ನೆಯಾಗುವುದಿಲ್ಲ; ಸಮಸ್ಯೆಯಾಗುವುದಿಲ್ಲ. ದೈಹಿಕ ದಾಹ, ತೀಟೆಗಳು ತೀರಿದರೆ ಸಾಕು, ದಣಿಗಳಿಗೆ! ಅವರನ್ನು ಪಾಪ ಪ್ರಜ್ಞೆಯಾಗಲೀ, ಜಾತಿ ಭ್ರಷ್ಟತೆಯ ಭೀತಿಯಾಗಲೀ,

ಇಂತಹ ಸಂದರ್ಭಗಳಲ್ಲಿ ಕಾಡುವುದೇ ಇಲ್ಲ. ಈ ಹಿನ್ನೆಲೆಯಲ್ಲಿ ಸೇಸಿ, ತಿಮ್ಮಪ್ಪ ಹೆಗ್ಗಡೆ,ಕುಳವಾಡಿ ಸಣ್ಣನ ಮಗಳು ಪುಟ್ಟಿಯನ್ನು ಕೆಡಿಸಿದಾಗ ಲೇಖಕರಿಗೆ ಅನಿಸಿದ್ದು ಹೀಗೆ'' ಚೆನ್ನಾಗಿ ಮೀಯಿಸಿ, ಶುಚಿಯಾಗಿಟ್ಟು, ಒಳ್ಳೆಯ ಆಹಾರ ತಿನ್ನಿಸಿ ಸಾಕಿದ ಮನೆಯ ಚೀನೀ ನಾಯಿ, ಸಣುಬಿನ ಸಮಯಬಂದಾಗ ದದ್ದು ಹಿಡಿದು, ವಿಕಾರವಾಗಿದ್ದರೂ ಲೆಕ್ಕಿಸದೆ ಬೀದಿ ಸಂಗ ಬಯಸಿ ಸರಪಣಿ, ಕಾಂಪೌಡ್‌ಗಳಿಂದ ನುಣುಚಿಕೊಂಡು ಪೋಲಿ ಬೀಳುವಂತೆ ತಿಮ್ಮಪ್ಪ ಕೀಳು ಜಾತಿಯವರ ಹಟ್ಟಿ, ಬಿಡಾರ, ಗುಡಿಸಲು, ಜೋಪಡಿಗಳಲ್ಲಿಯೂ ಸುಖವನ್ನರಸಿ ಪಡೆದಿದ್ದ''- ಕುವೆಂಪುರವರ ಈ ಅನಿಸಿಕೆಯಲ್ಲಿ, ದೊಡ್ಡವರು ಎನಿಸಿಕೊಂಡವರಲ್ಲಿನ ಕ್ಷುದ್ರ ಕಾಮುಕತೆ ಅಥವಾ ವಿಕೃತ ಕಾಮದ ಸ್ವರೂಪ ಸ್ಪಷ್ಟವಾಗಿ ಗೋಚರಿಸುತ್ತದೆ. ದಣಿಗಳಾದವರು ತಮ್ಮ ಹೆಣ್ಣಾಳುಗಳನ್ನು ಲೈಂಗಿಕ ಆಕ್ರಮಣಗಳಿಗೆ ಒಳಗಾಗಿಸಿಕೊಳ್ಳುತ್ತಾರೆ. ಇಲ್ಲವೆ ಅವರು ಪ್ರೀತಿಸುವ ಗಂಡುಗಳಿಂದ ಅವರನ್ನು ವಂಚಿಸುತ್ತಾರೆ. ದೊಡ್ಡ, ಬೀರ ಗೌಡರ ಜೀತದಾಳಾಗಿ ಅವರಲ್ಲಿ ಸಾಲ ಮಾಡಿ ಅವರಿಗೆ ತನ್ನನ್ನು ಸಂಪೂರ್ಣವಾಗಿ ಮಾರಿಕೊಂಡಿದ್ದ. ಆದ್ದರಿಂದಲೇ ಒಡೆಯರ ಆಜ್ಞೆಯನ್ನು ಮೀರಲಾರದೆ ನಿರುಪಾಯನಾಗಿ ಈ ಮದುವೆಗೆ ತನ್ನ ಮಗಳನ್ನು ಒಪ್ಪಿಸಿದ್ದ. ಗೌಡರ ಸ್ವಾರ್ಥವೆಂದರೆ, ಜೀತ ಮಾಡಲು ಒಂದಾಳು ತಮಗಿರಬೇಕೆನಿಸಿದ್ದು. ತಮ್ಮದೇ ಕೇರಿಯ (ಹೊಲಗೇರಿಯ)ಒಂದು ಹೆಣ್ಣನ್ನು ಹೊರಗೆ ಕೊಟ್ಟರೆ, ತಮ್ಮ ಕೆಲಸಕ್ಕೆ ಒಂದಾಳು ಖೋತಾ ಆಗುತ್ತದೆ. ಇದನ್ನು ತಪ್ಪಿಸುವ ಹುನ್ನಾರವೇ, ತಿಮ್ಮಿಯನ್ನು ಬಚ್ಚನಿಗೆ ಮದುವೆ ಮಾಡಿಸಲು ಹೊರಟದ್ದು. ಹೆಣ್ಣುಮಗಳ ಮನಸ್ಸು, ತನ್ನ ಬಯಕೆಯ ವಿರುದ್ಧ ಮದುವೆಯಾದರೆ ನೋಯುವುದೆಂಬ ಪ್ರಜ್ಞೆಯಾಗಲೀ, ಮಾನವೀಯತೆಯಾಗಲೀ ಇಲ್ಲದೆ ತಿಮ್ಮಿ ಬಚ್ಚನನ್ನೇ ಮದುವೆಯಾಗಬೇಕೆಂದು ಕಟ್ಟಪ್ಪಣೆ ಮಾಡುತ್ತಾನೆ. ಒಂದು ವೇಳೆ ತಿಮ್ಮಿ ಸಾಹಸಮಾಡಿ ಗುತ್ತಿಯೊಂದಿಗೆ ಓಡಿ ಹೋಗಿ ಮದುವೆಯಾಗಿದ್ದರೆ ಎಳೆದು ತಂದು ತಾಳಿ ಕಟ್ಟಿಸುವ ರಾಕ್ಷಸನಾಗುತ್ತಿದ್ದ. ಕೀಳುಜಾತಿಯವರಿಗೆ ಆಯ್ಕೆಯ ಸ್ವಾತಂತ್ರ್ಯವಿದ್ದರೂ ಜೀತವ್ಯವಸ್ಥೆಯ ಕಪಿ ಮುಷ್ಟಿಯಲ್ಲಿ ಅವಕಾಶ ವಂಚಿತ ರಾಗುತ್ತಿದ್ದರು. ಆದರೆ ತಿಮ್ಮಿ- ಗುತ್ತಿಯರು ಮೊದಲಿಗೆ ಹೆದರಿದರೂ ಅವರ ನಡುವಿನ ಅದಮ್ಯ ಪ್ರೀತಿ ಯಾವುದೇ ಬಗೆಯ ಭೀತಿ ಸಂಕೋಲೆಗಳಿಗೆ ಹೆದರದೆ, ಪ್ರೀತಿಯನ್ನೇ ಆತ್ಮ ರಕ್ಷಣೆಯ ಗುರಾಣಿಯಾಗಿಸಿಕೊಂಡು ಚಿನ್ನಮ್ಮ- ಮುಕುಂದಯ್ಯ ಪೀಂಚಲು - ಐತರ ಒತ್ತಾಸೆ ಪ್ರಣಯ ಸಾಹಸಕ್ಕೆ ಸಜ್ಜಾಗುವಂತೆ ಮಾಡುತ್ತದೆ. ಮಕುಂದಯ್ಯ ಚಿನ್ನಮ್ಮ; ಗುತ್ತಿ-ತಿಮ್ಮಿ, ಈ ಎರಡು ಜೋಡಿಗಳ ಪ್ರಣಯ ಸಾಹಸದ ಕತೆಯೇ ಒಂದು ರೀತಿಯಲ್ಲಿ ಕಾದಂಬರಿಯಲ್ಲಿ ಪ್ರಮುಖ ಸಂಗತಿಯಾಗಿ ಕಾಣಿಸಿಕೊಳ್ಳುತ್ತದೆ. ಮುಕುಂದಯ್ಯ- ಚಿನ್ನಮ್ಮರು ಸಾಹಸಮಾಡಿ ಓಡಿ ಹೋದರೂ ಮತ್ತೆ ಮರಳಿ ಹಿರಿಯರ ಆರ್ಶೀವಾರ್ದದೊಂದಿಗೆ ಮದುವೆಯಾಗಿ ಪ್ರಧಾನ ಜೀವನ ಪ್ರವಾಹದೊಂದಿಗೆ ಬೆರೆತುಹೋಗುತ್ತಾರೆ. ಆದರೆ ಗುತ್ತಿ- ತಿಮ್ಮಿಯರ ಸಮಸ್ಯೆ ಸುಲಭವಾಗಿ ಪರಿಹಾರವಾಗುವುದಿಲ್ಲ. ಅಲ್ಲದೆ ಇವರಿಬ್ಬರ ಸಮಸ್ಯೆ ಇವರಿಗೇ ಸೀಮಿತವಾಗದೆ ಇಬ್ಬರು ಬಲಿಷ್ಠ, ಪ್ರತಿಷ್ಠಿತ ಗೌಡರುಗಳ ನಡುವಿನ ಪ್ರತಿಷ್ಠೆಗಳ ಘರ್ಷಣೆಯಾಗುತ್ತದೆ. ಗುತ್ತಿ- ತಿಮ್ಮಿಯರಿಗೆ

ಭರಮ್ಮೈ ಹೆಗ್ಗಡೆ ಆಶ್ರಯ ಕೊಡಲು ಮುಂದಾಗುವುದು, ಸಹಾನುಭೂತಿಯಿಂದಲ್ಲದೆ, ತಮಗೆ ದುಡಿಯಲು ಇನ್ನೊಂದು ಜೀತದಾಳು ಸುಲಭವಾಗಿ ಸಿಗುವುದಲ್ಲ ಎಂಬ ಸ್ವಾರ್ಥದಿಂದ. ಜೀತದಾಳುಗಳ ವಿಚಾರದಲ್ಲಿ ಸಿಂಬಾವಿ ಬೆಟ್ಟಳ್ಳಿಗಳ ನಡುವೆ ಒಂದು ಸ್ಪರ್ಧೆಯೇ ನಡೆಯುತ್ತಿತ್ತು. ಇದನ್ನೆಲ್ಲ ಗಮನಿಸಿದ್ದ ಗುತ್ತಿ, ಮೊದಲಿಗೆ ಆಶ್ರಯ ನೀಡಲು, ನಿರಾಕರಿಸಿದ ಭರಮ್ಮೈ ಹೆಗ್ಗಡೆ ಅವರ ಮನಸ್ಸನ್ನು ಕೆರಳಿಸುವಂತಹ ಸಂಗತಿಗಳನ್ನು, ಜಿದ್ದಿನ ಸ್ಪರ್ಧೆಯ ವಿಚಾರವನ್ನು ಹೇಳಿ, ಆಶ್ರಯ ಗಿಟ್ಟಿಸಿಕೊಳ್ಳುತ್ತಾನೆ. ತಿಮ್ಮಿ- ಗುತ್ತಿಯರು ಲೈಂಗಿಕ ವಿಚಾರಗಳಲ್ಲಿ ಅಪ್ರಬುದ್ಧರೂ ಅಲ್ಲ; ಅನನುಭವಿಗಳೂ ಅಲ್ಲ. ತಿಮ್ಮಿ ಭಾವ ' ಬಚ್ಚ' ನೊಡನೆ ಲೈಂಗಿಕ ಸಂಬಂಧವನ್ನು ಅನುಭವಿಸಿದ್ದರೆ. ಗುತ್ತಿ ಪುಟ್ಟಿಯೊಡನೆ ದೇಹ ಸಂಬಂಧವನ್ನು ಇರಿಸಿಕೊಂಡಿದ್ದ. ಆದರೂ ಏಕಾಂತದಲ್ಲಿ, ತಿಮ್ಮಿ- ಗುತ್ತಿಯರನ್ನು ಯಾವುದೋ ಸಂಕೋಚದ ತೆರೆಯೊಂದು ಕವಿಯುತ್ತಿತ್ತು.

ತಿಮ್ಮಿ- ಗುತ್ತಿಯರ ಸಾಹಸ, ಮುಕುಂದಯ್ಯ ಚಿನ್ನಮ್ಮರ ಸಾಹಸಕ್ಕಿಂತ ದೊಡ್ಡರಾದ್ಧಾಂತಕ್ಕೆ ದಾರಿ ಮಾಡುತ್ತದೆ. ಬೆಟ್ಟಳ್ಳಿಗೌಡರು ಅಷ್ಟು ಸುಲಭವಾಗಿ ರಾಜಿ ಆಗುವವರಲ್ಲ. ಅದೂ ಅಲ್ಲದೆ ತಮ್ಮ ಪ್ರತಿಷ್ಠೆಗೆ ಅವಮಾನವಾಗುವಂತೆ ಭರಮ್ಮೈ ಹೆಗ್ಗಡೆಯಲ್ಲಿ ಆಶ್ರಯ ಪಡೆದದ್ದು ಅವರನ್ನು ಮತ್ತಷ್ಟು ಕೆರಳಿಸುತ್ತದೆ. ತಿಮ್ಮಿ- ಗುತ್ತಿಯರನ್ನು ಹಿಡಿದು ತರಿಸಿ ಬೆತ್ತ ಪೂಜೆ ಮಾಡಿಸುತ್ತಾನೆ. ಆದರೂ ತಿಮ್ಮಿ- ಗುತ್ತಿಯರು ಪೀಂಚಲುವಿನ ಸಹಾಯದಿಂದ ಹೇಗೋಪಾರಾಗಿ, ಪರಾರಿಯಾಗಿ ಹೋಗುತ್ತ, ತಮ್ಮದೇ ಸ್ಥಿತಿಯಲ್ಲಿದ್ದ ಚಿನ್ನಮ್ಮ- ಮುಕುಂದಯ್ಯರನ್ನು ಸಂಧಿಸುತ್ತಾರೆ. ಪೀಂಚಲು ಐತರು ಆದರ್ಶ ಪ್ರೇಮದ ಬೆಲೆಯನ್ನು ತಿಳಿದಿದ್ದರು. ಅದಕ್ಕೆಂದೇ ಈ ಎರಡೂ ಜೋಡಿಗಳನ್ನು ಅಪಾಯಗಳಿಂದ ತಪ್ಪಿಸಿ ರಕ್ಷಿಸುತ್ತಾರೆ. ಅಲ್ಲದೆ ತಿಮ್ಮಿ-ಗುತ್ತಿಯರ ಪ್ರೀತಿ ಸಫಲವಾಗಬೇಕಾದರೆ ಇಲ್ಲಿನ ಗೌಡರುಗಳಿಂದ ಪಾರಾಗಿ ಭರಮ್ಮೈ ಹೆಗ್ಗಡೆಯ ಸಲಹೆಯಂತೆ, ಕಾನೂರು, ಮುತ್ತಳ್ಳಿಗೆ ದೇಶಾಂತರ ಹೋಗಿ ತಲೆ ಮರೆಸಿ ಕೊಳ್ಳಬೇಕೆಂಬ ಸಲಹೆಯೂ ಬರುತ್ತದೆ. ಅದರಂತೆ ಗುತ್ತಿ ತಿಮ್ಮಿಯೊಡನೆ ತುಂಗಾ ನದಿಯನ್ನು ದಾಟಿ ಅಜ್ಞಾತವಾಸಕ್ಕೆ ಹೊರಡುತ್ತಾನೆ.

ಮೇಲಿನ ಈ ಮೂರೂ ಸಂಬಂಧಗಳಲ್ಲಿ ಮಾನವೀಯತೆಯ ನೆಲೆಗಳಿದ್ದರೆ, ಉಳಿದ ಲೈಂಗಿಕ ಸಂಬಂಧಗಳು ಕಾಮ ವಿಕಾರ, ವ್ಯಭಿಚಾರ, ಅತ್ಯಾಚಾರಗಳ ರೂಪದಲ್ಲಿದ್ದು ಕ್ರೌರ್ಯ, ಹಿಂಸೆ, ಸ್ವಾರ್ಥಗಳನ್ನು ಒಳಗೊಂಡಿವೆ. ವೆಂಕಟಪ್ಪ- ನಾಗಕ್ಕ- ನಾಗತ್ತೆ, ದೇವಯ್ಯ- ದೇವಮ್ಮ- ಕಾವೇರಿ; ಕಾವೇರಿ- ಸಾಬಿಗಳು, ಚೀಂಕ್ರ-ಪಿಜಿಣ- ಅಕ್ಕಣಿ ಮುಂತಾದವರ ಸಂಬಂಧಗಳಲ್ಲಿ ನಿಜವಾದ, ಅನನ್ಯವಾದ ಪ್ರೀತಿಗಿಂತ ಕೇವಲ ಕಾಮ ವಿಕೃತಿ, ಸೆಳೆತಗಳನ್ನಷ್ಟೇ ಕಾಣುತ್ತೇವೆ. ಕ್ಷಣಿಕ ದೈಹಿಕ ತೃಪ್ತಿ ಇಲ್ಲವೇ ದೈಹಿಕ ಆಕರ್ಷಣೆ ಇವಿಷ್ಟೇ ಇವುಗಳ ಪ್ರಚೋದನೆಯಲ್ಲಿ. ಇದರ ಜೊತೆಗೆ ಲಾಭದ ಸ್ವಾರ್ಥ!! ನಾಗತ್ತೆ ಬಾವಿಕೊಪ್ಪದ ನಾಗಣ್ಣನ ತಂದೆಗೆ ಸೀರುಡಿಕೆಯ ಮೂಲಕವಾಗಿ ಹೆಂಡತಿಯಾದವಳು. ಬಾವಿಕೊಪ್ಪದ ನಾಗಣ್ಣನಿಗೆ ಬಡ ಒಕ್ಕಲಿಗನ ಮಗಳಾದ ನಾಗಕ್ಕನನ್ನು ತಂದು ಮದುವೆ ಮಾಡಿಸಿದಳು. ಇವನು ತೀರಿಕೊಂಡಾಗ ನಾಗತ್ತೆ, ನಾಗಕ್ಕನ ಪ್ರಾಯ ರೂಪಗಳನ್ನು ಬಂಡವಾಳವಾಗಿಸಿ ಹಣ ಸಂಪಾದನೆಗೆ ಆಲೋಚಿಸುತ್ತಾಳೆ. ದೊಡ್ಡ ದೊಡ್ಡ ಗೌಡರ, ಶ್ರೀಮಂತರ

ಜೊತೆಗೆ ಸೀರುಡಿಕೆ ಮಾಡಿ ಅದರಿಂದ ಆರ್ಥಿಕ ಭದ್ರತೆಯನ್ನು ನಿರೀಕ್ಷಿಸುತ್ತಾಳೆ. ಭರಮೈ ಹೆಗ್ಗಡೆ, ಕಲ್ಲಯ್ಯ ಗೌಡರು, ಎಲ್ಲ ಆಗಿ ಕಡೆಗೆ ವೆಂಕಪ್ಪ ನಾಯಕರ ಕಡೆಗೆ ವಾಲುತ್ತದೆ. ಹೆಂಡತಿಯನ್ನು ಕಳೆದು ಕೊಂಡು ಒಂಟಿ ಜೀವನದಿಂದ ಬೇಸತ್ತ ಮನುಷ್ಯ ನಾಗತ್ತೆಯ ಪ್ರಯತ್ನಗಳ ಪರಿಣಾಮವಾಗಿ ನಾಗಕ್ಕನ ರೂಪ, ಸುಪ್ತಕಾಮನೆಗಳಿಗೆ ಕೆರಳಿ ಸ್ಪಂದಿಸುತ್ತಾನೆ. ಆದರೆ ನಾಗಕ್ಕನನ್ನು ಒಪ್ಪಿಸುವುದು ಅಸಾಧ್ಯವಾದರೂ ಹಠ ಬಿಡದೆ, ನಾಗತ್ತೆ ಮಾಟ, ಮಂತ್ರ ಜಕಣಿ ಮೊದಲಾದವುಗಳ ಮೂಲಕ ಒಪ್ಪಿಕೊಳ್ಳುವಂತೆ ಪ್ರಯತ್ನಿಸುತ್ತಾಳೆ. ನಾಗತ್ತೆಯ ದುರಾದೃಷ್ಟಕ್ಕೆ ಇವುಯಾವುವೂ ನಾಗಕ್ಕನ ಮೇಲೆ ಪ್ರಭಾವ ಬೀರುವುದಿಲ್ಲ. ಇದರಿಂದಾಗಿ ನಾಗತ್ತೆಯ ಕಾಟ, ಕಿರುಕುಳಗಳು ಹೆಚ್ಚುತ್ತವೆ., ಪಂಚ್ರೋಳಿ ಕೈಯಲ್ಲಿ ಸಿಕ್ಕ ಜಕಣಿಯಂತಾಗುತ್ತಾಳೆ. ಸಿಂಬಾವಿ. ಬೆಟ್ಟಳ್ಳಿ, ಹೂವಳ್ಳಿ- ಹೀಗೆ, ತವರನ್ನೂ ಸೇರದಂತೆ. ತರತರದ ಅಶ್ಲೀಲ ದೂರುಗಳನ್ನೂ ಹಬ್ಬಿಸುತ್ತಾ, ಅವಳನ್ನು ವಿಕ್ರಯಿಸುವ ದನದಂತೆ ಊರಿಂದ ಊರಿಗೆ ಸಾಗಿಸುತ್ತ, ಮನೆಯಿಂದ ಮನೆಗೆ ಕೊಂಡೊಯ್ಯುತ್ತಿದ್ದಳು. ಅಂತೂ ಇಂತೂ ಮಾಡಿ ವೆಂಕಣ್ಣನನ್ನು ಕೊನೆಗೆ ಬಲಿಪಶುವಾಗಿಸಿಯೇ ಬಿಡುತ್ತಾಳೆ.

ಪ್ರಾಯದ ತನ್ನ ಸೊಸೆಯ'ಗಂಡಸತ್ತ ಮುಂಡೆತನ' ವನ್ನು ಪರಿಹರಿಸಿ ಉದ್ಧಾರ ಮಾಡಲು ನಾಲ್ಕಾರು ಕಡೆ ತಾನು ನಡೆಸಿದ ಪ್ರಯತ್ನಗಳು ನಾಗಕ್ಕನ ಹಠದಿಂದ ವ್ಯರ್ಥವಾಗಿದ್ದರಿಂದ 'ವೆಂಕಟಣ್ಣ' ನಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲದಂತಹ ರೀತಿಯ ಉಪಾಯಗಳನ್ನು ಆಲೋಚಿಸಿದ್ದಳು. ಹಿಂದಿನ ವರುಷ ಗದ್ದೆ ಕೆಲಸಕ್ಕೆಂದು ಹೂವಳ್ಳಿ ಮನೆಯಲ್ಲಿದ್ದು ವೆಂಕಟಣ್ಣನ ಮಗಳು ಚಿನ್ನಮ್ಮನ ಸ್ನೇಹದ ಅನುಭವ ಪಡೆದದ್ದರಿಂದ ಅಲ್ಲಿ ನಾಗಕ್ಕನ ಮನಸ್ಸಿನ ಜಾಡನ್ನು ಹಿಡಿದು ತನ್ನರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಯಿತೆಂದು ನಾಗತ್ತೆಗೆ ಸಂತೋಷವಾಗುತ್ತದೆ. ವೆಂಕಟಣ್ಣ ಅಥವಾ ವೆಂಕಟಪ್ಪನೂ ನಾಗತ್ತೆಯ ತಂತ್ರಕ್ಕೆ ಸುಲಭವಾಗಿ ಗ್ರಾಸವಾಗುತ್ತಾನೆ. 'ದೆಯ್ಯದ ಬಲಿ' ನೆಪದಲ್ಲಿ ಊರ ಮಂದಿಗೆ ಊಟಕ್ಕೆ ಹೇಳುತ್ತಾನೆ. ಅದೇ ದಿನ ರಾತ್ರಿ ನಾಗತ್ತೆ, ನಾಗಕ್ಕ, ವೆಂಕಟಪ್ಪರ ಸೀರುಡಿಕೆ ಏರ್ಪಡಿಸುತ್ತಾಳೆ. ಚೀಂಕ್ರ-ಪಿಜಿಣ- ಅಕ್ಕಣಿಯರದು ತ್ರಿಕೋಣ ಪ್ರೀತಿಯ ಸಂಬಂಧ. ಚೀಂಕ್ರ ಅಕ್ಕಣಿಯ ಸೆಳೆತಕ್ಕೆ ಒಳಗಾಗಿದ್ದ ತನಗೆ ಹೆಂಡತಿ ಇದ್ದರೂ ಅವಳನ್ನು ಕ್ರೂರವಾಗಿ ಹಿಂಸಿಸುತ್ತ,ಮೇಲಿಂದ ಮೇಲೆ ಲೈಂಗಿಕ ಆಕ್ರಮಣಕ್ಕೆ ಗುರಿ ಮಾಡುತ್ತಾ ಏಳು ಸಲ ಬಸಿರಿಯಾಗುವಂತೆ ಮಾಡುತ್ತಾನೆ. ಅವನದು ವಿಕೃತ ಕಾಮ. ಹೆಂಡತಿ ಎನ್ನುವ ಪ್ರೀತಿಯಾಗಲೀ, ಅವಳ ನೋವು, ನರಳಿಕೆಗೆ ಸಹಾನುಭೂತಿಯಾಗಲೀ ಇಲ್ಲ. ತುಂಬು ಬಸಿರಿಯನ್ನು ದುಡಿಯಲು ದೂಡುತ್ತಾನೆ. ಸದಾ ಕುಡಿತಗಳಲ್ಲಿ ಮೈ ಮರೆತು ಮಕ್ಕಳ ಕಡೆ, ಮನೆಕಡೆ ಲಕ್ಷ್ಯವಿಲ್ಲದೆ, ಇಡೀ ಕುಟುಂಬವೇ ಸವೆಯುವಂತೆ ಮಾಡುತ್ತಾನೆ. ತಾನೇ ತನ್ನ ಹೆಂಡತಿಯ್ನು ಹಿಂಸಿಸಿ ಕೊಲ್ಲುತ್ತಾನೆ. ಪಿಜಿಣನ ಹೆಂಡತಿ ಅಕ್ಕಣಿ- ಚೀಂಕ್ರನ ಮಕ್ಕಳ ಅನಾಥ ಸ್ಥಿತಿಗೆ ಮರುಗಿ, ಅವರ ಬಗ್ಗೆ ಕಾಳಜಿ ವಹಿಸುತ್ತಾಳೆ. ಆದರೆ ಅಕ್ಕಣಿಯ ದುರಂತವೆಂದರೆ ಸದಾ ರೋಗದಿಂದ ನರಳುತ್ತಾ ಬಿದ್ದಿದ್ದ ಗಂಡನ ದೇಹಸುಖವಾಗಲೀ, ಮಕ್ಕಳ ಸುಖವಾಗಲೀ ಅವಳಿಗೆ ಲಭ್ಯವಿರಲಿಲ್ಲ. ಬಯಸಿದ್ದರೆ ಅವಳು ಬೇರೆ ಯಾವ ಪುರುಷನ ಸಹವಾಸಕ್ಕಾದರೂ ಹೋಗ ಬಹುದಿತ್ತು. ಅವರ ಜಾತಿಯಲ್ಲಿ ಇದಕ್ಕೆ ಯಾವ ನೈತಿಕ ನಿರ್ಬಂಧವೂ

ಇರಲಿಲ್ಲ. ಆದರೂ ತನ್ನನ್ನು ನಿಯಂತ್ರಿಸಿ ಕೊಂಡು ಮಾನವೀಯ ದೃಷ್ಟಿಯಿಂದ ರೋಗಿ ಗಂಡನ ಸೇವೆ ಮಾಡುತ್ತಿದ್ದವಳ ಮೇಲೆ ಚೀಂಕ್ರನ ದೃಷ್ಠಿ ಬೀಳುತ್ತದೆ. ಆದರೆ ಅಕ್ಕಣಿ ಚೀಂಕ್ರನನ್ನು ಅವನು ಮಾಡುತ್ತಿದ್ದ ಆರ್ಥಿಕ ಸಹಾಯಗಳಿಗೆ ಕೃತಜ್ಞತೆಯನ್ನು ತಳೆದಿದ್ದಳೇ ಹೊರತು ಅವನ ಬಗ್ಗೆ ಯೋಚಿಸಿರಲಿಲ್ಲ, ಅವನನ್ನು ಬಯಸಿಯೂ ಇರಲಿಲ್ಲ. ಮೊದ ಮೊದಲು ಸಂಯಮದಿಂದಲೇ ಇದ್ದಳು. ಪಿಜಿಣ, ಹೆಂಡತಿ ಚೀಂಕ್ರನ ಮಕ್ಕಳ ಸೇವೆಯಲ್ಲಿ ಸಂತೋಷ ಪಡುತ್ತಿದ್ದುದನ್ನು ನೋಡಿ ತಾನೂ ಹಿಗ್ಗಿದ. ಹೆಂಡತಿಯ ಬಗ್ಗೆ ಕೃತಜ್ಞತಾ ಭಾವ ತುಂಬಿ ಬರುತ್ತಿತ್ತು. ಅವಳ ಸಂತೋಷ, ಕೊಡುತ್ತಿದ್ದ (ಒಮ್ಮೊಮ್ಮೆ) ದೇಹಸುಖದಿಂದ ಮಕ್ಕಳಾಗಬಹುದೆಂಬ ಭರವಸೆಯೂ ಅವನ ಹಿಗ್ಗಿನೊಂದಿಗೆ ಸೇರುತ್ತಿತ್ತು.

ಅಕ್ಕಣಿ ಉದ್ದೇಶ ಪೂರ್ವಕವಾಗಿ ಚೀಂಕ್ರನ ಸಹವಾಸಕ್ಕೆ ಹೋಗದಿದ್ದರೂ, ನಿರಂತರವಾಗಿ ಮಾಡುತ್ತಿದ್ದ ಸಹಾಯ, ಸಾಮೀಪ್ಯಗಳು, ಅತಿ ಪರಿಚಯಗಳು, ಸಲುಗೆಗಳು, ಚೀಂಕ್ರನ ಕೂಣಿಗೆ ಬೀಳಲು ಪ್ರಚೋದನೆಗಳಾದವು. ಕ್ರಮೇಣ ಚೀಂಕ್ರ- ಅಕ್ಕಣಿಯರ ನಡುವೆ ಲೈಂಗಿಕ ಆಕರ್ಷಣೆ ದಟ್ಟವಾಯಿತು. ಆದರೆ ಚೀಂಕ್ರನ ಕಡೆಗಿನ ಸೆಳೆತ ಅಕ್ಕಣಿಯನ್ನು, ಗಂಡನ ಸೇವೆಯಿಂದ ವಂಚಿಸಲಿಲ್ಲ. ಮೊದಲಿನಂತೆ ಅವನ ಬಗ್ಗೆ ಕಳಕಳಿ, ಶುಶ್ರೂಷೆಗಳು ಮುಂದುವರೆದವು. ದಯೆ, ಕರುಣೆ, ಅನುಕಂಪಗಳು ಅವರಿಬ್ಬರ ದಾಂಪತ್ಯವನ್ನು ಗಟ್ಟಿಗೊಳಿಸಿ ಉಳಿಸಿತ್ತು. ಕೃಶನೂ, ಅಶಕ್ತನೂ ರೋಗಿಷ್ಠನೂ ಆದ ಗಂಡನಿಂದ ಬಲಿಷ್ಠ ಹೆಣ್ಣೊಬ್ಬಳು ಬಯಸುವ ಲೈಂಗಿಕ ತೃಪ್ತಿ ಸಿಗದಾದಾಗ, ಸಂಯಮವೂ ಜಾರಿ, ಸುದೃಢ ಪುರುಷನ ತೆಕ್ಕೆಯ ಆಮಿಷಕ್ಕೆ ಒಳಗಾಗುವುದು ಸ್ವಾಭಾವಿಕವೆಂಬಂತೆ, ಅಕ್ಕಣಿ ಚೀಂಕ್ರನ ದೇಹ ಸ್ಪರ್ಶಕ್ಕೆ ಮತ್ತೆ ಮತ್ತೆ ಒಲಿದು ಸಾರುತ್ತಿದ್ದಳು. ಇವರಿಬ್ಬರ ಸಂಬಂಧ ಪಿಜಿಣನಿಂದ ಮರೆಯಾಗಿ ಉಳಿಯಲು ಸಾಧ್ಯವಾಗಲಿಲ್ಲ. ಆದರೆ ಪಿಜಿಣ ನಿಷ್ಠುರವಾಗಿ ಅವಳನ್ನು ನಿರ್ಬಂಧಿಸದೆ, ತಾನು ಬದುಕಿರುವವರೆಗಾದರೂ ಮರ್ಯಾದೆಯಿಂದಿರಲು ಬೇಡಿಕೊಳ್ಳುತ್ತಾನೆ. ಅಕ್ಕಣಿ ಗಂಡನ ದಯಾರ್ದ್ರಸ್ಥಿತಿ, ಚೀಂಕ್ರನ ಅದಮ್ಯ ಲೈಂಗಿಕ ಸೆಳೆತಗಳ ನಡುವೆ ಸಿಕ್ಕು ಹೊಯ್ದಾಡುತ್ತಾಳೆ. ರೋಗಿಷ್ಠ ಗಂಡನನ್ನು ತೊರೆದು ತನ್ನೊಂದಿಗೆ ಓಡಿಹೋಗಲು ಚೀಂಕ್ರ ಸಲಹೆ ನೀಡಿದರೂ ವಿಚಲಿತಳಾಗದೆ ಉಳಿಯುತ್ತಾಳೆ. ಗಂಡನ ಬಗ್ಗೆ ಕರುಣೆ ಒಂದೆಡೆಯಾದರೆ, ಚೀಂಕ್ರನ ಸಣ್ಣತನಗಳ ಅರಿವು ಮತ್ತೊಂದೆಡೆ ಅವಳನ್ನು, ಗಂಡ ಎಷ್ಟೇ ರೋಗಿಷ್ಠನಾದರೂ 'ದಾಂಪತ್ಯ' ಸಂಬಂಧವನ್ನು ಉಳಿಸಿಕೊಳ್ಳುವಂತೆ ಮಾಡುತ್ತದೆ. ಪಿಜಿಣನಿಂದ ದೈಹಿಕ ಸುಖ, ಸಂತೃಪ್ತಿಗಳು ಇಲ್ಲವಾದರೂ ಮಾನವೀಯತೆಯ ಎಳೆಯೊಂದು ಅವಳನ್ನು ಕುಟುಂಬಕ್ಕೆ, ರೋಗಿಷ್ಠ ಗಂಡನಿಗೆ ಕಟ್ಟುಬೀಳುವಂತೆ ಮಾಡುತ್ತದೆ, ಚೀಂಕ್ರನ ಹೋಲಿಕೆಯಲ್ಲಿ, ಪತ್ನಿ ನಿಷ್ಠೆಯ ವಿಚಾರದಲ್ಲಿ ಪಿಜಿಣನೇ ಸಾವಿರಪಾಲು ಮೇಲೆನಿಸುತ್ತದೆ. ಪಿಜಿಣನಿಂದ ಎಂದೂ ನೊಂದವಳಲ್ಲ ಅವನ ಸಾತ್ವಿಕತೆಯನ್ನು 'ಷಂಡತನ'ವೆಂದು ಲೇವಡಿ ಮಾಡಿದರೂ ಅದೇ ಅವನ ದೊಡ್ಡಗುಣವೆಂದು ಬಲ್ಲವಳಾಗಿದ್ದಳು. ತನಗೆ ದೇಹಸುಖ ನೀಡುವಲ್ಲಿರುವ ಅಸಮರ್ಥತೆ ಹೊರತಾಗಿ, ಪಿಜಿಣನಲ್ಲಿ ಬೇರಾವ ದುರ್ಗುಣಗಳೂ ಇರಲಿಲ್ಲ. ಅಲ್ಲದೆ ಅವಳ ಸುಖಕ್ಕೆ ಮತ್ತಾವ ಕೊರತೆಯೂ ಇರಲಿಲ್ಲ.

ಹೀಗಿರುವಾಗ ಪಿಜಿಣನನ್ನು ಹಿಯಾಳಿಸುವುದಾಗಲೀ, ಅವನ ಅಸಮರ್ಥತೆಗೆ ಬೇಸರ ಪಟ್ಟು ಕೊಳ್ಳುವುದಾಗಲೀ ಅಕ್ಕಣಿಗೆ ಸಾಧ್ಯವಿರಲಿಲ್ಲ. ಹೀಗಿರುವಾಗ ಅವನನ್ನು ಅನುಮಾನಿಸುವುದೇಕೆ? ಎಂಬುದೇ ಅವಳ ಅಂತರಂಗದ ಪ್ರಶ್ನೆಯಾಗಿತ್ತು. ಈ ಹಿನ್ನೆಲೆಯ ಆಲೋಚನೆಯಲ್ಲಿ ಚೀಂಕ್ರನ ಸಲಹೆ ಅವಳಿಗೆ ಸಂತಸಕ್ಕಿಂತ, ಆಕ್ರೋಶವನ್ನು ತರಿಸಿತು. ರೌದ್ರಾವತಾರದೊಂದಿಗೆ ಚೀಂಕ್ರನ ಮುಖದ ನೀರಿಳಿಸಿದಳು. ಅಲ್ಲದೆ ಅವನೊಂದಿಗೆ ಮಾತೂ ನಿಂತು ಹೋಯಿತು. ಆದರೆ ಚೀಂಕ್ರ ತನಗಾದ ಅವಮಾನಕ್ಕೆ ಸೇಡು ತೀರಿಸಿಕೊಳ್ಳುವಂತೆ, ಮತ್ತು ತಮ್ಮಿಬ್ಬರ ನಡುವೆ ಅಡ್ಡಗೋಡೆಯಂತೆ ಇರುವ ಪಿಜಿಣನನ್ನು ಇಲ್ಲವಾಗಿಸುವಂತೆ, ಉಪಾಯದಿಂದ, ಧೂರ್ತಬುದ್ಧಿಯಿಂದ ಪಿಜಿಣನನ್ನು ಕಡೆಗೂ ಸಾಯಿಸುತ್ತಾನೆ.

ದೇವಮ್ಮ-ದೇವಯ್ಯರ ದಾಂಪತ್ಯದ ಚೌಕಟ್ಟಿನಲ್ಲಿನ ಲೈಂಗಿಕ ಬದುಕು, ಪಾದ್ರಿ, ಪಾದ್ರಿಯ ಮಗಳ ಪ್ರವೇಶವಾಗುವವರೆಗೂ ಸುಗಮವಾಗಿದ್ದು, ನಂತರ ದಾಂಪತ್ಯದಲ್ಲಿ ಬಿರುಕು ಬಿಟ್ಟು'ವಿರಸ' ಉಂಟಾಗುತ್ತದೆ. ಈ ವಿರಸಕ್ಕೆ ಇಬ್ಬರ ನಡುವಿನ ವಿಚಾರ ಭೇದಗಳೂ, ನಂಬಿಕೆಗಳೂ ಒಂದು ನೆಲೆಯ ಕಾರಣವಾದರೆ, ಪಾದ್ರಿ ಮಗಳ ಜೊತೆಗಿನ ಸ್ನೇಹ ಮತ್ತೊಂದು ನೆಲೆಯ ಕಾರಣವಾಗುತ್ತದೆ. ಆದರೆ ಈ ವಿರಸವೂ ಗಂಭೀರವಾದುದೇನೂ ಅಲ್ಲ. ಹೆಂಡತಿಯನ್ನು ಪ್ರಾಮಾಣಿಕವಾಗಿ ದ್ವೇಷಿಸಲು ಬಲವಾದ ಕಾರಣವಿಲ್ಲವಾದರೂ ತನ್ನ ಅವಳ ನಡುವೆ ವಿಚಾರ ಸಂಘರ್ಷ, ನಂಬಿಕೆಗಳ ಘರ್ಷಣೆ ಇವುಗಳಿಂದಾಗಿ ಹೆಂಡತಿಯಿಂದ ವಿಮುಖನಾಗುತ್ತಾನೆಯೇ ಹೊರತು ದ್ವೇಷಿಸುವುದಿಲ್ಲ. ಅವನ ವಿರೋಧವಿರುವುದು ಅವಳ ಬಗ್ಗೆ ಅಲ್ಲ; ಅವಳ ಆಚಾರ, ವಿಚಾರ, ಮಡಿ, ಮೈಲಿಗೆ, ಅಂಧ ವಿಶ್ವಾಸಗಳ ಬಗ್ಗೆ! ವಸಾಹತು ಸಂಸ್ಕೃತಿ, ಆಧುನಿಕ ಬದುಕಿನ ರೀತಿ- ರಿವಾಜುಗಳಿಗೆ ಮಂತ್ರಮುಗ್ಧನಾಗಿದ್ದವನಿಗೆ, ಪಾದ್ರಿ ಕುಟುಂಬದ ಹೋಲಿಕೆಯಲ್ಲಿ ತನ್ನ ಕುಟುಂಬ, ತನ್ನ ಹೆಂಡತಿ ಎಲ್ಲವೂ ಅನಾಗರಿಕವಾಗಿ ಕಾಣುತ್ತಿತ್ತು. ಆದ್ದರಿಂದ ಅವನ ಕುಟುಂಬವೂ ಅವರ ಕುಟುಂಬದಂತೆ ಪರಿವರ್ತಿತವಾಗಬೇಕೆಂಬ ಅದಮ್ಯ ಬಯಕೆಯೇ, ಅವನ ಅಸಮಾಧಾನಕ್ಕೆ ಕಾರಣವಾಗುತ್ತದೆ. ಆಧುನಿಕ ಬದುಕಿನ ಭಾಗವಾದ'ಕಾಫಿ'ಗಾಗಿ ಅಂತಕ್ಕ ಸೆಟ್ಟಿಯು ಓಟ್ಲಿಗೆ ಬಿದ್ದವನು ಕ್ರಮೇಣ ಅಂತಕ್ಕನ ಮಗಳ ಆಕರ್ಷಣೆಗೂ ಬೀಳುತ್ತಾನೆ. ದೇವಯ್ಯನಂತಹ ದೊಡ್ಡ ಕುಟುಂಬದ ವ್ಯಕ್ತಿಯ ಜೊತೆಗಿನ ಸ್ನೇಹ ಪ್ರತಿಷ್ಠೆಯ ವಿಚಾರವಾಗಿದ್ದುದರಿಂದ, ಅಂತಕ್ಕನ ಬೆಂಬಲವೂ ಸಿಗುತ್ತದೆ ಅಲ್ಲದೆ ಆ ಸಮಾಜದಲ್ಲಿ ದೇವಯ್ಯನಂತಹ ಗೌಡರಿಗೆ, ಒಡೆಯರಾಗಿದ್ದವರಿಗೆ ವಿವಾಹದ ಹೊರಗಿನ ಸಂಬಂಧಗಳು ನಿಷಿದ್ಧವೂ ಆಗಿರಲಿಲ್ಲ; ನಿರ್ಬಂಧಿತವೂ ಆಗಿರಲಿಲ್ಲ. ಅಲ್ಲದೆ ಹೊಸದಾಗಿ ವೇಷಾಂತರ, ರೂಪಾಂತರ ಗೊಂಡ ದೇವಯ್ಯ ಆಗಿನ ಆ ಪ್ರದೇಶದ ಹೆಣ್ಣು ಮಕ್ಕಳ ಮನಸೂರೆ ಗೊಳಿಸುವುದರಲ್ಲಿ ಆಶ್ಚರ್ಯವಿರಲಿಲ್ಲ ಗಂಡನ ದೃಷ್ಟಿಯಿಂದಲೂ, ಹೆಣ್ಣಿನ ದೃಷ್ಟಿಯಿಂದಲೂ ಪರಸ್ಪರ ಸೆಳೆತಕ್ಕೆ ಒಳಗಾಗುವುದು ಅಪರಾಧವಾಗಿರಲಿಲ್ಲವಾಗಿ, ಅಂತಕ್ಕನ ಮಗಳು ದೇವಯ್ಯನಂತಹ ಸುಂದರ, ಸುದೃಢ ಪುರುಷರನ್ನು ಮೆಚ್ಚುವುದು ಸಹಜವಾಗಿತ್ತು. ದೇವಯ್ಯನ ಸ್ನೇಹದ ತೀವ್ರತೆ ಅಂತಕ್ಕನ ಮಗಳು ಕಾವೇರಿಯಲ್ಲಿ ಶಾಶ್ವತ ಬೆಸುಗೆಯ ಭ್ರಮೆಯನ್ನು ಮೂಡಿಸುತ್ತದೆ. ಆದರೆ

ಆಕರ್ಷಣೆ, ಬಂಧವಾಗಿ, ಬೆಸುಗೆಯಾಗಿ, ಸಾಮಾಜಿಕವಾಗಿ ಒಪ್ಪಿತವಾಗುವಲ್ಲಿ ಮಾತ್ರ ಜಾತಿ, ಕುಲಗಳು ಅಡ್ಡಿಯಾಗುತ್ತವೆ. ಅಸ್ಪೃಶ್ಯರಾದ ಆಳು ಮಕ್ಕಳ ವಿಚಾರವೇ ಬೇರೆ!! ಒಮ್ಮೆ ಗುತ್ತಿ ಕಾವೇರಿಯ ಓಟ್ಲು ಮನೆಗೆ ಬಂದಾಗ ಅವನನ್ನು ಅವಳು ಬೆಕ್ಕಸಬೆರಗಾಗಿ ನೋಡುತ್ತಾಳೆ. ಅವನು ಜಾತಿಯಲ್ಲಿ ಹೊಲೆಯನಾದ್ದರಿಂದ ನೋಡುವುದರಲ್ಲಿ ಅಭ್ಯಂತರವಿಲ್ಲ. ಆದರೆ ಪ್ರೀತಿಗೆ, ಮದುವೆಗೆ ಮಾತ್ರ ಅಸ್ಪೃಶ್ಯತೆ ದೊಡ್ಡ ತೊಡಕಾಗುತ್ತದೆ. ಆದ್ದರಿಂದ ಕಾವೇರಿ ತನ್ನ ವರ್ಗಕ್ಕೆ ಸೇರದಿರುವ ಸ್ಫುರದ್ರೂಪಿ ಗಂಡು ಪ್ರಾಣಿಯನ್ನು, ಒಂದು ಮನೋಹರವಾದ ಪಕ್ಷಿಯನ್ನೋ ಒಂದು ಸುಪುಷ್ಟವಾದ ಸುಂದರ ಗೂಳಿಯನ್ನೋ ನೋಡುವುದರಲ್ಲಿ ತಪ್ಪೇನು? ಅಸ್ಪೃಶ್ಯನಾದ ಹೊಲೆಯ ಮನುಷ್ಯ ಜಾತಿಯವನಾಗಿದ್ದರೂ ತನ್ನ ಜಾತಿಯೂ ಅಲ್ಲದೆ ಅತ್ಯಂತ ಕೀಳು ಜಾತಿಯವನಾಗಿದ್ದುದರಿಂದ ಹದಿಹರೆಯ ಕೊಂಬಿನ ಚೆಲುವಿನ ಹೋರಿ ಮಿಗವನ್ನು ಮೆಚ್ಚಿ ನೋಡುವಂತೆ ನೋಡುತ್ತಾಳೆ, ಪುರುಷ ಚೆಲುವಿನ ಆಕರ್ಷಣೆಗಷ್ಟೇ ನಿಲುತ್ತಾಳೆಯೇ ಹೊರತಾಗಿ ದೇವಯ್ಯನನ್ನು ಪ್ರೀತಿಸುವಂತೆ, ಪ್ರೀತಿಸಲಾರಳು. ಗುತ್ತಿಯ ಸೌಂದರ್ಯ ಮೆಚ್ಚುಗೆ, ಪ್ರಶಂಸೆಗಳಿಗಷ್ಟೇ ಉಳಿದು, ದೇವಯ್ಯನ ಜೊತೆಗಿನ ಪ್ರೀತಿ ಎಷ್ಟು ಮುಂದುವರೆಯುತ್ತದೆಯೆಂದರೆ, ದೇವಯ್ಯ ತನ್ನ ಮತ್ತು ಅವಳ ನಡುವಿನ ಪ್ರೀತಿಯ ಸಂಕೇತವಾಗಿ ಉಂಗುರ ತೊಡಿಸುತ್ತಾನೆ. ಆದರೆ ಈ ಉಂಗುರವೇ ಅವಳ ದುರಂತಕ್ಕೆ ಕಾರಣವಾಗುತ್ತದೆ. ದೇವಯ್ಯ, ಕಾವೇರಿಯ ಪ್ರೇಮ, ಪ್ರಣಯ ಸರಸಕ್ಕಷ್ಟೇ ಸೀಮಿತವಾಗುತ್ತದೆ. ದುರದೃಷ್ಟವಶಾತ್ ಉಂಗುರ ಕಳೆದು ಕಾವೇರಿಯ ಕನಸುಗಳೆಲ್ಲ ಭಗ್ನವಾಗುತ್ತವೆ. ಉಂಗುರವನ್ನು ಹುಡುಕಲು ಹೊರಟ ಕಾವೇರಿ, ಚೀಂಕ್ರನ ಧೂರ್ತತನದಿಂದ ಸಾಬಿಗಳ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಉಂಗುರವನ್ನು ಹುಡುಕಿ ತೆಗೆದು ದೇವಯ್ಯನನ್ನು ಮತ್ತೆ ಪಡೆಯಬಹುದೆಂಬ ಆಸೆ ಚಿಗುರೊಡೆಯುತ್ತದೆ. ಆದರೆ ತಾಯಿ ಮತ್ತು ಐಗಳು ಸೇರಿ ಅಂತಕ್ಕನ ಸೋದರಳಿಯ ಕಿಟ್ಟನೊಡನೆ ಮದುವೆ ಮಾಡಬೇಕೆಂದು ನಿಶ್ಚಯಿಸುತ್ತಾರೆ. ಅವನ ಶ್ರೀಮಂತಿಕೆ, ಮಗಳ ಮತ್ತು ದೇವಯ್ಯನ ಸಂಬಂಧವಾಗಿ ಜನರು ಆಡಿಕೊಳ್ಳುತ್ತಿದ್ದ ಅಪನಿಂದೆಗಳಿಂದ ತಪ್ಪಿಸುವ ಬಯಕೆಯಿಂದ ಅಂತಕ್ಕ ಈ ನಿಶ್ಚಯಕ್ಕೆ ಬಂದಿರುತ್ತಾಳೆ. ಎರಡು ಮದುವೆಗಳಾಗಿ, ಹೆಂಡಂದಿರು ಸತ್ತು, ಮೂರನೇ ಮದುವೆಗೆ ಪರದಾಡುತ್ತಿದ್ದ ಕಿಟ್ಟನನ್ನು ಗಮನಿಸಿ ಅದರ ಲಾಭ ಪಡೆಯಲು ಒಳ್ಳೆಯ ಅವಕಾಶವೆಂದು ಭಾವಿಸುತ್ತಾಳೆ. ಅಂತಕ್ಕನ ಹುನ್ನಾರಗಳು, ಬಲವಂತಗಳು ಮೊದಲೇ ಕಾವೇರಿಯ ಮನಸ್ಸನ್ನು ಕೆಡಿಸಿದ್ದವು. ಇದೆಲ್ಲವೂ ಅವಳಿಗೆ ಅನಿಷ್ಟಕರವಾಗಿ ಗೋಚರಿಸುತ್ತವೆ. ಕಿಟ್ಟನ ಹೆಸರಿನಿಂದಲೇ ಉರಿದೇಳುತ್ತಿದ್ದ ಕಾವೇರಿಗೆ, ಅವನೊಂದಿಗೆ ಮದುವೆ ಎಂದಾಗ ಹತಾಶೆ, ನಿರಾಶೆಗಳು ಮುತ್ತುತ್ತವೆ. ಅವನ ಜೊತೆ ಬಾಳ್ವೆಯ ಕನಸೂ ಅಸಾಧ್ಯಕರವೆಂದು ಭಾವಿಸಿದ್ದ ಕಾವೇರಿ, ಉಂಗುರವನ್ನು ಹುಡುಕಿ ತೆಗೆದು ದೇವಯ್ಯನೊಡನೆ ಮಾತಾಡಿ, ಅವನನ್ನು ಮದುವೆಯಾಗಬೇಕೆಂದು ಪ್ರಯತ್ನಿಸುತ್ತಾಳೆ. ಚಿನ್ನಮ್ಮ ಮುಕುಂದಯ್ಯರ ಸಾಹಸಹದ ನೆನಪು ಬಲ ನೀಡುತ್ತದೆ. ಜೊತೆಗೆ ದೇವಯ್ಯನನ್ನು ಗೆದ್ದೇ ಗೆಲ್ಲುತ್ತೇನೆಂಬ ಆತ್ಮ ವಿಶ್ವಾಸದೊಂದಿಗೆ, ಮೊದಲೇ ನಿಶ್ಚಿತವಾದಂತೆ ಮಿಶನ್ ಸ್ಕೂಲ್ ಬಳಿಗೆ ಕತ್ತಲಲ್ಲಿ ಹೋದ ಕಾವೇರಿ, ತಾನು ಎಲ್ಲಿದ್ದೇನೆ, ಯಾರಿದ್ದಾರೆ ಎಂದು ಗಮನಿಸುವುದಕ್ಕೆ

ಮೊದಲೇ ಹೆಬ್ಬುಲಿಗಳ ದುರಾಕ್ರಮಣಕ್ಕೆ ಒಳಗಾಗುತ್ತಾಳೆ. ಎಷ್ಟೊಂದು ಕನಸುಗಳನ್ನು ಕಟ್ಟಿಕೊಂಡಿದ್ದ ಕಾವೇರಿಯ ಬದುಕು ಸುಟ್ಟು ಬೂದಿಯಾಗುತ್ತದೆ. ನೋವು, ಅವಮಾನ ಆಯಾಸಗಳಿಂದ ಬಿಡುಗಡೆಯಾಗಲು ಅವಳಿಗೆ ಆತ್ಮಹತ್ಯೆಯೊಂದೆ ದಾರಿಯಾಗುತ್ತದೆ. ತನ್ನೆಲ್ಲ ಕನಸುಗಳೊಂದಿಗೆ ತಾನೂ ಕರಗಿ ಹೋಗುತ್ತಾಳೆ.

ಕುವೆಂಪು ಅವರ ಈ ಕೃತಿಯಲ್ಲಿ ಬರುವ ಲೈಂಗಿಕ ಸಂಬಂಧಗಳಿಗೆ ಹಲವಾರು ಮುಖಗಳಿವೆ. ಮನುಷ್ಯನ ಮೂಲ ಪ್ರಕೃತಿ ಅದಮ್ಯ ಕಾಮ. ದೇಹದ ಹಸಿವು. ವಿಶಾಲ ಬದುಕಿನ ಹರಹು, ವಿವಿಧ ಸ್ವಭಾವ ಮನೋಧರ್ಮದ ವ್ಯಕ್ತಿಗಳ ಲೈಂಗಿಕ ಆಕಾಂಕ್ಷೆಗಳು, ನಿರೀಕ್ಷೆಗಳು ಬೇರೆ ಬೇರೆಯಾಗಿರುತ್ತವೆ. ಈ ಆಕಾಂಕ್ಷೆಗಳು, ನಿರೀಕ್ಷೆಗಳು ವ್ಯಕ್ತವಾಗುವ ಸನ್ನಿವೇಶ ಸಂದರ್ಭಗಳು ಹಲವು ಬಗೆಯಾಗಿದ್ದು, ನಿಶ್ಚಿತ, ಅನಿಶ್ಚಿತ ಉದ್ದೇಶಗಳಿಂದ ಪ್ರೇರಿತವಾಗಿರುತ್ತವೆ. ಒಂದಕ್ಕಿಂತ ಒಂದು ಭಿನ್ನವಾಗಿ ದಿಗ್ಭ್ರಮೆ ಗೊಳಿಸುವಂತಹ ರೀತಿಯಲ್ಲಿದ್ದು, 'ಕಾಮ' ಲೈಂಗಿಕತೆಗಳ 'ಸ್ವರೂಪ' ಚಿಂತನೆಗೆ ದಾರಿ ಮಾಡುತ್ತವೆ. ಗಂಡು- ಹೆಣ್ಣುಗಳ ಆಕರ್ಷಣೆಗೆ ಸೌಂದರ್ಯವೊಂದೇ ಪ್ರೇರಣೆಯಾಗಲಾರದು. ಗುಣ, ನಡತೆ, ಹಣ, ಅಂತಸ್ತುಗಳೂ ಆಕರ್ಷಣೆಗೆ ಪ್ರಚೋದನೆಯಾಗಬಲ್ಲವು. ಆದರೆ ಎಲ್ಲ ಸಂದರ್ಭಗಳಲ್ಲಿ ಈ ಸಂಬಂಧಗಳ ಹಿನ್ನೆಲೆಗೆ ನಿಜವಾದ ಪ್ರೀತಿ, ಆದರ್ಶಗಳು ಇರಲಾರವು. ಕೇವಲ ದೇಹದ ಆಕರ್ಷಣೆಯಿಂದ ಉಂಟಾಗುವ ಲೈಂಗಿಕ ಸಂಬಂಧಗಳಿಗೆ ಒಂದು ಮಾನವೀಯ ನೆಲೆಯಾಗಲೀ, ನೈತಿಕ ನಿಷ್ಠೆಯಾಗಲೀ, ಚಿರಂತನತೆಯಾಗಲೀ ಇರುವುದಿಲ್ಲ. ತೃಪ್ತಿಯ ಪರ್ಯಾಪ್ತ ಸ್ಥಿತಿ ತಲುಪುತ್ತಿದ್ದಂತೆ, ಈ ಸಂಬಂಧಗಳು ಮುರಿದು ಹೋಗುತ್ತವೆ. ಆದರೆ 'ಕಾಮ' ಪರಸ್ಪರ ಒಪ್ಪಿಗೆಯೊಳಗೆ ಸ್ವಾಗತಾರ್ಹವಾದರೆ, ಕೆಲವೊಮ್ಮೆ ವಿಕೃತ ಕಾಮದಿಂದಾಗಿ ಹಿಂಸೆ, ನೋವುಗಳು ಅನಿವಾರ್ಯವಾಗುತ್ತವೆ. ರಾಕ್ಷಸೀ ಸ್ವಭಾವದ ಗಂಡುಗಳ ಬಲಾತ್ಕಾರದ ಆಕ್ರಮಣ, ಅತ್ಯಾಚಾರಗಳು, ಹೆಣ್ಣಿನ ಲೈಂಗಿಕ ಭ್ರಷ್ಟತೆಗೆ, ಆತ್ಮಹತ್ಯೆಯ ವಿವಶತೆಗೆ ತಳ್ಳುತ್ತವೆ. ದಾಂಪತ್ಯದ ಚೌಕಟ್ಟಿನಲ್ಲಿ, ಸಾಮಾಜಿಕ ಸ್ವೀಕೃತಿಯಲ್ಲಿನ ಲೈಂಗಿಕ ಸಂಬಂಧಗಳು ಸಾಕಷ್ಟು ಮಟ್ಟಿಗೆ ಆರೋಗ್ಯಕರವಾಗಿ ಉಳಿಯುತ್ತವೆ. ಆದರೆ ಒಮ್ಮೊಮ್ಮೆ ಹಲವಾರು ಕಾರಣಗಳಿಂದಾಗಿ ಇಲ್ಲಿಯೂ ಲೈಂಗಿಕ ಸಂಬಂಧಗಳಲ್ಲಿ ಏರು ಪೇರಾಗಿ ವಿವಾಹಬಾಹಿರ ಸಂಬಂಧಗಳು ಅನಿವಾರ್ಯವಾಗುತ್ತವೆ.

ಕಾಮವಿಕಾರಗಳಿಗೆ, ಲೈಂಗಿಕ ಸೆಳೆತಗಳಿಗೆ ಜಾತಿ ಮತದ ಕಟ್ಟು ಕಟ್ಟಳೆಗಳಿಲ್ಲ, ನೀತಿ ನಿಯಮಗಳ ಭೀತಿ ಇಲ್ಲ. ಆದರೆ ಈ ಪ್ರವೃತ್ತಿ(ಲೈಂಗಿಕ) ಮಾನವೀಯ ಸೀಮೋಲ್ಲಂಘನೆಯನ್ನು ಮೀರಿದರೆ, ಪಾಶವಿಕವಾಗಿ, ಕ್ರೂರವಾದ ರಾಕ್ಷಸೀ ಪ್ರವೃತ್ತಿಯಾಗಿ ಪರಿವರ್ತಿತವಾಗುತ್ತದೆ. ಇದಕ್ಕೆ ವಿರುದ್ಧವಾಗಿ ಕಾಮ ಉದಾತ್ತತೆಯನ್ನು ಒಳಗೊಂಡು ಪ್ರೇಮವಾಗಿ ಮಾರ್ಪಟ್ಟಾಗ ಪರಸ್ಪರ ತ್ಯಾಗ, ಅನುರಾಗಗಳಲ್ಲಿ ಪರ್ಯವಸಾನವಾಗುತ್ತದೆ.

ಈ ಕಾದಂಬರಿಯಲ್ಲಿ ಪ್ರಧಾನವಾಗಿ ಕಾಣಿಸುವ ಮೇಲೆ ವಿವರಿಸಿದ ಲೈಂಗಿಕ ಸಂಬಂಧಗಳ ಚಟುವಟಿಕೆಗಳ ಸೂಕ್ಷ್ಮ ವಿವರಗಳು ಕುವೆಂಪು ಅವರ ಪ್ರತಿಭೆಯ ಕುಂಚದಲ್ಲಿ ಅದ್ಭುತ ಶಬ್ದ

ಚಿತ್ರಗಳಾಗಿ ಮೂಡಿ ಬಂದಿವೆ. ವಾಸ್ತವವಾಗಿ ಇಲ್ಲಿನ ವಿಸ್ತಾರವಾದ ಕಥಾನಕದ್ದ ಬೆಳವಣಿಗೆ ಲೈಂಗಿಕ ಸಂಬಂಧಗಳ ಹಿನ್ನೆಲೆಯಲ್ಲಿಯೇ ಸಾಧ್ಯವಾಗಿದೆ. ಘಟನೆ, ಸನ್ನಿವೇಶಗಳ ಹಿಂದೆ ಹೆಣ್ಣು ಗಂಡುಗಳ ಪ್ರೀತಿ, ದ್ವೇಷ, ಅಸೂಯೆ, ಅನುಮಾನ, ಈರ್ಷೆ, ಹಿಂಸೆ ಇತ್ಯಾದಿ ಮನಃಸ್ಥಿತಿಯ ಕೈವಾಡವಿದೆ. ಕುವೆಂಪು ಅವರು ಈ ಲೈಂಗಿಕ ಸಂಬಂಧಗಳನ್ನು ಸೂಕ್ಷ್ಮವಾಗಿ ಮನೋವೈಜ್ಞಾನಿಕ ದೃಷ್ಟಿಯೊಂದಿಗೆ ಕಟ್ಟಿಕೊಡುವ ಪ್ರಯತ್ನವನ್ನು ಮಾಡಿರುವುದು ಸ್ಪಷ್ಟವಾಗಿದೆ.

ಕುವೆಂಪು ಅವರ ಈ ಕಾದಂಬರಿ ಒಂದು ಪ್ರಾದೇಶಿಕ ಹಿನ್ನೆಲೆಯಲ್ಲಿ ಜಾತಿ, ವರ್ಗ, ಲಿಂಗಾತೀತ ನೆಲೆಯಾಚೆಗಿನ ಮನುಷ್ಯನ ಮೂಲಭೂತ ಪ್ರವೃತ್ತಿಗಳನ್ನು ಸಾಮಾಜಿಕ, ಸಾಂಸ್ಕೃತಿಕ ಸನ್ನಿವೇಶ ಸಂದರ್ಭಗಳ ಮೂಲಕವಾಗಿ ಎಲ್ಲ ಸೂಕ್ಷ್ಮತೆ, ಸಮಗ್ರತೆಗಳೊಂದಿಗೆ ಅದ್ಭುತವಾಗಿ ಬಿಂಬಿಸಿದೆ.



## ‘ಭರತೇಶ ವೈಭವ’ದಲ್ಲಿ ರತ್ನಾಕರವರ್ಣಿಯ ಯೋಗ ಭೋಗ ಸಮನ್ವಯ ದೃಷ್ಟಿ

15ನೇ ಶತಮಾನದಿಂದ ಹಿಡಿದು 19ನೇ ಶತಮಾನದ ಕೊನೆಯವರೆಗಿನ ವಿಸ್ತೃತವಾದ ಕುಮಾರವ್ಯಾಸ ಯುಗದ ಮತ್ತು ಅದಕ್ಕೂ ಹಿಂದಿನ ಜೈನ ಕವಿ ಕಾವ್ಯ ಪರಂಪರೆಯಲ್ಲಿ ‘ಭರತೇಶ ವೈಭವ’ ಕಾವ್ಯ ಕರ್ತೃವಾದ ರತ್ನಾಕರವರ್ಣಿಗೆ ವಿಶಿಷ್ಟ ಸ್ಥಾನವಿದೆ. ಕಾವ್ಯಸೃಷ್ಟಿ, ತಾತ್ವಿಕ ಚಿಂತನೆಗಳು, ಕಾವ್ಯದ ವಸ್ತು, ಭಾಷೆ, ಶೈಲಿ ಎಲ್ಲವುಗಳ ದೃಷ್ಟಿಯಿಂದ ರತ್ನಾಕರವರ್ಣಿ ಉಳಿದೆಲ್ಲ ಕವಿಗಳಿಗಿಂತ ಭಿನ್ನ. ಪಂಪ, ಪೊನ್ನ, ರನ್ನ, ಜನ್ನ ತಮ್ಮ ಮತನಿಷ್ಠೆಯ ಪ್ರತೀಕವಾಗಿ ಜೈನ ಕಾವ್ಯಗಳನ್ನು ತೀರ್ಥಂಕರರ ಚರಿತೆಗಳನ್ನು ಆದಷ್ಟು ಮಟ್ಟಿಗೆ ಪೂರ್ವ ಕಾವ್ಯ ಸಂಪ್ರದಾಯದ ನಿರೀಕ್ಷೆಗಳಿಗೆ ಬದ್ಧವಾಗಿಯೇ ಬರೆದು ತನ್ಮೂಲಕ ಜೈನತತ್ವಗಳನ್ನು ಸಾರಿದರೆ, ವೈರಾಗ್ಯವೇ ಪರಮ ಗುರಿಯೆಂಬ ತತ್ವವನ್ನು ಎತ್ತಿ ಹಿಡಿದರೆ ರತ್ನಾಕರ ಜೈನನಾದರೂ ತೀರ್ಥಂಕರ ಚರಿತೆಗೆ ಕೈ ಹಚ್ಚದೆ ಆದಿ ತೀರ್ಥಂಕರನ ಹಿರಿಯ ಮಗನಾದ ‘ಭರತ’ನನ್ನೇ ಕಾವ್ಯ ನಾಯಕನಾಗಿಸಿಕೊಂಡದ್ದು ಅತ್ಯಂತ ಕುತೂಹಲದ ಸಂಗತಿಯಾಗಿದೆ. ಇಂತಹ ಆಯ್ಕೆಯಲ್ಲಿ (ಕಥಾನಾಯಕನ) ರತ್ನಾಕರವರ್ಣಿಯ ಜೀವನದೃಷ್ಟಿ, ಮತೀಯ ಪರಿಕಲ್ಪನೆ. ಜೈನಧರ್ಮದ ತತ್ವ ಸಿದ್ಧಾಂತಗಳು ಹೇಗೆ ಕೆಲಸಮಾಡಿರಬಹುದೆಂಬುದನ್ನು ಗಮನಿಸಬೇಕಾಗುತ್ತದೆ. ವೈಷ್ಣವ ಪಂಥ, ವೀರಶೈವ ಪಂಥಗಳು, ಆ ಪಂಥದ ಕವಿ, ಕಾವ್ಯಗಳು ಸಾಕಷ್ಟು ಪ್ರಚಲಿತವಿದ್ದ ಆ ಕಾಲದಲ್ಲಿ ರತ್ನಾಕರವರ್ಣಿ ತಾನು ಸೇರಿದ್ದ ಧರ್ಮವನ್ನು ಪ್ರತಿನಿಧಿಸುವ ಕಾವ್ಯವನ್ನೇನೋ ಬರೆದ. ಆದರೆ ಕಾವ್ಯದ ಆಶಯಗಳು ಪಂಪನಲ್ಲಿ ಕಾಣುವಂತೆ ಲೌಕಿಕ ಆಗಮಿಕವೆಂದು ಕವಲೊಡೆಯಲಿಲ್ಲ. ಬದಲಾಗಿ ಎರಡನ್ನೂ ಬೆಸೆದು ಸಮನ್ವಯಗೊಳಿಸುವ ಪ್ರಕ್ರಿಯೆಯಲ್ಲಿ ಬಾಹುಬಲಿಗಿಂತ ‘ಭರತ’ ಅವನಿಗೆ ಸಮರ್ಥ ಪಾತ್ರವಾಗಿ ಮತ್ತು ತನ್ನ ದೃಷ್ಟಿ, ಧೋರಣೆ, ನಿಲುವುಗಳ ಅಭಿವ್ಯಕ್ತಿಗೆ ಯೋಗ್ಯವಾದ ರೂಪಕವಾಗಿ ಕಾಣಿಸಿರಬೇಕು. ಮೂಲತಃ ಕ್ಷತ್ರಿಯ ವಂಶಜನಾಗಿ ಹುಟ್ಟಿ ಕಾವ್ಯಾಲಂಕಾರ ಲಕ್ಷಣ ಶಾಸ್ತ್ರಗಳಲ್ಲಿ ಅತಿ ನಿಪುಣನಾಗಿದ್ದು, ಚಾರು ಕೀರ್ತಿ ಗುರುಗಳಿಂದ ದೀಕ್ಷೆ ಪಡೆದಿದ್ದವನು. ಅವನು ತನಗಿಂತ ಹಿಂದಿನ ಕವಿಗಳಂತೆ ಸಂಪ್ರದಾಯ ಬದ್ಧ ಜೈನನಲ್ಲವೆಂಬುದನ್ನು ಸ್ಥಾಪಿಸಲು ಅನೇಕ ದಂತ

ಕಥೆಗಳು ಪ್ರಚಲಿತವಿದೆ. ಅವುಗಳಲ್ಲಿ ದೇವಚಂದ್ರನ ಪ್ರಕಾರ ರತ್ನಾಕವರ್ಣಿ ಮೊದಲು ಭೈರಸ ಒಡೆಯರ ಆಸ್ಥಾನದಲ್ಲಿ ಶೃಂಗಾರ ಕವಿಯಾಗಿದ್ದು, ಅರಸು ಕುಮಾರಿಯ ಜೊತೆ ಪ್ರಣಯ ಸಂಬಂಧವಿರಿಸಿಕೊಂಡಿದ್ದು, ಅದು ಅರಸನ ಗಮನಕ್ಕೆ ಬಂದುದನು ತಿಳಿದು ರತ್ನಾಕರವರ್ಣಿ ಅಲ್ಲಿಂದ ಕಾಲ್ತೆಗೆದು ಸವಣದೀಕ್ಷೆ ಕೈಗೊಂಡನು. ಅಲ್ಲದೆ ತನ್ನ ಮನೋಧರ್ಮಕ್ಕೆ ಒಪ್ಪುವಂತಹ ರೀತಿಯಲ್ಲಿ ಜೈನ ಕಥಾವಸ್ತುವನ್ನು ತೆಗೆದುಕೊಂಡು ಭರತೇಶಕಾವ್ಯ ಬರೆದರೂ ಸಂಪ್ರದಾಯವಾದಿಗಳಿಂದ ಪುರಸ್ಕಾರ ಸಿಗದಕ್ಕಾಗಿ ಬೇಸರಗೊಂಡು ಶೈವನಾಗುತ್ತಾನೆ; ಮತ್ತೆ ಕೋಪ ಬೇಸರಗಳು ಕಳೆದ ಮೇಲೆ ಜೈನಮತಕ್ಕೆ ಹಿಂತಿರುಗುತ್ತಾನೆ. ಭರತೇಶ ವೈಭವದ ಮೂಲಕ ಶುಷ್ಕವಾದ, ನೀರಸವಾದ, ಜ್ಞಾನ, ವೈರಾಗ್ಯ, ನೀತಿ, ಆತ್ಮ ವಿಚಾರ , ಪರತತ್ವ ಮುಂತಾದವುಗಳನ್ನು ವಿವರಿಸದೆ ಅವುಗಳನ್ನು ತ್ರಿಲೋಕ ಶತಕ, ಅಪರಾಜಿತೇಶ್ವರ ಶತಕ, ರತ್ನಾಕರಾಧೀಶ್ವರ ಶತಕ ಮುಂತಾದ ಶತಕಗಳಿಗೇ ಮೀಸಲಿರಿಸಿ, ತನ್ನ ನಿಜವಾದ ಕಾವ್ಯ ಪ್ರತಿಭೆ, ಜೀವನ ದೃಷ್ಟಿ, ತಾತ್ವಿಕ ನಿಲುವುಗಳ ಅನಾವರಣಕ್ಕ 'ಭರತೇಶ ವೈಭವ' ಕಾವ್ಯವನ್ನೇ ಮೊರೆಹೊಕ್ಕ. ಹಿಂದಿನವರೆಲ್ಲರೂ ತೀರ್ಥಂಕರರನ್ನು ಕುರಿತು ಬರೆದರೆ ತೀರ್ಥಂಕರರ ವ್ಯಕ್ತಿತ್ವದ ಹತ್ತಿರಕ್ಕೂ ಬರಲಾಗದ ಭರತ ಚಕ್ರೇಶನನ್ನು ತನ್ನ ಕಾವ್ಯ ನಾಯಕನನ್ನಾಗಿಸಿಕೊಂಡು, ವಿಸ್ತೃತವಾದ, ಬೃಹತ್ತಾದ 'ಭರತೇಶ ವೈಭವ' ಹೆಸರಿನ ಕಾವ್ಯ ಬರೆದು ಮಹಾಕವಿ ಎನಿಸಿಕೊಂಡ. ತೀರ್ಥಂಕರರಿಗಿಂತಲೂ ಭರತನಲ್ಲಿ ಮಿಗಿಲಾದ ವ್ಯಕ್ತಿತ್ವವನ್ನು ಕಂಡಿದ್ದಾನೆ. ಸಂಪ್ರದಾಯ ವಾದಿಗಳ ದೃಷ್ಟಿಯಲ್ಲಿ ಇದು ಸಮರ್ಥನೀಯವಾಗಿ ಕಾಣದೆ ಇರಬಹುದು. ಆದರೆ ರತ್ನಾಕವರ್ಣಿ 'ಭರತೇಶ'ನನ್ನು ಕಾವ್ಯ ನಾಯಕನಾಗಿ ಆರಿಸಿಕೊಂಡದ್ದನ್ನು

> **"ಗಣನೆಯಿಲ್ಲದ ರಾಜ್ಯ ಸುಖದೊಳೋಲಾಡಿ ಧಾ**
> **ರಿಣಿ ಮೆಚ್ಚೆ ಜಿನಯೋಗಿಯಾಗಿ**
> **ಕ್ಷಣಕೆ ಕರ್ಮವ ಸುಟ್ಟು ಜಿನನಾದ ಭೂಭುಜಾ**
> **ಗ್ರಣಿಯಾ"ಗಿದ್ದಾನೆ.**

ಅಲ್ಲದೆ,

> **'ಆಗಮವಧ್ಯಾತ್ಮವಳವಟ್ಟು ಶೃಂಗಾರ**
> **ತ್ಯಾಗಭೋಗದ ಮೋಡಿ ಮೆರೆಯ**
> **ಭೋಗಿಯೋಗಿಗಳೆದೆ ಜುಮ್ಮು ಜುಮ್ಮು' -**

ಎನಿಸುವಂತಹ ವ್ಯಕ್ತಿಯಾಗಿದ್ದಾನೆ ಎಂದು ಸಮರ್ಥಿಸುತ್ತಾನೆ. ಅಂತಹವನು ಕವಿಯ ದೃಷ್ಟಿಯಲ್ಲಿ ಸಾಮಾನ್ಯನಲ್ಲ. ಕನ್ನಡ ಕಾವ್ಯ ಜಗತ್ತಿನಲ್ಲಿ ಈ ಕವಿ, ಕವಿರತ್ನ, ಶೃಂಗಾರಮಹಾ ಕವಿ, ರತ್ನಾಕರಸಿದ್ಧ, ರತ್ನಾಕರ ಅಣ್ಣ ಎಂದೆಲ್ಲ ಪ್ರೀತಿಯಿಂದ ಪರಿಚಿತನಾಗಿದ್ದವನು, ಹಾಡಿ ಹೊಗಳಿಸಿಕೊಂಡವನು, ಶುಷ್ಕಯೋಗಿಯಲ್ಲ; ಪೂರ್ಣ ಭೋಗಿಯೂ ಅಲ್ಲ. ಜೀವನದಲ್ಲಿ ಔನ್ನತ್ಯವನ್ನು ತಲುಪಲು, ಆತ್ಮೋದ್ಧಾರವನ್ನು ಸಾಧಿಸಲು ಪೂರ್ಣ ವೈರಾಗ್ಯದ, ಜೀವನ ವಿಮುಖತೆಯ ಅಗತ್ಯವಿಲ್ಲ. ಭೋಗದೊಂದಿಗೆ ಯೋಗವನ್ನೂ ಬೆಸೆದುಕೊಂಡು, ಇಂದ್ರಿಯ ನಿಗ್ರಹವನ್ನು ಬಯಸಿದಾಗ ಸಾಧ್ಯವಾಗಿಸಿ ಕೊಂಡರೆ ಸಾಕು ಎಂಬ ವಿಚಾರದಲ್ಲಿ ನಂಬಿಕೆಯಿಟ್ಟವನು.

ಬಹುಶಃ ಸಂಪ್ರದಾಯವಾದಿ ಜೈನದೃಷ್ಟಿಗೆ ಇದು ತೀರಾ ಹೊಸತಾಗಿ ಮತ್ತು ಅತ್ಯಂತ ಕ್ರಾಂತಿಕಾರಕ ವಿಚಾರವಾಗಿ ಗೋಚರಿಸಿರಬಹುದು. ಆದರೆ ಅವನ ಈ ಅಧ್ಯಾತ್ಮ ಅನುರಾಗಗಳ ಸಮನ್ವಯದ ಯೋಗದರ್ಶನದ ಪ್ರತಿಫಲನ ರೂಪವಾದ ಈ ಮಹಾಕಾವ್ಯ, ಭರತೇಶ ವೈಭವವನ್ನು ಕುವೆಂಪುರಂತಹ ಮಹಾಕವಿಯೇ 'ಇದು ಜಗತ್ಕೃತಿ' ಎಂದು ಉದ್ಗರಿಸಿ ಹೊಗಳಿದ್ದಾರೆ. "ಸಿದ್ಧ" ಪದಕೆ ಸೋತು, ರತ್ನಾಕರಸಿದ್ಧನೆಂದೇ ತನ್ನನ್ನು ಕರೆದುಕೊಳ್ಳುತ್ತಾ, "ಧ್ಯಾನಕೆ ಬೇಸರಾದಾಗ ನನ್ನಾತ್ಮಲೀಲಾನುವೃದ್ಧಿಗೆ ಪೇಳ್ದೆನ್ನೆಸೆ" ಎಂದು ಭರತೇಶ ಕಾವ್ಯದ ರಚನೆಯ ಉದ್ದೇಶ, ಕಾರಣಗಳನ್ನು ಹೇಳಿ, ಭರತೇಶನ ಆತ್ಮ ವಿಕಾಸದ ಬಗೆಯೊಂದಿಗೆ ತನ್ನನ್ನೂ ಸಮೀಕರಿಸಿಕೊಳ್ಳುತ್ತಲೇ ಭಾವ ತನ್ಮಯತೆ, ಧ್ಯಾನ ತನ್ಮಯತೆ, ಆತ್ಮಲೀನತೆ, ಹಂಸೀಭಾವಗಳೊಂದಿಗೆ ಭರತೇಶ ಕಾವ್ಯವನ್ನು ಹಾಡಿದ್ದಾನೆ. ಈ ಬಗೆಯ ಅನುಪಮ ದಿವ್ಯ ತಾತ್ವಿಕ ದರ್ಶನಕ್ಕೆ ರತ್ನಾಕರನಿಗೆ ರತ್ನಾಕರನೇ ಸಾಟಿಯಾಗಿದ್ದಾನೆ. ಅವನ ಕಾವ್ಯ ಅಥವಾ ಕಥಾನಾಯಕ 'ಭರತ' ಪಾತ್ರ ಕಲ್ಪನೆಯ ಭವ್ಯತೆ ಇಡೀ ಕನ್ನಡ ಕಾವ್ಯಕ್ಕೇ ಮಾದರಿಯಾಗಿದೆ. ಸಿದ್ಧನಾಗುವುದಕ್ಕೆ ಮೊದಲಿನ ಅವನ ಶೃಂಗಾರ ಭಾವರಸಗಳ ಸ್ವಯಂ ಅನುಭೂತಿ ಕಾವ್ಯ, ಸಂಗೀತ, ನಾಟಕ, ನೃತ್ಯಾದಿಗಳ ಆಳವಾದ ಪರಿಜ್ಞಾನ ಭರತೇಶ ಕಾವ್ಯದಲ್ಲಿ ಕಲಾಭಿಭೂತ ರಸ ಸನ್ನಿವೇಶಗಳ ನಿರ್ಮಾಣದಲ್ಲಿ ಅದ್ಭುತವಾಗಿ ಸಹಕರಿಸಿವೆ.

ಅವನ ಶತಕ ಕೃತಿಗಳಲ್ಲಿ ದಾಂಗುಡಿ ಇಡುತ್ತಿದ್ದ ಅಧ್ಯಾತ್ಮ ಚಿಂತನೆ, ಮಾನಸಿಕ ಸ್ಥಿತಿಗಳಿಗಳೂ ಹಿಂದಿನ ಅವನ ಶೃಂಗಾರಾನುಭವದ, ಜೊತೆಗೆ ಸೇರಿ, ಅದ್ಭುತ ಕಾವ್ಯ ಪ್ರತಿಭೆ 'ಭರತೇಶ ವೈಭವ' ಕಾವ್ಯದಲ್ಲಿ ಪರಿಪಕ್ವತೆಯ ಪರಾಕಾಷ್ಠೆ ತಲುಪಲು ಸಾಧ್ಯವಾಯಿತು.

ಕಲಾತ್ಮಕತೆ, ಅಧ್ಯಾತ್ಮ, ಅನುಭಾವಗಳೆಲ್ಲವೂ ಮುಪ್ಪುರಿಗೊಂಡ ತನ್ನದೇ ವಿಶಿಷ್ಟವಾದ ಒಂದು ತಾತ್ವಿಕ ಚಿಂತನೆಯನ್ನು, ಸ್ವತಂತ್ರ ದರ್ಶನವನ್ನು ರೂಪಿಸಿಕೊಳ್ಳಲು ಸಾಧ್ಯವಾಯಿತು.

ಅವನ ದೃಷ್ಟಿಯಲ್ಲಿ, ಈ ಲೋಕ ಕರ್ಮಭೂಮಿ, ಇಲ್ಲಿದ್ದುಕೊಂಡು ಕರ್ಮಕ್ಷಯ ಸಾಧಿಸಬೇಕಾದರೆ ಪರಮಾತ್ಮನ ಧ್ಯಾನವೊಂದೇ ಮಾರ್ಗ. ಭಕ್ತಿ, ಭಗವಂತನ ಚಿಂತನೆಗಳ ಮೂಲಕ ಆನಂದ ಸ್ಥಿತಿಯನ್ನು ತಲುಪಬಹುದು. ದೇವರುಗಳು ಉಚ್ಚಧ್ಯೇಯ ಸಾಧನೆಗಷ್ಟೇ ಪ್ರಯತ್ನಿಸಬೇಕು. ಅಧ್ಯಾತ್ಮ ಸಾಧನೆ, ಯೋಗ ಸಿದ್ಧಿ, ನಿಷ್ಠುರ ನೇಮಗಳು, ತಪಸ್ಸು, ದೇಹದಂಡನೆ, ನಿರ್ಮಮತೆಗಳಿಂದ ಮಾತ್ರವೇ ಉಚ್ಚ ಧ್ಯೇಯವನ್ನು ತಲುಪಬಹುದು. ಆದರೆ ಇದಕ್ಕಾಗಿ 'ಐಹಿಕ ಸುಖ ಭೋಗಗಳನ್ನು, ಲೌಕಿಕ ವಾಸನೆಗಳನ್ನು ಬಿಡಬೇಕು; ಇವುಗಳನ್ನು ಕೇವಲ ಭ್ರಮೆ, ನಶ್ವರ ಎಂದು ಭಾವಿಸುತ್ತ ನಡೆದು, ಅವುಗಳ ಬಗ್ಗೆ ಮೋಹ ಆಸಕ್ತಿಗಳಿಂದ ದೂರವಾಗಬೇಕು' - ಎಂಬ ವಿಚಾರಗಳನ್ನು ಭರತೇಶ ವೈಭವ ಸಂದರ್ಭದಲ್ಲಿ ದೂರವಿಡುತ್ತಾನೆ. ಶತಕಗಳಲ್ಲಿ, ಅದೂ ಮೊದಲೆರಡು ಶತಕಗಳಲ್ಲಿ ಇವುಗಳನ್ನೇ, ಇಂತಹ ವಿಚಾರಗಳನ್ನೇ ಸಾಂಪ್ರದಾಯಿಕ ನಿಲುವುಗಳನ್ನೇ ಪುಷ್ಟೀಕರಿಸುವಂತೆ ವಿವರಿಸಿದ್ದರೆ, 'ರತ್ನಾಕರಾಧೀಶ್ವರ ಶತಕ' ರಚನೆಯ ವೇಳೆಗೆ ಅವನ ಹಿಂದಿನ ದೃಷ್ಟಿಯಲ್ಲಿ ಸಾಕಷ್ಟು ಬದಲಾವಣೆಗಳು ಕಾಣಿಸಿಕೊಂಡವು. ನೀತಿಬೋಧಕ ಅಂಶಗಳ ಜೊತೆ ಜೊತೆಗೆ ಅದ್ಭುತವಾದ,

ಕ್ರಾಂತಿಕಾರಕವಾದ ವಿಚಾರಗಳನ್ನೂ ಕಾವ್ಯದ ಮೆರುಗಿನೊಂದಿಗೆ ನಿರೂಪಿಸಿದ್ದಾನೆ. ಮಾತಿನಲ್ಲಿ ಹೊಸತನ, ಚಮತ್ಕಾರಗಳು, ಶೈಲಿಯಲ್ಲಿ ತೀಕ್ಷ್ಣತೆ, ವಸ್ತುವಿನಲ್ಲಿ ಸ್ವಾನುಭವ ದೃಷ್ಟಿ ದರ್ಶನಗಳು. ನಿಚ್ಚಳವಾಗಿ ಮೂಡಿವೆ. ಅಲ್ಲದೆ ಜೈನಕವಿಗಳಲ್ಲಿ ಮತ್ತು ತನ್ನದೇ ಮೊದಲಿನ ರಚನೆಗಳಲ್ಲಿ ಕಾಣುವ ಭೋಗ ವಿರತಿಯ ಉಪದೇಶದ ಎಡೆಯಲ್ಲಿ, ಕ್ರಾಂತಿಕಾರಕವೂ ಅಸಾಂಪ್ರದಾಯಿಕವೂ ಎನಿಸುವ ತಾತ್ವಿಕ ದೃಷ್ಟಿ, ಭೋಗ ಜೀವನದ ಬಗ್ಗೆ ಉದಾತ್ತ ನಿಲುವು ಮುಂತಾದವುಗಳನ್ನು ಪ್ರತಿಪಾದಿಸುತ್ತಾನೆ. ಇಂದ್ರಿಯ ನಿಗ್ರಹ, ಭೋಗ ವಿರಕ್ತಿಗಳು ಎಷ್ಟು ಕಷ್ಟ ಸಾಧ್ಯವೆಂಬ ಅಂಶವನ್ನು ಸ್ವಂತ ಅನುಭವದ ಮೂಲಕ ಗ್ರಹಿಸಿರುವುದನ್ನು ಶತಕದಲ್ಲಿ ಬಿತ್ತರಿಸಿದ್ದಾನೆ. ಅವನ ಅಭಿಪ್ರಾಯದಲ್ಲಿ 'ಇಂದ್ರಿಯಗಳೆಂಬುದು ನಿಯಂತ್ರಣಕ್ಕೆ ತರಲಾಗದ ಮದ್ದಾನೆಯಂತೆ; ಬಿಟ್ಟೆನೆಂದರೆ ಬಿಡದೀಮಾಯೆ' ಎಂಬಂತೆ ಕಾಮ, ಭೋಗಗಳು ಯೌವ್ವನೋನ್ಮಾದದುದ್ರೇಕಗಳು; ಮನುಷ್ಯನನ್ನು ಕಲಕಿ ಬಿಡುತ್ತವೆ. ಆದ್ದರಿಂದ ಆಗಲಾರದ್ದಕ್ಕೆ ಅತ್ತು, ಚಡಪಡಿಸಿ ಸಾಯುವುದಕ್ಕಿಂತ ಧರ್ಮ ಸಂಯಮಿತ ಭೋಗ ಭಾಗ್ಯಗಳನ್ನು ಬದುಕಿನಲ್ಲಿ ಅಳವಡಿಸಿಕೊಳ್ಳುವುದು ಕ್ಷೇಮಕರ; ಅರ್ಥಪೂರ್ಣ; ಸ್ವೀಕಾರಾರ್ಹ. ಆದರೆ ಧರ್ಮ ಸಂಯಮಿತ ಭೋಗ ಭಾಗ್ಯಗಳು ಪೂರ್ವ ಪುಣ್ಯದಿಂದ ಮಾತ್ರವೇ ಸಾಧ್ಯವಾಗುವುದು' - ಎಂದು ನಂಬಿದ್ದರಿಂದಲೇ, ತನ್ನ ಮುಂದಿನ ಮಹಾಕಾವ್ಯವಾದ 'ಭರತೇಶ ವೈಭವ'ದಲ್ಲಿ ತನ್ನ ಸ್ವತಂತ್ರ ದೃಷ್ಟಿಯ ಪ್ರತೀಕವಾಗಿ ಭೋಗಾನುಭವದ ಮೂಲಕವೂ ಶಾಶ್ವತ ಸುಖ, ಮೋಕ್ಷ, ಕೈವಲ್ಯಗಳನ್ನು ಸಾಧಿಸಿಕೊಳ್ಳಬಹುದೆಂಬ ಅದ್ಭುತ ತತ್ವ ದರ್ಶನವನ್ನು 'ಭರತ'ಚಕ್ರೇಶನ ಪಾತ್ರದ ಮೂಲಕ ಪ್ರತಿಪಾದಿಸಿದ್ದಾನೆ. ಅಧ್ಯಾತ್ಮ ಸಾಧನೆಯ ಹಾದಿಯಲ್ಲಿ ಲೌಕಿಕ ಸುಖ ಭೋಗಗಳು ಹೊರತಾದುವಲ್ಲ. ಹಾಗಾಗಿ ಯೋಗ - ಭೋಗ ಸಮನ್ವಯ ತತ್ವದರ್ಶನವೇ ರತ್ನಾಕರನ ಅಧ್ಯಾತ್ಮಿಕ ನಿಲುವಾಗಿದೆ. ಇದನ್ನು ಸಾಧಿಸಿ ತೋರಿಸಲೆಂದೇ 'ಭರತೇಶ ವೈಭವ' ಕಾವ್ಯದಲ್ಲಿ ಭರತೇಶನ ಭವ್ಯ ಪಾತ್ರ ಶಿಲ್ಪವನ್ನು ಕಡೆದಿರಿಸಿದ್ದಾನೆ. ತನ್ನೆಲ್ಲ ತಾತ್ವಿಕ ಚಿಂತನೆಗಳನ್ನು ಭರತನ ಪಾತ್ರದಲ್ಲಿ ಮೂರ್ತೀಭವಿಸುವಂತೆ ಮಾಡಿದ್ದಾನೆ; ಅಥವಾ ಭರತಪಾತ್ರದ ಮೂಸೆಯಲ್ಲಿ ಎರಕ ಹೊಯ್ದಿದ್ದಾನೆ.

ರತ್ನಾಕರನ ಸಮಗ್ರ ಸಾಹಿತ್ಯ ನಿರ್ಮಾಣದಲ್ಲಿ 'ಭರತೇಶ ವೈಭವ' ಮೇರುಕೃತಿ; ಒಂದು ವಿಶಿಷ್ಟ ಶೈಲಿಯ ಉದಾತ್ತ ಮತ್ತು ಉನ್ನತ ಶಿಲ್ಪ. ಕಥೆಯ ವಿಚಾರದಲ್ಲಿ ಪೂರ್ವ ಕವಿಗಳ ಮತ್ತು ಜಿನಸೇನ ಮುನಿಯ 'ಪೂರ್ವ ಪುರಾಣ'ದ ಅಂಶಗಳೇ ಕಂಡು ಬಂದರೂ ಭರತನ ಪಾತ್ರ ಕಲ್ಪನೆಯಲ್ಲಿ ಅನ್ಯಾದೃಶ ಪ್ರತಿಭೆಯನ್ನು ಮೆರೆದಿದ್ದಾನೆ. ಸಾಂಪ್ರದಾಯಿಕ ದೃಷ್ಟಿಗೆ ಭಿನ್ನವಾಗಿ, ಇಲ್ಲಿ ಭರತನನ್ನು ಬಾಹುಬಲಿಯ ಎದುರಿನಲ್ಲಿ ಕುಬ್ಜವಾಗಿಸದೆ, ಬಾಹುಬಲಿಗಿಂತಲೂ ಗುಣ, ಪರಾಕ್ರಮ ಶೌರ್ಯ, ಸಾಹಸಗಳಲ್ಲಿ, ಉದಾರತೆಯಲ್ಲಿ, ಉದಾತ್ತವಾಗಿ ಮಹೋನ್ನತನಾಗಿ ಚಿತ್ರಿಸಿದ್ದಾನೆ.

ಆದಿ ತೀರ್ಥಂಕರನ ಹಿರಿಯ ಮಗ, 16ನೇ ಮನು ಭರತ ಚಕ್ರೇಶ್ವರ ಮೋಕ್ಷಜೀವಿ; ಚಿದಂಬರ ಪುರುಷ. ಯಾವ ತೀರ್ಥಂಕರನಿಗೂ ಈ ಚಕ್ರೇಶ ಕಡಿಮೆಯಿಲ್ಲ ಎನ್ನುವುದು ಕವಿಯ ದೃಢವಾದ ನಂಬಿಕೆ. ಆದ್ದರಿಂದಲೇ ತನ್ನ ಕಥಾನಾಯಕನನ್ನು ಭಕ್ತಿ, ಗೌರವಗಳಿಂದ, ತಾದಾತ್ಮ್ಯತೆಯಿಂದ ವರ್ಣಿಸುತ್ತಾನೆ. ಭರತನ ರೂಪ, ಲಾವಣ್ಯಗಳು, ದೇಹಸೌಂದರ್ಯ, ಸೌಂದರ್ಯಕ್ಕೆ ತಕ್ಕ ಪ್ರಾಯ ಇತ್ಯಾದಿ ಇತ್ಯಾದಿಯನ್ನು ವಿವರಿಸುವ ಅವನ ಕಾವ್ಯದ ಸಾಲುಗಳು ಹೀಗಿವೆ:-

ಅಂಗವಂಗಕ್ಕೆ ತಕ್ಕ ಲಾವಣ್ಯ, ಲಾವಣ್ಯದಿಂಗಿತ ಪ್ರಾಯ ಪ್ರಾಯದೊಳು
ಸಂದಡಿಸಿದ ಸಿರಿ ಗಂಭೀರ, ವಿಕ್ರಮ, ಶೃಂಗಾರ ಶೋಭೆಯೊಳೆಸೆದಾ||

ಕೋಮಲಾಂಗನು, ಹೇಮವರ್ಣನು ಜಗವೆಲ್ಲ ಕಾಮಿಸತಕ್ಕ ಚೆನ್ನಿಗನು
ಆಮೋದವುಕ್ಕುವ ಜವ್ವನಿಗನು ಸರ್ವ | ಭೂಮೀಶರೊಡೆಯನಾ ಚಕ್ರಿ||

- ಎಂದು ಅವನ ಬಾಹ್ಯ ಸೌಂದರ್ಯದ ವರ್ಣನೆಯನ್ನು ಮಾಡಿದರೆ ಅವನ ಆತ್ಮ ಸೌಂದರ್ಯ, ವ್ಯಕ್ತಿತ್ವದ ಮಹೋನ್ನತಿಕೆಗಳು ಕಾಣುವುದು ಅವನ ಸಂಯಮ, ಇಂದ್ರಿಯ ನಿಗ್ರಹದ ನಿಲುವಿನಲ್ಲಿ.

"ಹಲವು ಮಾತೇನೊಂದು ಪೇಳ್ವೆನು ಆ ಕ್ಷತ್ರಿಯ ಕುಲರತ್ನಗಾಹಾರ ಉಂಟು|
ಮಲವಿಲ್ಲ ಮೂತ್ರವಿಲ್ಲ ಎಂದರೀ ಲೋಕದ ಬಳಕೆಗಾರರ ಪೇಳ್ವೆ ತೆರನೆ||

- ಎನ್ನುವಲ್ಲಿ ಭರತನದು ಯೋಗಸಿದ್ಧಿಯಿಂದ ರೂಢಿಸಿಕೊಂಡ ವ್ಯಕ್ತಿತ್ವ. ಆಹಾರವಿದ್ದರೂ ಮಲಮೂತ್ರಗಳ ಬಾಧೆಯಿಲ್ಲ: ಏಕೆಂದರೆ ಅವನು ಲೋಗರಿಗಿಂತ ವಿಶಿಷ್ಟನಾದವನು. ಅವನು ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ. ಯೋಗ ಭೋಗಗಳೆರಡನ್ನೂ ಸಮದೃಷ್ಟಿಯಿಂದ ಸ್ವೀಕರಿಸಿದವನು. ಭೋಗ ಸ್ಥಿತಿಯಿಂದ ಯೋಗಕ್ಕೆ, ಯೋಗ ಸ್ಥಿತಿಯಿಂದ ಭೋಗಕ್ಕೆ ಸಲೀಸಾಗಿ ಇಳಿದು ಈಜಾಡಬಲ್ಲ. ಬದುಕಿನಲ್ಲಿನ ಯಾವುದೇ ಸುಖವನ್ನು ನಿರಾಕರಿಸಿದವನಲ್ಲ. ರಾಜ್ಯ, ಅಧಿಕಾರ, ಅಂತಸ್ತು, ರತಿಸುಖ, ರಸಿಕತೆ - ಯಾವುದನ್ನೂ ಬಿಟ್ಟವನಲ್ಲ.

ರತ್ನಾಕರ, ಭರತೇಶನ ಬಹುಮುಖ ವ್ಯಕ್ತಿತ್ವವನ್ನು ಎಷ್ಟೆಷ್ಟು ಬಗೆಯಲ್ಲಿ ಸಾಧ್ಯವೋ ಅಷ್ಟಷ್ಟು ಬಗೆಯಲ್ಲಿ ಹೊಗಳಿ ಹೊಗಳಿ ವಿವರಿಸಿದ್ದಾನೆ. ಹಾಡಿ ಹೊಗಳುವುದರಲ್ಲಿ ಅವನಿಗೆ ದಣಿವೇ ಇಲ್ಲ. ಭರತೇಶನ ವ್ಯಕ್ತಿತ್ವವೇ ಅದ್ಭುತ ವರ್ಣರಂಜಿತ ಚಿತ್ರಪಟ. ಮೇರು ಸದೃಶನಾದ ಅವನ ವ್ಯಕ್ತಿತ್ವದ ಉನ್ಮೀಲನವೇ ಇಡೀ ಕಾವ್ಯದ ಆಶಯ.

ಭರತೇಶನದು ವಿಶಾಲ ವ್ಯಕ್ತಿತ್ವ; ಮಹಾವಟವೃಕ್ಷದಂತೆ ಎಲ್ಲರನ್ನೂ ಎಲ್ಲ ಸಂಬಂಧಗಳ ನೆಲೆಯಲ್ಲಿ ತನ್ನ ಪ್ರೀತಿಯ ತೆಕ್ಕೆಗೆ, ಆಂತರ್ಯಕ್ಕೆ ತೆಗೆದುಕೊಳ್ಳುತ್ತಾನೆ. ಅವರವರ ವಯೋಗುಣ ಸ್ಥಾನಮಾನಗಳಿಗೆ ತಕ್ಕಂತೆ ಅವರೊಂದಿಗೆ ವ್ಯವಹರಿಸುತ್ತಾನೆ. ಮನೆಯವರು, ಆಪ್ತರು, ಅಧಿಕಾರಿಗಳು ಸೇವಕರು - ಎಲ್ಲರಿಗೂ ಭರತೇಶನ ಬಗ್ಗೆ ಮೆಚ್ಚುಗೆಯಿದೆ. ಅವನ ನಡೆ, ನುಡಿ, ಶೌರ್ಯ, ಸಾಹಸ, ರಸಿಕತೆ, ಕಲೋಪಾಸನೆ ಜೊತೆಗೆ ಅಧ್ಯಾತ್ಮಿಕ ಎತ್ತರಗಳ ಪರಿಚಯವಿದೆ. ರತ್ನಾಕರನಂತೂ ಭೋಗ ಸಂಧಿ, ದಿಗ್ವಿಜಯ ಸಂಧಿ, ಯೋಗ ಸಂಧಿಗಳಲ್ಲಿ ಭರತೇಶನ ವ್ಯಕ್ತಿತ್ವದ ಎಲ್ಲ ಮುಖಗಳನ್ನು ಅದ್ಭುತವಾಗಿ ಪರಿಚಯಿಸಿ, ಭೋಗ-ಯೋಗಗಳೆರಡನ್ನೂ ತನ್ನ ಬದುಕಿನಲ್ಲಿ ಸಮನ್ವಿತಗೊಳಿಸಿಕೊಂಡಿದ್ದ ಪರಿಯನ್ನು ಹಲವು ಸನ್ನಿವೇಶಗಳ ಮೂಲಕ ವಿವರಿಸಿದ್ದಾನೆ. "ವಿಷಯ ವಿಷವನುಂಡು ದಕ್ಕಿಸಬಲ್ಲ ನಿರ್ವಿಷಸಿದ್ಧ; ವಿಷಮ ಚಿತ್ತವನಾತ್ಮನೊಳು ನಿಲಿಸಿದ ರಾಜಋಷಿ" - ಎಂದು ಸಂಕ್ಷೇಪವಾಗಿ ಯೋಗ - ಭೋಗಗಳ ಅನನ್ಯ ವ್ಯಕ್ತಿತ್ವದ ಭರತೇಶನನ್ನು ಪರಿಚಯಿಸುತ್ತಾನೆ.

ಭಾಗವತ ಸಂಪ್ರದಾಯದ ಕೃಷ್ಣನಿಗೆ 16,000 ಗೋಪಿಕೆಯರಿದ್ದರೆ, ಭರತೇಶನಿಗೆ 96,000 ಮಡದಿಯರು. 100 ಜನ ತಮ್ಮಂದಿರು, ತಂಗಿಯರು; ತಂದೆ ತಾಯಿ ಬಳಗ ಪರಿಜನ, ಪುರಜನ- ಹೀಗೆ ಯಾವುದೇ ಬಗೆಯ ಸಂಬಂಧವಿರಲಿ, ಯಾರ ಮನಸ್ಸಿಗೂ ನೋವಾಗದಂತೆ

ನಡೆದುಕೊಳ್ಳುತ್ತಾನೆ; ನಡೆಸಿಕೊಳ್ಳುತ್ತಾನೆ. ಅವರವರ ಅಭಿರುಚಿ, ಇಂಗಿತಗಳನ್ನು, ಆಸಕ್ತಿಗಳನ್ನು ಆಶಯಗಳನ್ನು ಗ್ರಹಿಸಿ, ವ್ಯಕ್ತಿಗತ ಆಸಕ್ತಿಯಿಂದ ಪುರಸ್ಕರಿಸುತ್ತಾನೆ; ಪೂಜಿಸುತ್ತಾನೆ; ಗೌರವಿಸುತ್ತಾನೆ; ಆಲಿಸುತ್ತಾನೆ; ಲಾಲಿಸುತ್ತಾನೆ; ಲಲ್ಲೆ ಮಾಡುತ್ತಾನೆ; ರಮಿಸುತ್ತಾನೆ; ರಂಜಿಸುತ್ತಾನೆ. ವಿಶ್ವಕುಂಟುಂಬಿಯಂತೆ ವಿಶಾಲವಾದ ತನ್ನ ಪರಿವಾರವನ್ನು, ಪರಿವಾರದವರನ್ನು ತೂಗಿಸಿಕೊಂಡು ಹೋಗುತ್ತಾನೆ.

ಕುಟುಂಬದ ಹೊಣೆಯಂತೆ ಅವನ ಕಾರ್ಯಭಾರದ ಹೊಣೆಯೂ ಬಹುದೊಡ್ಡದು. ಕಾರ್ಯಕ್ಷೇತ್ರವೂ ವಿಶಾಲವಾದುದು. ರಾಜ್ಯ ನಿರ್ವಹಣೆ, ದಂಡಯಾತ್ರೆ, ಅಧ್ಯಾತ್ಮಗಳ ನಡುವೆಯೂ ದಣಿಯದ ಜೀವನೋತ್ಸಾಹ. ಮದನಾವತಾರನಾದ ಭರತೇಶನ ರಸಿಕತೆಗೆ, ಶೃಂಗಾರ ಪ್ರೀತಿಗೆ ಕೊರತೆಯಿಲ್ಲ. ಅದಕ್ಕೇ ಅವನನ್ನು ಕವಿ ರಸಿಕ ಚಕ್ರವರ್ತಿ, ಶೃಂಗಾರ ಸಾರ್ವಭೌಮ, ಸರಸಿ, ವಿನೋದ ಪ್ರಿಯ, ಕಲೋಪಾಸಕ, ಕಲಾಪೋಷಕ ಎಂದೆಲ್ಲಾ ಮುಕ್ತವಾಗಿ ಹಾಡಿ ಹೊಗಳಿದ್ದಾನೆ. ತೊಂಬತ್ತಾರು ಸಾವಿರ ಮಡದಿಯರಿದ್ದರೂ ವಿರಸಕ್ಕೆ ಎನಿತೂ ಎಡೆಯಿಲ್ಲ. ಒಂದು ವೇಳೆ ವಿರಸದ ಕಿಡಿ ಹಾರಿದರೂ ಅದನ್ನು ತಣಿಸಿ, ವಿರಸವನ್ನು ಸರಸವಾಗಿ ಮಾರ್ಪಡಿಸಬಲ್ಲ ಜಾಣ್ಮೆ ಅವನಲ್ಲಿದೆ. ತಾಳ್ಮೆಯೂ ಸಾಕಷ್ಟಿದೆ. ತನ್ನನ್ನು ಸಮೀಪಿಸುವ ಯಾರೊಂದಿಗಾದರೂ ಭರತನದು ಇದೇ ಧೋರಣೆ. ಮುನಿದ ಮಡದಿಯರನ್ನು ತಣಿಸುವ ಒಂದು ಸನ್ನಿವೇಶದಲ್ಲಿ ಅವನು ನಡೆದುಕೊಂಡ ರೀತಿಯೇ ಅವನ ಈ ಬಗೆಯ ವ್ಯಕ್ತಿತ್ವಕ್ಕೆ ನಿದರ್ಶನವಾಗಿದೆ.

ರೂಪಾಣಿ ಪದ್ಮಿನಿಯರೆಂಬ ಪಾತ್ರಕಾಂತೆಯರು ಅರಸನನ್ನು ಮೆಚ್ಚಿಸಲು ಮೈಮರೆತು ಭಾವಪರವಶರಾಗಿ ಅದ್ಭುತ ನಾಟ್ಯ ಪ್ರದರ್ಶನವನ್ನು ನೀಡಿ, ಅರಸನಿಂದ ಪ್ರಶಂಸೆ ಪ್ರಶಸ್ತಿ, ಪುರಸ್ಕಾರಗಳನ್ನು ನಿರೀಕ್ಷಿಸಿದವರಿಗೆ, ಅರಸನು ತಮ್ಮ ನಾಟ್ಯವನ್ನು ಮನಸಿಟ್ಟು ನೋಡಲಿಲ್ಲವೆಂಬ ಅನುಮಾನ ಬಂದು ಅವನಿಗೆ ಮುಖ ತೋರದೆ ದೂರ ಪರದೆಯ ಹಿಂದೆ ಹೋಗಿ ನಿಲ್ಲುತ್ತಾರೆ. ಈ ಹೆಣ್ಣುಗಳ ಮುನಿಸಿನ ಸೂಕ್ಷ್ಮವರಿತು ಅವರಿಗೆ ಹೇಳಿ ಕಳುಹಿಸಿ ಅವರಿಗೆ ಸಮಾಧಾನ ಮಾಡುವ ಸನ್ನಿವೇಶ ನಾಟ್ಯೀಕೃತವಾಗಿ ಮೂಡಿ ನಿಂತಿದೆ.

> **ರೂಪಾಣಿ ಬಾರಲೆ ಪದ್ಮಾಣಿ ಬಾರ ಸಮೀಪಕೆ ನಿಮ್ಮ ಮನಸಿನ**
> **ತಾಪವ ಕಿಡಿಸುವೆನೆಂದು ಗದ್ದುಗೆಯೊಳಿದ್ದಾಪೂರ್ವಚಕ್ರಿ ಕರೆದನು||**
>
> **ದೇವ ನೀನೆಮ್ಮನೇತಕೆ ಕರೆವುದು ನಾವು ಭಾವಕೆ ಬಪ್ಪ ಪಾತ್ರಗಳೇ**
> **ಆವ ಮೋರೆಯೊಳು ನಿನ್ನೊತ್ತಿಗೆ ಬಹೆವೆಂದು ನೋವನೆ ತೋರಿ - ನುಡಿದರು.||**
>
> **ಕಣ್ಣಿಚ್ಛೆಯಾದರೆ ಮನದಿಚ್ಛೆಯಹುದೈಸೆ ಕಣ್ಣಿಚ್ಛೆಯಲ್ಲದ ನಮ್ಮ**
> **ಬಣ್ಣಗಾರಿಕೆ ಗೀಗ ಕರೆವುದೇತಕೆಯೆಂದು ಹೆಣ್ಣುಗಳನ್ನೊಂದು ನುಡಿದರು.||**
>
> **ಕೇಳಿ ತಾ ನಿಮ್ಮ ನೃತ್ಯವ ನೋಡುವಾಗ ನಾನಾಲಸ್ಯವಡೆದುದಿಲ್ಲ**
> **ಬೀಳೆಯುಗೊಳಲೊಮ್ಮೆ ಮೊಗದಿರುಹಿರಿಂತು ತಾಳಬಹುದೆ - ನೋವ ನೀವು.||**
>
> **ಸಮ್ಮುಖದೊಳಗಿದ್ದ ಮಂತ್ರಿಯ ನೋಡದೆ ನಿಮ್ಮನೆ ನಾ ನೋಡುತಿರಲು**
> **ಹೆಮ್ಮಕ್ಕಳನು ನೋಡುತ್ತಿದ್ದನಧಿಕ ಕಾಮಿಯುಮ್ಮಾಯೆನ್ನನೆ - ಮಂತ್ರಿ ನ.||**

- ಎಂದು ಜಾಣ್ಮೆಯಿಂದ ಅವರ ಆರೋಪಗಳಿಂದ ತಪ್ಪಿಸಿಕೊಳ್ಳುತ್ತಾನೆ.

ಭರತೇಶನಿಗೆ ಅರಸನೆಂಬ ಅಹಂಕಾರವಿಲ್ಲ; ಗಂಡೆಂಬ ಗರ್ವವಿಲ್ಲ. ಅವನ ಕೌಟುಂಬಿಕ ಯಶಸ್ಸಿಗೆ ಇದೇ ಕಾರಣ. ಪ್ರಲಯವಾಗಬಹುದಾದ ಸನ್ನಿವೇಶವೂ ಶಾಂತವಾಗಿ, ಮುನಿಸೂ ಮಾಯವಾಗಿ ಸೌಹಾರ್ದದ ಮಲಯಮಾರುತ ಬೀಸುತ್ತದೆ. ಹೆಂಗಸರ ಬಗ್ಗೆ, ಮಡದಿಯರ ಬಗ್ಗೆ ಉದಾರಭಾವವಿದೆ; ಉದಾತ್ತ ಭಾವವಿದೆ. ಅವನಿಗೆ ಮಡದಿಯರು ಕೇವಲ ಭೋಗ ಸಾಮಾಗ್ರಿಗಳಲ್ಲ. ಶೃಂಗಾರ ಪುತ್ಥಳಿಗಳಲ್ಲ. ಅವರಿಗೂ ಆತ್ಮವಿದೆ; ಆಂತರ್ಯವಿದೆ; ಆಸೆ-ಆಕಾಂಕ್ಷೆಗಳಿವೆ; ಪ್ರತಿಭೆಯಿದೆ; ಆತ್ಮ ಗೌರವ, ಸ್ವಾಭಿಮಾನಗಳಿವೆ - ಎಂಬುದನ್ನು ಗುರುತಿಸಿದ್ದ. ಅಂತೆಯೇ ಅವರನ್ನು ಎಲ್ಲ ರೀತಿಯಿಂದಲೂ ಪ್ರೋತ್ಸಾಹಿಸುತ್ತಿದ್ದ. ಅವರವರಲ್ಲಿನ ಪ್ರತಿಭೆ, ಆಸಕ್ತಿಗಳನ್ನು ಗುರುತಿಸಿ, ಅವುಗಳಲ್ಲಿ ಮುಂದುವರೆಯಲು ತನ್ನ ಮೆಚ್ಚುಗೆಯ ಮೂಲಕ ಉತ್ತೇಜನವೀಯುತ್ತಿದ್ದ. ಅವನ ರಾಣಿಯರಲ್ಲಿ ಅಖಂಡವಾದ ಕಲಾ ಪ್ರತಿಭೆಯಿದೆ. ಅವರಲ್ಲಿ ರತ್ನಾಕರನ ದೃಷ್ಟಿಯಲ್ಲಿ ಸ್ತ್ರೀರತ್ನಗಳು ಯಾರಿಗಾದರೂ ಕರುಬುವಂತಹ ರೂಪ ಲಾವಣ್ಯ, ಪಾಂಡಿತ್ಯ ಪ್ರತಿಭೆಯಿದೆ. ಗಾಯಕಿಯರು, ನರ್ತಕಿಯರು, ವಾದ್ಯ ಸಂಗೀತ ಕಲಾವಿದೆಯರು, ಚಿತ್ರಕಲಾವಿದರು, ಕವಯತ್ರಿಯರು - ಹೀಗೆ ಪ್ರಪಂಚದಲ್ಲಿನ ಪ್ರತಿಭೆಯ ಹೊನಲುಗಳೆಲ್ಲ ಒಂದೆಡೆ ಸಂಗಮಿಸಿದ ರೀತಿಯಲ್ಲಿ ಅವನ ರಾಣಿಯರೆಲ್ಲ ಅವನ ಅಂತಃಪುರದಲ್ಲಿ ಕೂಡಿ ದಟ್ಟಣಿಸಿದ್ದಾರೆ. ಭರತೇಶ ಸರದಿಯಂತೆ ತನ್ನ ರಾಣಿಯರೆಲ್ಲರ ಆತಿಥ್ಯ ಸ್ವೀಕರಿಸಿ, ಅವರು ಅವನಿಗೆ ಅರ್ಪಿಸುವ ಕಲಾಸೇವೆಯನ್ನು ಮನದುಂಬಿ ಮೆಚ್ಚಿ ಮೆಚ್ಚುಕೊಟ್ಟು ತಣಿಸುತ್ತಿದ್ದ. 'ಕುಸುಮಾಜಿ' ಎಂಬ ರಾಣಿಯಂತೂ ತನ್ನ ಅಮೋಘವಾದ ಕಾವ್ಯ ಪ್ರತಿಭೆಯಿಂದ 'ರಾಜ ಲಾವಣ್ಯ'ವೆಂಬ ಕಾವ್ಯವನ್ನು ಬರೆದು ಭರತೇಶನ ಪ್ರೇಮವನ್ನು ಅಮರಗೊಳಿಸುತ್ತಾಳೆ. ಭರತೇಶನೂ ಅದಕ್ಕೆ ತಕ್ಕಂತೆ ರಾಣಿಯರ ಕಾವ್ಯ ಪ್ರತಿಭೆಗೆ ಸನ್ಮಾನ ಸಲ್ಲಿಸುತ್ತಾನೆ. ಕಾವ್ಯ ರಚನೆಗೆ ಕಾರಣವಾದ ಅಮರಾಜಿ ಸುಮನಾಜಿಯರಿಗೆ, ರಸಮೂರ್ಛೆಗೆ ಸಲ್ಲುವಷ್ಟರ ಮಟ್ಟಿಗೆ ಮೆಚ್ಚುಗೊಡುತ್ತಾನೆ. ಪ್ರೋತ್ಸಾಹ ಪುರಸ್ಕಾರಗಳಿಲ್ಲದೆ ಮುರುಟಿ ಹೋಗಬಹುದಾಗಿದ್ದ ಕಾವ್ಯ ಪ್ರತಿಭೆಯನ್ನು ಗುರುತಿಸಿ ಮೆಚ್ಚಿ ಮಡಲಿರಿದು ಹರಡುವಂತೆ ಮಾಡುತ್ತಾನೆ. ಭರತೇಶನ ಬರವೇ ತಮ್ಮ ಅದೃಷ್ಟದ ಬಾಗಿಲು ತೆರೆದಂತೆ ಎಂದು ಭಾವಿಸಿದ್ದ ರಾಣಿಯರಿಗೆ, ಭರತೇಶ ಭೋಜನಕ್ಕೆ ಬರಲು ಒಪ್ಪಿದ್ದೇ ಕುಸುಮಾಜಿ ಸಂಭ್ರಮದ ಸಿದ್ಧತೆಗಳನ್ನು ಮಾಡಿಕೊಂಡು ತನ್ನ ಪುಟ್ಟ ತಂಗಿ ಮಕರಂದಾಜಿಯನ್ನು ಭಾವನನ್ನು ಕರೆತರಲು ಕಳಿಸಿದಾಗ, ಭರತೇಶ ಸಾಮಾನ್ಯ ಸಂಸಾರಿಗರಂತೆ ಅವಳೊಂದಿಗೆ ಸರಸವಾಡುತ್ತಾ, ಛೇಡಿಸುತ್ತ ಪೀಡಿಸಿದ ಸಂದರ್ಭವಂತೂ ಕನ್ನಡ ಸಾಹಿತ್ಯದಲ್ಲಿಯೇ ಅಪೂರ್ವವೆನಿಸುತ್ತದೆ. "ಅನುಕೂಲವಾದುದಾರೋಗಣೆಗಿನ್ನೆಮ್ಮ ಮನೆಗೇಳಿ ಭಾವಾಜಿ" ಎಂದವಳನ್ನು "ಇಂದಾನು ನಿನ್ನ ಮನೆಗೆ ಬಹುದುಚಿತವೇ | ಬಂದರೆ ವರುಷದ ಮೇಲೆ ಬಂದು ನೀನೆನ್ನ ಕರೆದರಾನು ಬಹೆನು ಹೋಗು" ಎನ್ನುವ ಭರತೇಶನನ್ನು ಈ ನಾದಿನಿ ಸುಮ್ಮನೆ ಬಿಡುವುದಿಲ್ಲ ಸೇರಿಗೆ ಸವ್ವಾಸೇರೆಂಬಂತೆ "ಅಕ್ಕಾಜಿಮನೆಗೇಳೆಂದೆ ನೀನಿಂತು ಠಕ್ಕಿನ ಮಾತನಾಡದಿರು" - ಎಂದು ಬಾಯಿಮುಚ್ಚಿಸಲು ಪ್ರಯತ್ನಿಸುತ್ತಾಳೆ. ಹೀಗೆ ಮಾತು ಮುಂದುವರೆದು "ಈಕೆ ತಾನೇನು ಕಾತರೆಯೋ" ಎಂದು ಛೇಡಿಸಿಯೇ ಸುಮ್ಮನಾಗುತ್ತಾನೆ.

ರತ್ನಾಕರ ಭರತೇಶನನ್ನು ಕೇವಲ ಒಬ್ಬ ಷಟ್ಖಂಡ ಚಕ್ರವರ್ತಿ, ಆಡಳಿತಾಧಿಕಾರಿಯಾಗಿ, ವೀರ ಪುರುಷನಾಗಿ ಮಾತ್ರ ಪರಿಗಣಿಸದೆ ಅವನ ಕೌಟುಂಬಿಕ ಚಿತ್ರಣ, ಕುಟುಂಬದವರೊಂದಿಗೆ ಅವನು ವಿಭಿನ್ನ ಸನ್ನಿವೇಶಗಳಲ್ಲಿ, ನಗೆ, ಕೀಟಲೆ, ಮೆಚ್ಚು, ಮುನಿಸು, ನಯ ವಿನಯ ಹೀಗೆ ಹಲವಾರು ರೀತಿಗಳಲ್ಲಿ ವಿಭಿನ್ನ ಭಾವ ಸ್ಥಾಯಿಗಳಲ್ಲಿ ಸಾಮಾನ್ಯ ಸಂಸಾರಿಗರಂತೆ ಚಿತ್ರಿಸಿದ್ದಾನೆ. ಅದಕ್ಕೇ ಅವನ ಕಾವ್ಯ ಓದುಗರಿಗೆ ಅತ್ಯಂತ ಆಪ್ತವೂ ಹೃದಯಂಗಮವೂ ಆಗಿ ಪರಿಣಮಿಸಿದೆ. ಬಯಸಿದವರಿಗೆ ಧಾರಾಳವಾಗಿ ಪ್ರೀತಿಯೆರೆಯುತ್ತಾನೆ.

ಅವನೊಬ್ಬ ಅಸಾಮಾನ್ಯ ರಾಜ ಪುರುಷ. ಸಾಹಸಿ. ಕೆಲವೊಮ್ಮೆ ಅವನ ಸಾಹಸ ಪರಾಕ್ರಮಗಳ ಬಗ್ಗೆ ಒಡಕು ಮಾತು ಕೇಳಿ ಬಂದಾಗ, ಅವರನ್ನು ಕರೆದು ಶಿಕ್ಷಿಸುವುದಿಲ್ಲ. ತನ್ನ ಬಲ ಪರಾಕ್ರಮಗಳು ಅವರಿಗೇ ಮನದಟ್ಟಾಗುವಂತೆ ಸನ್ನಿವೇಶಗಳನ್ನು ನಿರ್ಮಿಸುತ್ತಾನೆ. ಒಮ್ಮೆ ಸೈನಿಕರು ಒಂದಿಬ್ಬರು, ತಾವಿಲ್ಲದೆ ರಾಜನ ಸಾಮರ್ಥ್ಯವೇನಿದೆ ಎಂದು ರಾತ್ರಿಯಲ್ಲಿ ಮಾತನಾಡಿಕೊಳ್ಳುತ್ತಿದ್ದುದನ್ನು ಕೇಳಿ ಮರುದಿವಸ ತನ್ನ ಬಲ ಪ್ರದರ್ಶನಕ್ಕೆ ಒಂದು ಉಪಾಯ ಹೂಡುತ್ತಾನೆ. ಕಿರು ಬೆರಳೊಂದು ಬಾಗಿರುವುದನ್ನು ನೆಟ್ಟಗೆ ಮಾಡಲು ಆಹ್ವಾನಿಸಿದಾಗ, ಸರಪಣಿಗಳಿಂದ ಕಟ್ಟಿ ಬೆರಳನ್ನು ಸೈನಿಕರೆಲ್ಲರೂ ಎಳೆದರೂ ನೇರವಾಗದಿರುವುದನ್ನು ಕಂಡು ಅಪರಾಧಿಗಳಿಗೆ ಅವಮಾನವಾದಂತಾಗಿ ಕ್ಷಮೆ ಕೇಳುತ್ತಾರೆ.

ಭರತೇಶನ ವ್ಯಕ್ತಿತ್ವಕ್ಕೆ ಲೆಕ್ಕವಿಲ್ಲದಷ್ಟು ಮುಖಗಳು. ನೂರೆಂಟು ವ್ಯವಹಾರಗಳ ನಡುವೆಯೂ, ಕಾವ್ಯ ಸಂಗೀತ ನಾಟ್ಯಾದಿ ಕಲೋಪಾಸನೆ, ಸುರತ ಸುಖ, ಸಂಭ್ರಮಗಳ ನಡುವೆಯಿದ್ದೂ ಅತ್ಯಂತ ಕಾಮಿ, ಭೋಗಿ ಎನ್ನುವಷ್ಟು ತೀವ್ರವಾದ ವಿಲಾಸಿ ಜೀವನ, ಸಾಂಸಾರಿಕ ಸುಖಗಳಲ್ಲಿ ತಲ್ಲೀನನಾಗಿದ್ದೂ ಅಧ್ಯಾತ್ಮ ಚಿಂತನೆ, ಆತ್ಮವಿಚಾರ, ಅನುಭಾವ, ಜಿನಾರಾಧನೆಗಳನ್ನು ಮರೆಯುವುದಿಲ್ಲ. ಹಂಸಕಲೋಪಾಸನೆಯ ಮುಂಖಾಂತರ ಅಂದಂದಿನ ಕರ್ಮವನ್ನು ಅಂದಂದೇ ಸವೆಸಿ ಮುಕ್ತನಾಗುತ್ತಾನೆ. ಸಾಂಸಾರಿಕವಾದ, ಲೌಕಿಕವಾದ ಸುಖಭೋಗಾದಿಗಳನ್ನು ಕಷ್ಟ ಕೋಟಲೆಗಳನ್ನು ಮೀರಿ ಬದುಕಬಲ್ಲ ಜಾಣ್ಮೆ, ಭೇದ ವಿಜ್ಞಾನದ ಅರಿವುಗಳ ಮೂಲಕ ಲೋಕೋತ್ತರ ನೆಲೆಯತ್ತ ದಿಟ್ಟ ಹೆಜ್ಜೆ ಇಡುತ್ತಾನೆ. ಉಂಡುಪವಾಸಿ ಬಳಸಿಯೂ ಬ್ರಹ್ಮಚಾರಿಯಾಗಿ, ಸಂಗತ್ವದಿಂದ ನಿಸ್ಸಂಗತ್ವಗಳನ್ನು ಸಾಧಿಸಿ ಬದುಕುತ್ತಿರುವ ಪರಿಯನ್ನು ರತ್ನಾಕರನ ಮಾತುಗಳಲ್ಲಿಯೇ ಗ್ರಹಿಸಬೇಕು. ಭರತೇಶ ರಾಜಯೋಗಿ, ಅಲ್ಲದೆ "ವಿಷಯ ವಿಷವನ್ನುಂಡ ನಿರ್ವಿಷಸಿದ್ಧ; ರಾಜಋಷಿ" ಎಂದೆಲ್ಲ ವರ್ಣಿಸುವುದರ ಜೊತೆಗೆ, ಪ್ರತಿನಿತ್ಯ ಅವನು ಮುನಿಗಳಿಗೆ ಆರೋಗಣೆಗೆ ಅರ್ಪಿಸದೆ ಉಣ್ಣುವುದಿಲ್ಲ; ಅದಕ್ಕಾಗಿ ಅವರ ಬರವಿಗೆ ಅವನು, ನಿಂತ ಪರಿ ಹೀಗಿದೆ-

> "ಲೋಕವೆಲ್ಲನ್ನ ಓಲೈಸುತಿರ್ದರು ನಾನು
> ಲೋಕವ ಚೆರೆಸನೆಂಬುದನು
> ಲೋಕಕರಿಕೆ ಮಾಡಲೆಂದು ನಿಂದಂತೆ ತಾ
> ನೇಕಾಕಿಯಾಗಿರ್ದನಾಗ" -

ಮುನಿಗಳ ಭೋಜನಾನಂತರ ತಾನುಣ್ಣುವಾಗಲೂ ಮೊದಲು ಹಂಸನಾಥನಿಗೆ ಅರ್ಪಿಸಿಯೇ ತುತ್ತು ತುಟಿಗೀಯುತ್ತಾನೆ.

ಭರತನ ವ್ಯಕ್ತಿತ್ವ ಎರಡು ದೋಣಿಗಳಲ್ಲಿನ ಪಯಣದಂತೆ! ಬೇರೆಯವರಿಗೆ ಅಸಾಧ್ಯವಾದ ಇಬ್ಬಗೆಯ ಬದುಕು ಅವನಿಗೆ ಸುಲಭಸಾಧ್ಯ. ಕ್ಷಣಾರ್ಧದಲ್ಲಿ ಏಕಾಂತರವಾಗಿ, ಲೋಕಾಂತರವಾಗಿ ಅಂದರೆ ಅಂತರಂಗ ಬಹಿರಂಗಗಳಲ್ಲಿಯೂ ಅವನು ಸುಲಭ ಸಂಚಾರಿ. ಅವನ ಈ ನಿಲುವಿನ ಎರಡು ಮುಖಗಳನ್ನು ರತ್ನಾಕರನು ಹೀಗೆ ಪರಿಚಯಿಸಿದ್ದಾನೆ-

**"ಸಿಕ್ಕಿದಂತಿಹನು ಸಿಕ್ಕನು ರತಿ ಸುಖದಲ್ಲಿ | ಸೊಕ್ಕಿದಂತಿಹನು ಸೊಕ್ಕಾ||**
**ಠಕ್ಕರಂತಿಹನು ಠಕ್ಕನಲ್ಲ ನಿಜವಕ | ಣ್ಣಕ್ಕಿ ಕಂಡವನ ಲೀಲೆಯದು||**

**"ದುರ್ಗದಂತೊಮ್ಮೆ ಗ್ರಾಮುಗಳಂತೆ ಹೂವಿನ | ಕೂರ್ಗಣೆಯಂತಿಹನೊಮ್ಮೆ**
**ಸ್ವರ್ಗವೆ ಪುರುಷನಾದಂತೆ ಹೆಂಗಳಿಗೆ ಸಂಸರ್ಗ ಸುಖವ ತೋರುತಿಹನು||**

ಅಷ್ಟೆ ಅಲ್ಲ 'ರಾಜಲಾವಣ್ಯ' ಕಾವ್ಯದಲ್ಲಿ ರಾಜನರಾಣಿಯೊಬ್ಬಳ ಬಾಯಿಂದ ಭರತೇಶನು ಏಕಕಾಲದಲ್ಲಿ ಹೇಗೆ ಎಲ್ಲ ರಾಣಿಯರೊಂದಿಗೆ ಪ್ರೇಮಾತಿಶಯ ಸಂಭ್ರಮಗಳಿಂದ ನಡೆದುಕೊಂಡ ಎಂಬುದನ್ನು ವಿವರಿಸಿದ್ದಾನೆ.

**"ಅಂಬರದೊಳಗಿದ್ದ ಸೂರ್ಯನೊಬ್ಬನು ಜಲ | ತುಂಬಿದ ಹಲವು ಕುಂಭದೊಳು**
**ಬಿಂಬಿಸುವಂತೆಲ್ಲ ಪೆಂಗಳಿದೆಯೊಳೀತ | ನಿಂಬುಗೊಂಡಿಹ ಪರಿಯೇನು**

- ಎಂಬಂತೆ ಎಲ್ಲರೊಡನೆ ಕೃಷ್ಣನಂತೆ ಸರಸರಾಸಗಳಲ್ಲಿ ಜೊತೆಗಿದ್ದು ಅವರೆಲ್ಲರನ್ನೂ ಮನಸಾರೆ ತಣಿಸುವವನು ಮರುಕ್ಷಣದಲ್ಲಿ ಭವನಿಮಜ್ಜನ ಚತುರತೆಯಿಂದ ಸಂಪೂರ್ಣವಾಗಿ ಹೊರಬಂದು ಬಿಡುವ ಅವನ ಸಾಮರ್ಥ್ಯಕ್ಕೆ ಬೆರಗಾದ ಕವಿ,

**"ಎತ್ತ ಹೋದುದೋ ಹೆಂಗಳೊಡನುಬ್ಬಿನಿಂದಿಪ್ಪ|**
**ಹೊತ್ತು ತಾನಾಡಿದ ಲೀಲೆ|**
**ಪತ್ತು ಸಾವಿರ ಕಾಲ ತಪಸು ಮಾಡಿದ ಮುನಿ**
**ಪೋತ್ತಮನಂತಿರ್ದನಾಗ"**

- ಎಂದು ಉದ್ಗರಿಸುತ್ತಾನೆ.

ಭರತನಿಗೆ ಇಂದ್ರಿಯ ನಿಗ್ರಹ, ಆತ್ಮ ನಿಗ್ರಹಗಳು ಆಟವಾಡಿದಂತೆ. ಅವನು ಬಯಸಿದಾಗ ಸೇವಕರಂತೆ ಬಾ ಎಂದರೆ ಬರುವ, ಹೋಗೆಂದರೆ ಹೋಗುವ ಇಂದ್ರಿಯಗಳು ಅವನ ಅಧೀನ. ಅಂತೆಯೇ ಮನಸ್ಸೂ ಕೂಡಾ. ಪ್ರತಿಮೆ, ಹೋಲಿಕೆಗಳಿಂದ ರತ್ನಾಕರ ಭರತೇಶನನ್ನು ಸಮರ್ಥವಾಗಿ ಬಣ್ಣಿಸಿ ಅವನ ವ್ಯಕ್ತಿತ್ವವನ್ನು ವೈಭವೀಕರಿಸುವ ಪರಿ ಅನನ್ಯವಾಗಿದೆ.

**"ದೊರೆಯಿದ್ದು ಹೋಗೆನೆ ಹೋಗಿ ಬಾರೆಂದರೆ | ಬರುತಿಹ ಸೇವಕರಂತೆ**
**ಕರಣನಾಲ್ಕಿಂದ್ರಿಯವೈದವನುಸುರಿದಂ |ತಿರುತಿಹವೇನ ಬಣ್ಣಿಪೆನು ||**

**"ಬೇಕಾದರಾಡಿಸಿ ಗಾಳಿಪಟವನರ್ತಿ |ಸಾಕಾಗೆ ಸುರುಳುವನಂತೆ**
**ನೂಕಿ ಚಿತ್ತವ ಹೊರಗಾಡಿಸುವನು ತನ್ನೊ| ಳೇಕವಾಗಿರಿಸುವನೊಮ್ಮೆ||**

ಎನ್ನುವ ಸಾಲುಗಳಲ್ಲಿ ಇಂದ್ರಿಯಗಳು ಸೇವಕರಾದರೆ, ಚಿತ್ತ ಗಾಳಿಪಟದಂತಿದ್ದು ಭರತೇಶನ ಆದೇಶಕ್ಕೆ ಮಣಿದು ಅವನ ಅಧ್ಯಾತ್ಮಮನೋಧರ್ಮವನ್ನು ಪೋಷಿಸುತ್ತಿದ್ದುವೆಂಬುದನ್ನು ಸೂಚಿಸಿದ್ದಾನೆ.

ಭರತೇಶನ ಆತ್ಮಯೋಗ, ಆನಂದರಸಗಳ ಬಗ್ಗೆ ಬರೆಯುವಾಗಲೆಲ್ಲ ತನ್ನನ್ನೂ ಅದರೊಂದಿಗೆ ಅನನ್ಯವಾಗಿ ಬೆರೆಸಿಕೊಳ್ಳುತ್ತಾನೆ. ಮೈತುಂಬಿ, ಮನದುಂಬಿ ವರ್ಣಿಸುತ್ತಾನೆ. ತೀವ್ರ ಭೋಗಾಸಕ್ತಿ, ವಿಲಾಸೀ ಚಟುವಟಿಕೆಗಳಲ್ಲಿ ಶೃಂಗಾರ ಭೋಗ ರಂಗದಂಗಳದಲ್ಲಿ, ಎಲ್ಲೇ ಇರಲಿ, ಆತ್ಮಯೋಗ ನಿರತನಾಗುತ್ತಿದ್ದಂತೆ ಎಲ್ಲವೂ ಮರೆತು ಹೋಗುತ್ತದೆ. ಹಿಂದಿನ ಯಾವುದೂ ಅವನಿಗೆ ಇದ್ದಂತೆನಿಸುವುದಿಲ್ಲ. ಅಪ್ಪಿತಪ್ಪಿಯೂ ಅದರ ಬಗ್ಗೆ ಆಲೋಚಿಸುವುದಿಲ್ಲ. ಎಷ್ಟು ಸಲೀಸಾಗಿ "ಮರದನಾಗಳೆಯಿಷ್ಟು ಹೊತ್ತು ನಲ್ಲಳ ಕೂಡೆ ಮೆರೆದುದು ಹಳೆಮರಹಾಯ್ತು" ಭೋಗದ ಹಿಂದಣವಾಸನೆ ಮರೆತು ಯೋಗಮುಖಿಯಾಗುತ್ತಾನೆ. ವ್ರತ, ನೇಮ, ನಿಷ್ಠೆಗಳನ್ನು ಲೌಕಿಕ ಕಾರ್ಯಭಾರದ ಒತ್ತಡಗಳಿಂದಾಗಿ ಬಿಡುವ ಪ್ರಮೇಯವೇ ಉಳಿಯುವುದಿಲ್ಲ. ಒಮ್ಮೆ ಉಪವಾಸ ವಿದ್ದ ಮಗನಬಗ್ಗೆ ಯಶಸ್ವತಿ, ಸಿಟ್ಟಿಗೆದ್ದು, ಭರತನ ಮಡದಿಯರಲ್ಲಿ "ನಿಮಗೆ ಕೆಲಸವಿಲ್ಲ ನಿಮ್ಮಾಣ್ಮನಿಗಾದರೆ ಸುವಿವೇಕವಿನಿತಿಲ್ಲ ಅವನಿಯನಾಳುತ್ತ ಮುನಿಯಂತೆ ನಡೆವುದಿದವಿವೇಕಿಗಳ ನಡೆಯಲ್ತೆ?" - ಎಂದು ರೇಗಾಡಿವಾಗ, ತನ್ನನ್ನೇ ತಾಯಿ ಉಪವಾಸವೇಕೆಂದು ಕೇಳಿದಾಗ,

"ನರಜನ್ಮ ಪಡೆವಾಗ ತಾಳ್ವಷ್ಟು ವ್ರತದೊಳಾಚರಿಸಬೇಕೆಲ್ಲರು ತಾಯೇ|
ಮರುಳಾಗಬಾರದು ಭೋಗಕಮ್ಮಾಜಿ ಬಲ್ಲರನಡೆಯಿಂತಲ್ತೆ ಜನನಿ||

- ಎಂದು ತಾಯಿಗೆ ಬುದ್ಧಿ ಹೇಳುತ್ತಾನೆ. ಮನುಷ್ಯ ಜನ್ಮ ಪಡೆದ ಮೇಲೆ ನಮಗೆ ಸಾಧ್ಯವಾದಷ್ಟು ಮಟ್ಟಿಗೆ ವ್ರತನೇಮ ಅನಿವಾರ್ಯ. ಕೇವಲ ಭೋಗಾಸಕ್ತರಾಗಿಯೇ ಬದುಕಬಾರದು ಎನ್ನುವುದು ಭರತೇಶನ ನಂಬಿಕೆ.

ಭರತೇಶನದು ಅನನ್ಯ ವ್ಯಕ್ತಿತ್ವ. ರಾಜನಾಗಿಯೂ ರಾಜ್ಯದಾಹವಿಲ್ಲ. ಭೋಗಿಯಾಗಿದ್ದೂ ಭೋಗ ಮೋಹವಿಲ್ಲ ರಾಜಧರ್ಮವಾಗಿ ದಿಗ್ವಿಜಯ ಯಾತ್ರೆಗೆ ಹೊರಡುತ್ತಾನೆಯೇ ಹೊರತಾಗಿ, ರಾಜ್ಯಾಕಾಂಕ್ಷೆಯಿಂದಲ್ಲ. ಇಲ್ಲಿನ 'ಭರತ' ಉಳಿದ ಜೈನ ಕಾವ್ಯ ಪುರಾಣಗಳಲ್ಲಿನ ಭರತನಿಗಿಂತ ಬೇರೆಯಾಗಿಯೇ ಚಿತ್ರಿತನಾಗಿದ್ದಾನೆ. ಸಾಂಪ್ರದಾಯಿಕ ಕಥಾಹಂದರದಲ್ಲಿ ಬಾಹುಬಲಿ ಭರತನ ಮೇಲೆ ದಿಗ್ವಿಜಯವನ್ನು ಸಾಧಿಸಿಯೂ ಸಂಸಾರದ ನಶ್ವರತೆಗೆ ಹೇಸಿ, ವಿರಕ್ತನಾಗಿ ರಾಜ್ಯವನ್ನೆಲ್ಲ ಅಣ್ಣನಿಗೆ ಧಾರೆಯೆರೆದು ಹೋದರೆ, ಇಲ್ಲಿ ರತ್ನಾಕರನ ಕಾವ್ಯದಲ್ಲಿ ಪ್ರಸಂಗವೇ ತಿರುಗುಮುರುಗಾಗಿದೆ. ಸಕುಟುಂಬ, ಸಪರಿವಾರ ದಿಗ್ವಿಜಯ ಯಾತ್ರೆಯನ್ನು ಕೈಗೊಂಡು ರಾಜ್ಯಗಳನ್ನು ಗೆಲ್ಲುತ್ತ ಪೌದನಪುರದತ್ತ ಬಂದು ತಮ್ಮನೊಂದಿಗೆ ಮುಖಾಮುಖಿಯಾಗುವ ಸಂದರ್ಭ ಎದುರಾಗುತ್ತದೆ.

ಭರತ ಅಹಿಂಸಾವಾದಿ; ಮೃದುಮನಸ್ಸು. ಹಿರಿದಾದ ಕ್ಷಮಾಗುಣ. ಹಿಂಸಾಮೂಲವಾದ ಯುದ್ಧಗಳನ್ನು ಅವನು ಪುರಸ್ಕರಿಸುವುದಿಲ್ಲ. ಎದುರಾಳಿಗಳೊಂದಿಗೆ ನಿಷ್ಠುರವಾಗಿ ನಡೆದುಕೊಳ್ಳುವುದಿಲ್ಲ; ಸಾಧ್ಯವಾದಷ್ಟೂ ಸಮರ ವಿರಾಮ; ಶಾಂತಿಗಳನ್ನೇ ಬಯಸಿ ಮುನ್ನಡೆಯುತ್ತಾನೆ. ವಿನಾಶಕಾರಿ ಯುದ್ಧ ಅವನಿಗೂ ಅನಪೇಕ್ಷಿತವೇ! ಅದರಲ್ಲೂ ಸ್ವಜನರ, ಬಂಧುಬಾಂಧವರ, ಒಡಹುಟ್ಟಿದವರ ಜೊತೆಯಲ್ಲಿ ಯುದ್ಧ ಸನ್ನಿವೇಶ ಏರ್ಪಟ್ಟಾಗ ಅವನ ಮನಸ್ಸು ವಿಕ್ಷುಬ್ಧಗೊಳುತ್ತದೆ. ಶಾಂತಿ, ಸಮಾಧಾನಗಳಿಂದ ಘರ್ಷಣೆ, ಹಿಂಸೆ, ರಕ್ತಪಾತಗಳನ್ನು

ನಿವಾರಿಸುವ ಪ್ರಯತ್ನಕ್ಕೇ ತೊಡಗುತ್ತಾನೆ. ಆದರೆ ಈ ಎಲ್ಲ ಪ್ರಯತ್ನಗಳೂ ವಿಫಲಗೊಂಡು ಯುದ್ಧವೇ ಅನಿವಾರ್ಯವಾದಾಗ ತನ್ನೆಲ್ಲ ಶಕ್ತಿಮೀರಿ ಹೋರಾಟಕ್ಕೆ ಸಜ್ಜಾಗಿ, ದಿಗ್ವಿಜಯಿಯಾಗಿ ನಿಲ್ಲುತ್ತಾನೆ. ಇಲ್ಲಿಯೂ ಬಾಹುಬಲಿ ಅಣ್ಣನ ಆದರ್ಶ, ಉದ್ದೇಶಗಳನ್ನು ತಪ್ಪಾಗಿ ಗ್ರಹಿಸಿದ. ಬಾಹುಬಲಿ, ಯುದ್ಧ ಬೇಡವೆಂದರೂ, ಅಣ್ಣನ ಅಹಂಕಾರವನ್ನು ಮಣಿಸಬೇಕೆಂದು, ಅಧಿಕಾರವನ್ನು ಧಿಕ್ಕರಿಸಿ ಯುದ್ಧಕ್ಕೆ ಆಹ್ವಾನೀಯುತ್ತಾನೆ. ಬಾಹುಬಲಿಯ ಉದ್ಧಟತನವನ್ನು ತುಳಿದಿಕ್ಕಿ ಬುದ್ಧಿ ಕಲಿಸುವುದು ಭರತನಿಗೆ ಅಸಾಧ್ಯದ ಕೆಲಸವೇನಲ್ಲ. ಆದರೆ ಭರತ ಉದ್ಧಟನಲ್ಲ; ಅಹಂಕಾರಿಯಲ್ಲ ರಕ್ತದಾಹಿಯೂ ಅಲ್ಲ; ಹಿಂಸಾ ಪ್ರವೃತ್ತಿಯವನೂ ಅಲ್ಲ. ಜೊತೆಗೆ ಸ್ವಂತ ಒಡಹುಟ್ಟಿದ ತಮ್ಮನೊಡನೆ ಸೆಣೆಸುವುದು ಮತ್ತೂ ಸರಿಯಲ್ಲ'ವೆಂಬುದು ಭರತನ ಅಭಿಪ್ರಾಯ. ಅಣ್ಣ ತಮ್ಮಂದಿರೇ ಲೋಕದಲ್ಲಿ ಪರಸ್ಪರ ಸೆಣಸಾಟಕ್ಕೆ ನಿಲ್ಲುವುದು ಅಪಖ್ಯಾತಿಗೆ, ನಿಂದೆಗೆ ಅವಕಾಶ ಮಾಡಿಕೊಟ್ಟಂತೆ. ಆದ್ದರಿಂದ "ಸಾಹಸಪರರ ನೋಯಿಸಬೇಕು ಸ್ವಕುಟುಂಬ ದ್ರೋಹವ ಮಾಳ್ಪುದು ಗುಣವೇ" ಎಂದು ತನ್ನನ್ನೇ ಪ್ರಶ್ನಿಸಿಕೊಳ್ಳುತ್ತಾನೆ. ಹೇಗಾದರಾಗಲಿ ಅಣ್ಣತಮ್ಮಂದಿರ ನಡುವಿನ ಈ ಸಮರವನ್ನು ನಿಲ್ಲಿಸಲೇಬೇಕು" ಎಂದು ತೀರ್ಮಾನಿಸಿ, ಕಡೆಯ ಪ್ರಯತ್ನವಾಗಿ ತಮ್ಮನ ಮನವೊಲಿಸಲು, ತಿಳಿಯ ಹೇಳಲು ಮುಂದಾಗುತ್ತಾನೆ.

> **"ಮನಸಿಜ ಕೇಳಣ್ಣ ನಿನಗೆನಗಿಂದು ದುರ್ಮನದಿಂದ ಜಗಳ ವಪ್ಪುದಕ್ಕೆ|**
> **ಘುನವೇನು ಹೇಳು ನಿಷ್ಕಾರಣ ಕದನವ ಜನಪರೆಸಗುವರೆ"**
>
> **"ನಿನ್ನೊಡವೆಯ ನಾ ಕೊಂಡುದಿಲ್ಲಣ್ಣ ನೀನೆನ್ನೊಡವೆಯ**
> **ಕೊಂಡುದಿಲ್ಲ ಮುನ್ನಯ್ಯನಿರಿಸಿದಂದದಿ ರಾಜ ಯುವರಾಜ ಸನ್ನಾಹದೊಳಗಿರ್ದೆವಲ್ತೆ"**
>
> **"ಆಗಲಾಗಲಿ ದೋಷವಿಲ್ಲಣ್ಣತಮ್ಮಂದಿರಾಗಿಯು ನೋವಹುದಕೆ**
> **ಹಾಗದ ತೆರಿಗೆ ಬೇಕೆಂದು ನಾ ನಿನ್ನೂರ ಬಾಗಿಲ್ಗೆ ಭಟರನಟ್ಟಿದೆನೆ"**
>
> **"ನಿನಗಾಸು ಹಗೆಯೆ ನೀನೆನಗೆ ಹಗೆಯೆ ಹೇಳು ಜನಪಪುತ್ರರಿದನು - ನಾವಿಂದು**
> **ನೆಣ್ಣೆದಾಗ ಮುಂದೆ ಸಮಸ್ತರ್ಗೆ ದ್ರೋಹಶಾಸನವ ಬರೆದು ಕೊಟ್ಟಿನವಲ್ತೆ**

ಎಂದು ಹಿತಮಿತವಾದ ಪ್ರೀತಿಯ ಮಾತುಗಳಾಡಿ ಅಣ್ಣ ತಮ್ಮಂದಿರ ಈ ಬಗೆಯ ಯುದ್ಧದಿಂದ ಲೋಕಾಪವಾದ ಬರುವುದಲ್ಲದೆ, ನಮ್ಮನ್ನು ಈ ಲೋಕ ಧಿಃಕರಿಸುತ್ತದೆ. ಅಲ್ಲದೆ ತನಗೇನೂ ಈ ರಾಜ್ಯದ ಬಗ್ಗೆಯಾಗಲೀ, ರಾಜತ್ವದ ಬಗ್ಗೆಯಾಗಲೀ ಮೋಹವಿಲ್ಲ. ಮೊದಲಿನಿಂದಲೂ ಅದರ ಬಗ್ಗೆ ಉದಾಸೀನ ಭಾವದಿಂದಳೇ ನಡೆದು ಕೊಳ್ಳುತ್ತಿದ್ದೇನೆ, ಆದ್ದರಿಂದ ಯುದ್ಧವಿಲ್ಲದೆಯೇ ನೀನಿದನ್ನು ಸ್ವೀಕರಿಸು ಮುಂದೆ ನೀನೇ ಇದಕ್ಕೆ ಚಕ್ರವರ್ತಿ' ಎಂದು ಪರಿಪರಿಯಾಗಿ ಅವನನ್ನು ಒಲಿಸಲು ನಡೆಸಿದ ಭರತನ ಪ್ರಯತ್ನಗಳು ಸಫಲವಾಗುತ್ತವೆ" ಗರುಡ ಮಂತ್ರಕೆ ವಿಷವಿಳಿದಂತೆ, ಬಾಹುಬಲಿಯ ಕೋಪ ಸರ್ರನೆ ಇಳಿದು ಅವನ ಹೃದಯ ಶಾಂತವಾಗುತ್ತದೆ. ಇಂತಹ ಉದಾತ್ತ ಮನಸ್ಸಿನ, ರಾಜ್ಯಭೋಗ ನಿರಾಸಕ್ತನಾದ ಅಣ್ಣನ ಅಂತರ್ಯವರಿಯದೆ ವಿನಾಕಾರಣ ಯುದ್ಧಕ್ಕೆ ಸೆಟೆದು ನಿಂತು, ತನ್ನ ಉದ್ಧಟತೆಯಿಂದಾಗಿ ಅಣ್ಣನ ಮನಸ್ಸನ್ನು ನೋಯಿಸಿದ್ದಕ್ಕಾಗಿ ಅವನಲ್ಲಿ ಅಪರಾಧೀ ಭಾವ ಹೆಡೆಯೆತ್ತಿ ಜರ್ಝರಿತನಾಗಿ 'ದೇವರು ಕ್ಷಮಿಸುವುದೆನ್ನದು ತಪ್ಪಾಯ್ತು' ಎಂದು ಭಾವಶುದ್ಧಿಯಿಂದ ಕೈಮುಗಿದು,

"ಅಣ್ಣನಿಗಿದಿರೊಡ್ಡಿನಿಂದ ದೇಹವ ಮಸಿ ಮಾಳ್ಪೆನು ತಪಕೊಡ್ಡಿ
ಉಣ್ಣದುರಿವ ಕರ್ಮಗಳ ಸುಟ್ಟು ಮೋಕ್ಷಕೆ ಪೊಣ್ಣವೆಯ್ದುವೆನು" -

ಎಂದು ಪ್ರತಿಜ್ಞೆಗೈಯುತ್ತಾನೆ. ತಪಗಿಪ ಸಲ್ಲದು. ಮೋಕ್ಷದ ವಿಚಾರವಾಗಿ ಮುಂದೆ ಎಂದಾದರೂ ಯೋಚಿಸಿಕೊಳ್ಳಬಹುದು ದೀಕ್ಷೆ ಗೀಕ್ಷೆಯ ಪ್ರಸ್ತಾಪ ಬೇಡ ಎಂದು ಭರತ ಬಾಹುಬಲಿಗೆ ಎಷ್ಟೇ ಸಮಾಧಾನ ಹೇಳಿದರೂ ಒಲ್ಲದೆ,

"ಪುರುನಾಥನಾಣೆ ದೇವರ ಪಾದದಾಣೆ ಶ್ರೀಗುರು ಹಂಸನಾಥನೆ ಸಾಕ್ಷಿ
ಇರೆನು ದೀಕ್ಷೆಗೆ ನನ್ನ ಕಳುಹ ಚಿತ್ತೈಸೆಂದು ಚರಣಾಬ್ಜದೊಳು - ಮಂಡೆಯಿಟ್ಟು" -

ಹೊರಟೇ ಬಿಡುತ್ತಾನೆ. ಇಲ್ಲಿ ಭರತನದೇ ಮೇಲುಗೈ. ಭರತ ಬಾಹುಬಲಿಯ ಈ ಸಂದರ್ಭ ಜೈನ ಪರಿಕಲ್ಪನೆಯಲ್ಲಿ ಅಸಾಂಪ್ರದಾಯಿಕವೆನಿಸಿದರೂ, ರತ್ನಾಕರನ ಕಾವ್ಯದೃಷ್ಟಿ, ಕಾವ್ಯದ ಆಶಯಗಳಿಗೆ ಅನುರೂಪವಾಗಿದೆ. ಭರತ ರಾಜಯೋಗಿ, ಕರ್ಮಯೋಗಿ. ಸ್ಥಿತ ಪ್ರಜ್ಞ. ನಮ್ಮ ವೈದಿಕ ಪರಂಪರೆಯಲ್ಲಿನ ಭಾಗವತ ಸಂಪ್ರದಾಯದ ಕೃಷ್ಣನ ವರ್ಣರಂಜಿತ ವ್ಯಕ್ತಿತ್ವ, ಮಾನವನಾದರೂ ಮಾನವಾತೀತ ವ್ಯಕ್ತಿತ್ವ, ಅವನ ಸ್ಥಿತಪ್ರಜ್ಞತೆ, ಯೋಗ-ಭೋಗಗಳ ಸಮನ್ವಿತ ದಿವ್ಯಾದರ್ಶಗಳು ರತ್ನಾಕರನನ್ನು ಪ್ರಭಾವಿಸಿರಬೇಕು. ಅಲ್ಲದೆ ಅವನೂ ತನ್ನ ಸ್ವಾನುಭವದಿಂದ, ಮೋಕ್ಷಕ್ಕೆ ಸಂಸಾರ ವಿರತಿ, ವಿಮುಖತೆಗಳನ್ನು ಅನಿವಾರ್ಯವೆಂದು ಭಾವಿಸಲಿಲ್ಲ. ಸಂಸಾರದಲ್ಲಿದ್ದೂ ಅದನ್ನು ಮೀರಿ ನಿಲ್ಲುವ ಮನೋಧರ್ಮವನ್ನು ರೂಢಿಸಿಕೊಂಡಲ್ಲಿ ಅಧ್ಯಾತ್ಮ ಲೌಕಿಕತೆಗಳೆರಡನ್ನೂ ತೂಗಿಸಿಕೊಂಡು ಹೋಗುವುದರಲ್ಲಿ, ನಿರ್ವಹಣೆಯಲ್ಲಿ ಯಾವ ತೊಂದರೆಯೂ ಆಗಲಾರದೆಂಬ ಬಲವಾದ ನಂಬಿಕೆಯ ಪ್ರತೀಕವಾಗಿ 'ಭರತ'ನನ್ನು ತನ್ನ ಕಾವ್ಯದಲ್ಲಿ ಚಿತ್ರಿಸಿದ್ದಾನೆ. ಹೀಗೆ ತನ್ನ ಕಥಾನಾಯಕನನ್ನು ತನ್ನ ಕಾವ್ಯ ಧರ್ಮ, ಮನೋಧರ್ಮ, ತತ್ವಾದರ್ಶಗಳಿಗೆ ಅನುಗುಣವಾಗಿ ಚಿತ್ರಿಸುವುದು, ಬಾಹುಬಲಿಯ ಮುಂದೆ ಭರತನನ್ನು ಉದಾತ್ತೀಕರಿಸುವುದು ಬಾಹುಬಲಿಗೆ ಎಸಗಿದ ಅನ್ಯಾಯ ಎನಿಸಿದರೂ ತನ್ನ ಕಾವ್ಯೋದ್ದೇಶಕ್ಕೆ ಪ್ರಾಮಾಣಿಕನಾಗಿರುವುದನ್ನಂತೂ ಯಾರೂ ಅಲ್ಲಗಳೆಯಲಾರರು. ತನ್ನ ಕಾವ್ಯ ನಾಯಕ ಭರತ ಮಹಾಯೋಗಿ. ತೊಂಬತ್ತಾರು ಸಾವಿರ ಮಡದಿಯರ ಮೈ ಮನಗಳ ಸುಳಿಯ ನಡುವಿದ್ದೂ ಅದರ ಸೆಳೆತ ಎಳ್ಳಷ್ಟು ಅವನಿಗೆ ಹಾನಿಮಾಡಲಾಗದು. ಏಕೆಂದರೆ ಭರತನಿಗೆ ಭೋಗ-ಯೋಗದ ರಹಸ್ಯಗಳು ತಿಳಿದಿವೆ. ತೀರ್ಥಂಕರನಾಗಿ ಹೊರಟವನಲ್ಲವಾದರೂ ಅವನ ಮೇರು ಸದೃಶ ವ್ಯಕ್ತಿತ್ವ ಯಾವ ತೀರ್ಥಂಕರನಿಗೂ ಕಡಿಮೆಯಿಲ್ಲ ಎನಿಸಿದ್ದರಿಂದಲೇ ಅವನಿಗೆ ಈ ಬದಲಾವಣೆ ಸಮರ್ಥನೀಯವೆನಿಸಿದೆ. ಕೃಷ್ಣನಿಗಿಂತ ಆರು ಪಟ್ಟು ಹೆಚ್ಚಿನ ಶೃಂಗಾರ ರಸಿಕನಾಗಿ ಚಿತ್ರಿತನಾಗಿದ್ದಾನೆ, ಭರತ. ಆದರೂ ಯೋಗ ಮತ್ತು ಆತ್ಮಜ್ಞಾನಗಳ ಶಿಖರದ ತುತ್ತತುದಿಯಲ್ಲಿ ನೆಲೆಗೊಂಡಿದ್ದಾನೆ. 'ಯೋಗವೂ ಬೇಕು; ಭೋಗವೂ ಬೇಕು' ಎಂದು ನಂಬಿ ನಡೆದ ಭರತನ ಬಹುಮುಖ ವ್ಯಕ್ತಿತ್ವದ ಉದಾತ್ತ ಚಿತ್ರಣಕ್ಕೆ ಬೇಕಾದಂತೆ ರತ್ನಾಕರಸಿದ್ಧ, ರತ್ನಾಕರ ಕವಿ ಹಲವಾರು ಸನ್ನಿವೇಶಗಳನ್ನು, ಪಾತ್ರಗಳನ್ನು ನಿರ್ಮಿಸಿಕೊಂಡಿದ್ದಾನೆ. ಅನೇಕ ಕಡೆಗಳಲ್ಲಿ, ಮೂಲಕ್ಕಿಂತ ಬೇರೆಯಾಗಿ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ; ಹೊಸ ಸನ್ನಿವೇಶಗಳನ್ನು ಸೃಷ್ಟಿಸಿಕೊಂಡಿದ್ದಾನೆ. ಇವೆಲ್ಲದರ ಸಾರ್ಥಕ ನಿರ್ವಹಣೆ, ನಿರೂಪಣೆಗಳಲ್ಲಿ

ರತ್ನಾಕರನ ಅದ್ಭುತ ಕಾವ್ಯ ಪ್ರತಿಭೆ, ವಿವಿಧ ಶಾಸ್ತ್ರ, ಕಲೆಗಳ ಕುರಿತಾದ ಆಳವಾದ ಪರಿಜ್ಞಾನ, ಪಾಂಡಿತ್ಯಗಳು - ದಿಗ್ಭ್ರಮೆ ಹುಟ್ಟಿಸುವ ರೀತಿಯಲ್ಲಿ ಕೆಲಸ ಮಾಡಿವೆ. ಕೇವಲ ಅನುಭವಕ್ಕೆ ಮಾತ್ರವೇ ದಕ್ಕುವ ವಿಚಾರಗಳಿಗೂ ತನ್ನ ಶಬ್ದ ಶಿಲ್ಪ ಸಾಮರ್ಥ್ಯದಿಂದ, ಉಪಮೆ, ರೂಪಕ, ಪ್ರತೀಕ ನಿರ್ಮಾಣ ಕೌಶಲ್ಯದಿಂದ ಅರ್ಥ, ಧ್ವನಿ ರಮ್ಯತೆಗಳನ್ನೂ ಕಾಯ್ದಿರಿಸಿ ಚಿತ್ರಮಯವಾದ ಅಭಿವ್ಯಕ್ತಿಯನ್ನು ಸಾಧಿಸಿದ್ದಾನೆ. ನಾಟ್ಯ ಸಂಗೀತಗಳ ವರ್ಣನೆಯ ವಿವರಗಳಂತೂ ಓದುಗರ ಮನೋಭೂಮಿಕೆಯಲ್ಲಿ ದೃಶ್ಯಗಳ ಸಾಕ್ಷಾತ್ಕಾರವಾಗುವಂತೆ ಮೂಡಿ ಬಂದಿವೆ.

'ಯೋಗ ಭೋಗ ಸಮನ್ವಯ' ತತ್ವದರ್ಶನ, ಪರಿಕಲ್ಪನೆಯಂತೂ ಕನ್ನಡ ಸಾರಸ್ವತ ಲೋಕಕ್ಕೆ ಅನುಪಮ ಕಾಣ್ಕೆಯಾಗಿದೆ. ಭರತನೇ ಈ ಸಮನ್ವಯ ಪರಿಕಲ್ಪನೆಯ ಪ್ರತೀಕಾತ್ಮಕ ಅಭಿವ್ಯಕ್ತಿಯಾಗಿದ್ದಾನೆ. ರತ್ನಾಕರ ಕವಿಯ ತಾತ್ವಿಕ ನಿಲುವುಗಳು, ಚಿಂತನೆಗಳು ಭರತನ ಮೂಲಕವಾಗಿ ಸೂತ್ರಪ್ರಾಯವಾಗಿ ಮೈ ತಳೆದು ನಿಂತಿವೆ. ಭೋಗ-ಯೋಗಗಳೆರಡನ್ನೂ ಹೇಗೆ ರಾಜನಾದವನೂ ಬದುಕಿನಲ್ಲಿ ರೂಢಿಸಿಕೊಂಡು ಬದುಕಲು ಸಾಧ್ಯವಿದೆ ಎಂಬುದನ್ನು ಭರತನ ಮಾತುಗಳಲ್ಲಿಯೇ ಕಂಡು ಕೊಳ್ಳಬಹುದು.

"ಭೋಗ ವಿಚಾರವು ಬೇಕು ನೃಪತಿಗಾತ್ಮ ವಿಚಾರವು ಬೇಕು
ರಾಗರಸಿಕನಾಗಿರಬೇಕು ಭಾವಿಸೆ ವೀತರಾಗರಸಿಕನಾಗಿರಬೇಕು"

"ಇಹಲೋಕ ಸುಖವ ಭೋಗಿಸಬೇಕು ನೃಪತಿಯುತ್ಸಹನಾಗಬೇಕು ಧರ್ಮದೊಳು
ಬಹುಕಾಂಕ್ಷೆಯೊಳು ಸಿಕ್ಕದಂತಿರಬೇಕು ನಿಸ್ಪೃಹನಾಗಬೇಕೆದೆಯೊಳಗೆ"

"ಗಾನ ಮದ್ದಳೆ ತಾಳಲಯಕೆ ನರ್ತಿಪ ಮಂದಯಾನೆಗೆ ಶಿರದ ಕುಂಭದೊಳು
ಧ್ಯಾನವಿಪ್ಪಂತೆ ರಾಜ್ಯದೊಳಿರ್ದು ಮುಕ್ತಿ ಸಂಧಾನದೊಳಗೆ ತನ್ನ ನೆನಹು"

"ಒಳಗಿದ್ದ ದೇವನ ಕಾಣದೆ ಹೊರಗೆ ದೇಗುಲವ ಪೂಜಿಸುವೆಗ್ಗನಂತೆ
ಒಳಗಣಾತ್ಮನ ಬಿಟ್ಟು ಮೈಯನೇ ತಾನೆಂದು ಸಲೆಹೊಗಳಿಸಿಕೊಳುತಿಹರು"

- ಎಂಬಂತಹ ಇಂತಹ ಪದ್ಯಗಳಲ್ಲಿ ಸಮನ್ವಯ ಸಂಹಿತೆಯನ್ನೇ ಅಡಕಗೊಳಿಸಿದ್ದಾನೆ. ರತ್ನಾಕರನ ತಾತ್ವಿಕ ನೆಲೆಗಳು, ಧಾರ್ಮಿಕ ದೃಷ್ಟಿ, ಜೀವನದೃಷ್ಟಿ ಮುಂತಾದವುಗಳು ನಿಚ್ಚಳವಾಗಿ ಮೂಡಿವೆ. ಇದಕ್ಕೂ ಮೊದಲಿನ ಶತಕ ರಚನೆಗಳಲ್ಲಿ ಹಾಡುಗಳಲ್ಲಿ ಅವನ ಅಧ್ಯಾತ್ಮಿಕ ಪರಿಕಲ್ಪನೆಗಳು ಬಂದಿರುವ ರೀತಿಗೂ 'ಭರತೇಶ ವೈಭವ' ಕಾವ್ಯದಲ್ಲಿ ಮೂಡಿ ಬಂದಿರುವ ರೀತಿಗೂ ಸಾಕಷ್ಟು ವ್ಯತ್ಯಾಸವಿದೆ. ಉಪದೇಶದ ನೆಲೆಯಿಂದ ಅವುಗಳು ವರ್ಣಿತವಾಗಿದ್ದರೆ ಈ ಕಾವ್ಯದಲ್ಲಿ, ಹಾಸುಹೊಕ್ಕಾಗಿ ಕಾಂತಾಸಂಮಿತವಾಗಿ ತಾತ್ವಿಕ ವಿಚಾರಗಳು ಆಪ್ತವಾಗಿ, ಹೃದಯಸ್ಪರ್ಶಿಯಾಗಿ ಹೆಣೆದು ನಿಂತಿವೆ.

ಮಹಾಕಾವ್ಯ, ಶತಕಗಳು ಒಂದು ನೆಲೆಯಲ್ಲಿದ್ದರೆ, ರತ್ನಾಕರನ ಅಧ್ಯಾತ್ಮಗೀತೆಗಳು ಮತ್ತೊಂದು ನೆಲೆಯಲ್ಲಿನ ವಿಶಿಷ್ಟ ರಚನೆಗಳಾಗಿವೆ. ದಾಸಪರಂಪರೆಯನ್ನು ನೆನಪಿಗೆ ತರುವ ಈ ಗೀತೆಗಳು ಸರಳತೆ, ಗೇಯತೆ, ವಸ್ತು ವೈವಿಧ್ಯತೆಗಳಿಂದ ಜನಸಾಮಾನ್ಯರನ್ನು ಆಕರ್ಷಿಸಿ, ಹರಿದಾಸ ಸಂಪ್ರದಾಯದ ಭಕ್ತಿಸಾಹಿತ್ಯದಲ್ಲಿಯಂತೆ, ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದಾನೆ. ಆತ್ಮಪರಿಶೋಧನೆ, ಸದ್ಗುರು

ಕೃಪೆ, ಆತ್ಮೋದ್ಧಾರದ ಹಂಬಲ, ಕಾಮಿನಿ, ಕಾಂಚನಗಳಿಗಾಗಿ ಜೀವರುಗಳ ಪರದಾಟ, ಜೀವಿಗಳ ಜನ್ಮ ಜನ್ಮಾಂತರದ ಬವಣೆಗಳು, ಭೇದ ವಿಜ್ಞಾನ ಮರ್ಮ, ನಿರ್ಭೇದ ಭಕ್ತಿಯ ಮೂಲಕ ಸಾಧ್ಯವಾಗುವ ಮೋಕ್ಷ, ಮತ್ತು ಜೈನಧರ್ಮ ಸಂಬಂಧವಾದ ಇತರೆ ವಿಚಾರಗಳು- ಹೀಗೆ ಹತ್ತು ಹಲವಾರು ವಿಚಾರಗಳು ಬಿಡಿಬಿಡಿಯಾಗಿ ಹಾಡುಗಳಲ್ಲಿ ಹರಿದಾಡಿ, ಅವನ, ಅಧ್ಯಾತ್ಮ ಚಿಂತನೆಗಳ ಜಾಡನ್ನು ಪರಿಚಯಿಸಿದ್ದರೆ, 'ಭರತೇಶ ವೈಭವ' ಅವನ ಪರಿಪಕ್ವವಾದ, ಜೀವನಾನುಭವದ ಫಲಶ್ರುತಿ ರೂಪದ, ಗಟ್ಟಿಗೊಂಡ ತಾತ್ವಿಕ ಆಲೋಚನೆಗಳ ಅಭಿವ್ಯಕ್ತಿಗೆಂದು ರೂಪುಗೊಂಡ ಒಂದು ವಿಶಾಲವಾದ ಭಿತ್ತಿಯಾಗಿ ರೂಪುಗೊಂಡಿದೆ.

ರತ್ನಾಕರನ ಸಮಸ್ತ ಕಾವ್ಯ ಪ್ರಕಾರಗಳಲ್ಲಿಯೂ ಆತ್ಮಜ್ಞಾನ ಆತ್ಮವಿಜ್ಞಾನ, ಆತ್ಮಸ್ವರೂಪ, ಹಂಸಕಲೆ, ಭೇದ ವಿಜ್ಞಾನ ಮೊದಲಾದ ವಿವರಗಳೇ ಮೇಲಿಂದ ಮೇಲೆ ಬಂದರೂ ನಿರೂಪಣಾ ಶೈಲಿ, ಸಂವಿಧಾನ, ಕಥಾಭಿತ್ತಿ, ಕಾವ್ಯದ ಛಂದಸ್ಸು, ಕಾವ್ಯ ಪ್ರಕಾರಗಳು ಎಲ್ಲವೂ ಬೇರೆ ಬೇರೆಯಾಗಿಯೂ ವಿಶಿಷ್ಟವಾಗಿವೆ. ಕೆಲವೆಡೆ ವಸ್ತುನಿಷ್ಠತೆಯಿದ್ದರೆ, ಮತ್ತೆ ಕೆಲವೆಡೆ ವ್ಯಕ್ತಿನಿಷ್ಠತೆ ಕಂಡುಬರುತ್ತದೆ. ತಾನು ಕಂಡ ವಿಶಿಷ್ಟ ತತ್ವದರ್ಶನವನ್ನು ಸರಳವಾಗಿ, ಸುಂದರವಾಗಿ ಕಾವ್ಯಧರ್ಮದೊಂದಿಗೆ ಸಮತೂಗಿಸಿಕೊಂಡು ನಿರೂಪಿಸಿದ್ದಾನೆ.

ಭರತೇಶ ವೈಭವದಲ್ಲಿ ವಸ್ತುನಿಷ್ಠತೆಯನ್ನು ಉಳಿಸಿಕೊಂಡೂ ವೈಯಕ್ತಿಕ ಕಾಣ್ಕೆಗಳನ್ನು ಸಮರ್ಥವಾಗಿ ನಿರೂಪಿಸಿದ್ದಾನೆ. ಹಾಡಿನ ಧಾಟಿಗೆ ಹೊಂದುವಂತಹ ಸಾಂಗತ್ಯವನ್ನು ಅಳವಡಿಸಿಕೊಂಡು, ದೇಸೀತನವನ್ನು ಉಳಿಸಿಕೊಂಡು 'ಮಹಾಕಾವ್ಯ' ಕರ್ತೃ ರತ್ನಾಕರ ಕನ್ನಡ ಕಾವ್ಯ ಜಗತ್ತಿನ ರತ್ನವಾಗಿಯೇ ಇದ್ದಾನೆ; ಕನ್ನಡ ನಾಡಿನ ಮನೆ ಮನೆಯ ಮನಗಳನ್ನು ತಣಿಸುವ ಈ ಕಾವ್ಯ ಕನ್ನಡದ ಅಮೂಲ್ಯ ನಿಧಿಯಾಗಿದೆ ಮತ್ತು ಅವನ ಈ ಭೋಗ-ಯೋಗದ ಸಮನ್ವಯ ಸಿದ್ಧಾಂತ ದರ್ಶನ ಜಗತ್ತಿಗೇ ಒಂದು ಮಹತ್ತರ ಕಾಣ್ಕೆಯಾಗಿದೆ.



# ಚಾರು ವಸಂತ - ಒಂದು ಅವಲೋಕನ

ಕನ್ನಡದ ಖ್ಯಾತ ಸಂಶೋಧಕರೂ ಜೈನ ಸಾಹಿತ್ಯ ಸಂಸ್ಕೃತಿಗಳ ಆಳವಾದ ಅಧ್ಯಯನ ನಡೆಸಿ ಅಧಿಕೃತ ತಜ್ಞರೆನಿಸಿರುವ ಡಾ|| ಹಂಪನಾ ಅವರ ಇತ್ತೀಚಿನ 'ದೇಸೀ ಕಾವ್ಯ' ಕೃತಿಯಾದ 'ಚಾರುವಸಂತ' ಕನ್ನಡ ಸಾಹಿತ್ಯಲೋಕದಲ್ಲಿ ಏಕಕಾಲಕ್ಕೆ ಬೆರಗು, ಕುತೂಹಲ, ಜಿಜ್ಞಾಸೆಗಳನ್ನು ಹುಟ್ಟು ಹಾಕಿದೆ. ಇದಕ್ಕೆ ಕಾರಣ ಹಂಪನಾ ಅವರು ಎಂದೂ ಕಾವ್ಯವನ್ನು ಬರೆದವರಲ್ಲವೆನ್ನುವುದು. ಆದರೆ 'ಕಾವ್ಯ' ಯಾರಲ್ಲಿ ಯಾವಾಗ ಹುಟ್ಟು ಪಡೆಯುತ್ತದೆ ಎಂದು ಹೇಳುವುದಕ್ಕಾಗದೆಂಬ ಸತ್ಯಾಂಶದ ಅರಿವಿನ ಹಿನ್ನೆಲೆಯಲ್ಲಿ ಬೆರಗಿಗೆ, ದಿಗ್ಭ್ರಮೆಗೆ ಅವಕಾಶವೇ ಇಲ್ಲ.

ಹಂಪನಾ ಅವರು ಸಂಶೋಧನೆಯಿಂದ ಹೊರಳಿ ದಿಢೀರನೆ ಕಾವ್ಯದತ್ತ ಮುಖ ಮಾಡಲು ಪ್ರಬಲ ಕಾರಣಗಳು ಇದ್ದಿರಬೇಕು. ತಮ್ಮ ದೀರ್ಘ ದಾಂಪತ್ಯದ ಸವಿನೆನಪಿಗೆ ಕಾವ್ಯವನ್ನು ಬರೆಯಬೇಕೆಂಬ ಪ್ರಚೋದನೆ ಒಂದುಕಡೆಯಾದರೆ, ಕಾವ್ಯ ಮಾಧ್ಯಮವನ್ನೇ ಏಕೆ ಆರಿಸಿಕೊಂಡರೆಂಬುದಕ್ಕೆ ಅವರದೇ ಆದ ಸಮರ್ಥನೆ ಇದೆ. ಪ್ರಾಚೀನ ಕಾವ್ಯ ನಿಕ್ಷಿಪ್ತಗಳಲ್ಲಿರುವ ಅನರ್ಘ್ಯ ಕಥನಗಳಲ್ಲಿ ಶ್ರೇಷ್ಠವಾದುದನ್ನು ನಮ್ಮ ಕಾಲಕ್ಕೆ ಬರಮಾಡಿಕೊಳ್ಳಬೇಕೆಂಬ ಜರೂರಿನ ತೀವ್ರ ಅನಿಸಿಕೆ ಮತ್ತು ಮಹತ್ವದ ವಸ್ತುವನ್ನು ಯಾವ ರೂಪ, ಸ್ವರೂಪಗಳಲ್ಲಿ ತಂದು ಪ್ರಯೋಗ ಮಾಡಬಹುದೆನ್ನುವ ಜಿಜ್ಞಾಸೆ, ಇಪ್ಪತ್ತೊಂದನೆಯ ಶತಮಾನದ ಓದುಗನ ಹತ್ತಿರ ಹೋಗಲು ಇರುವ ಸವಾಲುಗಳಿಗೆ ಉತ್ತರಿಸುವ ನೆಲೆಯ ಹುಡುಕಾಟಗಳು - ಇವಿಷ್ಟೂ ಅವರ 'ಚಾರುವಸಂತ' ಸೃಷ್ಟಿಗೆ ಪ್ರಬಲ ಪ್ರೇರಣೆಯಾಗಿವೆ. ಇವೆಲ್ಲದರ ಜೊತೆಗೆ ಸಮಕಾಲೀನ ಚಿಂತನೆಗಳ ಅನುಸಂಧಾನಕ್ಕೆ ಒದಗಿ ಬರಬಹುದಾದ ಸಾಧ್ಯತೆಗಳನ್ನು ಚಾರುದತ್ತ ವಸಂತ ತಿಲಕೆಯರ ಪ್ರೇಮಕಥನದ ಭಿತ್ತಿಯಲ್ಲಿ ಕಂಡುಕೊಂಡದ್ದು, 'ಚಾರುವಸಂತ'ದ ಜನನಕ್ಕೆ ಪ್ರಬಲ ಪ್ರಚೋದನೆಯಾಗಿದೆ ಎನ್ನುವುದು ಹಂಪನಾ ಅವರ ಅಭಿಪ್ರಾಯ.

ಚಾರುದತ್ತ ವಸಂತಸೇನೆ (ತಿಲಕೆಯರ) ಪ್ರೀತಿ, ಪ್ರೇಮ, ಪ್ರಣಯದ ಕತೆ ಸಂಸ್ಕೃತ, ಕನ್ನಡ, ಪೈಶಾಚಿ ಭಾಷಾ ಸಾಹಿತ್ಯದಲ್ಲಿ ಪ್ರಚಲಿತವಿದೆ. ಗುಣಾಢ್ಯನ 'ಬೃಹತ್ ಕಥೆ' ಜಿನಸೇನಾಚಾರ್ಯರ 'ಹರಿವಂಶ' (ಸಂಸ್ಕೃತ) ಮತ್ತು ಕನ್ನಡದಲ್ಲಿ ಆದಿಗುಣವರ್ಮ, ಕರ್ಣಪಾರ್ಯ, ಬಂಧುವರ್ಮ

ಸಾಳ್ವ, ಮಂಗರಸ ಮುಂತಾದವರ ಕೃತಿಗಳಲ್ಲಿ ಆಂಶಿಕವಾಗಿಯೋ ಪೂರ್ಣವಾಗಿಯೋ ಈ ಕಥಾನಕ ಕಾಣಿಸಿಕೊಂಡಿದೆ. ಈ ಕಥಾನಕದಲ್ಲಿನ ಚೆಲುವು, ರಮ್ಯತೆಗಳಿಗೆ ಮನ ತೆತ್ತು ತಮ್ಮ ಚಿಂತನೆಯ ಮೂಸೆಯಲ್ಲಿ ಎರಕ ಹೊಯ್ದು, ಸಮಕಾಲೀನ ವಿಚಾರಧಾರೆಯ ಎಳೆಗಳನ್ನು ಹಾಸುಹೊಗಿಸಿ ಬರೆಯಬೇಕೆನ್ನುವ ಅದಮ್ಯ ಹಂಬಲದ ಹಿನ್ನೆಲೆಯಲ್ಲಿ ಈ ಕೃತಿಯ ಸೃಷ್ಟಿಯಾಗಿದೆ.

ಹಂಪನಾ ಅವರ ಈ ಕಾವ್ಯದಲ್ಲಿ ನಮ್ಮ ಪ್ರಾಚೀನ ಕನ್ನಡ ಕಾವ್ಯಗಳ ದಟ್ಟ ಪ್ರಭಾವ ಅನೇಕ ಸಂದರ್ಭಗಳಲ್ಲಿ ಎದ್ದು ಕಾಣುತ್ತದೆ. ಕನ್ನಡತನಕ್ಕೆ, ಕನ್ನಡ ಕಾವ್ಯವಲಯಗಳಿಗೆ ಬದ್ಧವಾಗಿ, ದೇಶೀಯ ಬೇರುಗಳಿರುವ ವಸ್ತುವನ್ನು ಗುರುತಿಸಿ ಕಾವ್ಯವಾಗಿಸಿ ಅದನ್ನು ದೇಸೀ ಕಾವ್ಯವೆಂದು ಕರೆದಿದ್ದಾರೆ.

ಹಂಪನಾ ಅವರಿಗೆ ಈ ಕಾವ್ಯದ ವಸ್ತುವಿನ ಬಗ್ಗೆ ಅದಮ್ಯ ಪ್ರೀತಿಯಿದೆ. ಅವರ ದೃಷ್ಟಿಯಲ್ಲಿ "ಇದು ರಾಜರಾಣಿ ಅರಮನೆ ಕುರಿತ ಕಾವ್ಯವಲ್ಲ, ಯುದ್ಧಮುಖಿ ಕಥನವೂ ಅಲ್ಲ. ಮನುಷ್ಯ ಸ್ವಭಾವದ ವಿನ್ಯಾಸದ ನಿರಿಗೆಗಳಲ್ಲಿ ಅನಾವರಣಗೊಳ್ಳುತ್ತ ಮತಾತೀತವಾಗಿ, ಮಹೋನ್ನತ ಮಾನವೀಯ ಮೌಲ್ಯಗಳಿಂದ ಕೂಡಿದ ಜನಮುಖಿ ಹಾಗೂ ಸಮಾಜಮುಖಿ ಕಾವ್ಯ" ಚಾರುದತ್ತ ವಸಂತ ತಿಲಕೆಯರದು ಅಮರ ಪ್ರೇಮ. ಇಂತಹ ಅಮರ ಪ್ರೇಮದ ಕಥೆಗಳಿಗೆ ಜಗತ್ತಿನಲ್ಲಿ ಕೊರೆಯಿಲ್ಲ. ಇವರಿಬ್ಬರ ಪ್ರೀತಿ ಈ ಕಾವ್ಯದಲ್ಲಿ ಲೌಕಿಕ ನೆಲೆಯಲ್ಲಿ ಮಾತ್ರವೇ ನಿಲ್ಲುತ್ತದೆ. ಹಣವನ್ನು, ಸಂಪತ್ತನ್ನು ಸುರಿದು ಚಾರುದತ್ತ ಪ್ರೇಮವನ್ನು ಪಡೆದನಲ್ಲದೆ ಅನ್ಯಥಾ ಅಲ್ಲ. ಪ್ರೇಮವನ್ನು ಗಳಿಸಿಕೊಳ್ಳಲು ಉಳಿಸಿಕೊಳ್ಳಲು ಶೌರ್ಯ ಸಾಹಸಗಳ ಮೆರೆದಾಟವಿಲ್ಲ, ಹೋರಾಟಗಳಿಲ್ಲ. ಆದರೆ ಪ್ರೇಮಕಾವ್ಯಗಳಲ್ಲಿ, ಪ್ರಣಯ ಸಾಹಸ ಕಥಾನಕಗಳಲ್ಲಿ ಶೌರ್ಯ, ಸಾಹಸ, ಹೋರಾಟ, ಸ್ಪರ್ಧೆಗಳನ್ನು ಸಾಮಾನ್ಯವಾಗಿ ಕಾಣುತ್ತೇವೆ. ಅಮರ ಪ್ರೇಮ ಸುಖಾಂತವಾಗಿ ಉಳಿಯುವುದೇ ಅಪರೂಪ. ರೋಮೀಯೋ ಜೂಲಿಯಟ್, ಹೀರಾ ರಾಂಜಾ, ಸಲೀಂ ಅನಾರ್ಕಲಿ ಮುಂತಾದವರ ಪ್ರೀತಿ, ಪ್ರೇಮ ದುರಂತದಲ್ಲಿ ಮುಗಿಯುತ್ತದೆ.

ಚಾರುದತ್ತ ವಸಂತ ತಿಲಕೆಯರ ಕಥೆಯಷ್ಟೇ ರೋಚಕವಾದ ಕಥಾನಕವನ್ನು ಕನ್ನಡದ ಕ್ರಾಂತಿಕವಿ ಹರಿಹರ 'ಮಲುಹಣ'ನ ರಗಳೆಯಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಅವರಿಬ್ಬರ (ಮಲುಹಣ-ಮಲುಹಣಿ) ಉತ್ಕಟ ಪ್ರೇಮವನ್ನು ವಿವರಿಸಿ, ಈ ಉತ್ಕಟಪ್ರೇಮ ಶಿವಮುಖಿಯಾಗುವಂತಹ ಸನ್ನಿವೇಶವನ್ನು ನಿರ್ಮಾಣ ಮಾಡುತ್ತಾನೆ. ಅದಕ್ಕೊಂದು ಅಧ್ಯಾತ್ಮಿಕ ತಿರುವನ್ನು ಕಲ್ಪಿಸುತ್ತಾನೆ.

ಈ ಕಥನ ಕಾವ್ಯದಲ್ಲಿನ ಕಥೆಯು ಹಂದರ ತೀರಾ ತೆಳು. ಆದರೆ ಹಂಪನಾ ಅವರು ಸುಂದರವಾದ ವಿವರಣೆಗಳಿಂದ, ವಿಚಾರಗಳಿಂದ ಸುಪುಷ್ಟವಾಗಿಸಿದ್ದಾರೆ. ಶ್ರೀಮಂತ ವರ್ತಕ ಮನೆತನದಲ್ಲಿ ಹುಟ್ಟಿದ ಚಾರುದತ್ತ ರೂಪವಂತ ಸಕಲ ಕಲಾ ಪ್ರವೀಣ, ಗುಣಾಭರಣ. ವಸಂತ ತಿಲಕೆಯೆಂಬ ವೇಶ್ಯೆಯಲ್ಲಿ ಅನುರಕ್ತನಾಗಿ, ಶೃಂಗಾರ ಲೀಲಾಸಕ್ತನಾಗಿ, ಪ್ರೇಮೋನ್ಮತ್ತನಾಗಿ ಮನೆ, ಮಡದಿ, ತಂದೆ ತಾಯಿ, ಸಿರಿ ಸಂಪತ್ತೆಲ್ಲವನ್ನೂ ಕಳೆದುಕೊಳ್ಳುತ್ತಾನೆ. ನಿರ್ಗತಿಕನಾದ ಕ್ಷಣದಲ್ಲಿಯೇ ವಸಂತ ತಿಲಕೆಯ ಪ್ರೇಮದೂರನೂ ಆಗುತ್ತಾನೆ. ಆದರೆ ಮತ್ತೆ ದೇಶ ವಿದೇಶಗಳಲ್ಲಿ ಸಂಚರಿಸಿ ಧನಸಂಗ್ರಹಿಸಿ

ಮರಳಿ ಬಂದು ಸುಖಿ ಸಂಸಾರಿಯಾಗುತ್ತಾನೆ; ಕಳೆದುಕೊಂಡ ಕೀರ್ತಿ ಪ್ರತಿಷ್ಠೆಗಳೆಲ್ಲವೂ ಮತ್ತೆ ಅವನ ಪಾಲಿಗೆ ಬಂದು ಸೇರುತ್ತವೆ. ಆಸ್ತಿ, ಕೀರ್ತಿ, ಪ್ರತಿಷ್ಠೆಗಳನ್ನು ಕಳೆದುಕೊಳ್ಳುವ ಮತ್ತೆ ಪಡೆಯುವ ಈ ಎರಡರ ನಡುವೆ ಅನೇಕ ಸನ್ನಿವೇಶಗಳು, ಘಟನೆಗಳು, ಸಂದರ್ಭಗಳು ಕತೆಯ ಬೆಳವಣಿಗೆಗೆ ಅನೇಕ ತಿರುವುಗಳನ್ನು ನೀಡುತ್ತವೆ.

ಚಾರುದತ್ತ ವಣಿಕ ಕುಲದವನು. ಆ ಕುಲಕ್ಕೆ ಅಥವಾ ಆ ಜನಾಂಗಕ್ಕೆ ಆರೋಪಿತ, ಪ್ರಚಲಿತ ಗುಣ ಸ್ವಭಾವಗಳಿಗಿಂತ ಭಿನ್ನವಾಗಿ ಸುಂದರ ಪುರುಷ ಸಾಹಸಿ, ಚತುಷಷ್ಟಿ ಕಲೆಗಳಲ್ಲಿ ಪರಿಣತ. ಅಸ್ತ್ರಶಸ್ತ್ರ ಪ್ರಯೋಗ, ಕುದುರೆ ಸವಾರಿ, ಮುಂತಾದವುಗಳಲ್ಲಿ ಅತ್ಯಂತ ಚತುರ, ಬುದ್ಧಿಬಲ ಬಾಹುಬಲಗಳಲ್ಲಿ ಸರಿಸಾಟಿಯಿಲ್ಲದವನು. ಸದಾ ಪುಸ್ತಕ ಮಗ್ನ; ಸೂಕ್ಷ್ಮ ಸಂವೇದನಾಶೀಲ ಮನೋವೃತ್ತಿ. ಇದರಿಂದಾಗಿ ವಿವಾಹಿತನಾದರೂ ದಾಂಪತ್ಯಧರ್ಮ ನಿರ್ವಹಣೆಯ ವಿಚಾರವನ್ನು ಸಂಪೂರ್ಣವಾಗಿ ಮರೆತು ತನ್ನನ್ನೇ ನೆಚ್ಚಿ ಹೆತ್ತವರನ್ನು ತೊರೆದು ಕೈ ಹಿಡಿದು ಬಂದವಳ ಆಸೆ, ಆಕಾಂಕ್ಷೆಗಳಿಗೆ ಕಿಚ್ಚಿಕ್ಕಿ ತನ್ನ ಅಂತರ್ಜಗತ್ತಿನಲ್ಲಿ ತಾನು ಲೀನವಾಗುತ್ತಾನೆ. ಅದು ಅವನ ಮಟ್ಟಿಗೆ ಸರಿ ಎನಿಸಿದರೂ ಹೆತ್ತವರು ಅವನ ಈ ಧೋರಣೆಗೆ ಚಿಂತಾಕುಲರಾಗುತ್ತಾರೆ. ಹೇಗಾದರೂ ಅವನನ್ನು ಸಂಸಾರಪಕ್ಷಕ್ಕೆ ಸೆಳೆದುಕೊಳ್ಳಲು ಮಡದಿಯ ಮನದ ದುಗುಡವನ್ನು ದೂರ ಮಾಡಲು ಹೇಗಾದರೂ ಅವನನ್ನು ಕಾಮಮುಖಿ ಪ್ರೇಮಮುಖಿಯಾಗಿಸುವ ಹುನ್ನಾರವನ್ನು ಆಲೋಚಿಸುವಂತಾಗುತ್ತದೆ.

**"ದೇವೇಂದ್ರನ ಸಿರಿಯಿದ್ದರೇ ನಿಂದ್ರಿಯ ಸುಖಕೆ |**
**ನಿರಾಸಕ್ತ ಸಂಸಾರ ಉದಾಸೀನ ಭೋಗಕೆ |**
**ಯೋಗಿಯಂತಿರುವುದು ಚಾರುದತ್ತಗೆ ತರವೇ?......**
**ಆಕಾರದಲಭಿನವ ಕಾಮದೇವನಂತೆಯೆ |**
**ಆಚರಣೆಯಲಿ ತದ್ವಿರುದ್ಧನು ಜಿತೇಂದ್ರಿಯ||" -**

ಹೀಗಿರುವಾಗ ಅಸಹಾಯಕಳಾದ ತಾಯಿ ತನ್ನ ತಮ್ಮ ರುದ್ರದತ್ತನ ನೆರವನ್ನು ಯಾಚಿಸುತ್ತಾಳೆ. ಅವನೋಪ್ರಚಂಡ. ಬೆರಳು ತೋರಿದರೆ ಹಸ್ತ ನುಂಗುವ ಜಾತಿಯವ. ಅವನನ್ನು ಅವಳು,

**ರುದ್ರದತ್ತನೇ ಚಾರುದತ್ತನ ಜಡತೆಯ ಕಳೆ**
**ಓದಿನ ಗೀಳನೂ ತೊಲಗಿಸು ರಸಿಕ ಲೋಕಕೆಳೆ**
**.....................**
**ಚಾರುದತ್ತ ಮದನದತ್ತನಾಗಲು ಪೆಚ್ಚುವೆ**
**ಹೊನ್ನಿಗೆ ಚಿಂತೆಯ ತುಂಬಿದ ಥೈಲಿ ಹಿಡಿ**
**ಸಂಸಾರರಥ ಪ್ರೇಮದ ಪಥಕೆ ಚಲಿಸಿ ಬಿಡು" -**

ಎಂದು ಯಾಚಿಸಿದ್ದೇ ಸಾಕು, ರುದ್ರದತ್ತ ಕಾರ್ಯೋನ್ಮುಖನಾಗುತ್ತಾನೆ. ಅವನ ಜಾಣ್ಮೆ, ಮಾತಿನ ಮೋಡಿಯ ಬಲೆಗೆ ಸಿಕ್ಕ ಚಾರುದತ್ತ ಸುಲಭವಾಗಿ ಜಾರಿಬೀಳುತ್ತಾನೆ. ರತಿವಿದ್ಯಾ ಪಾರಂಗತನಾಗುತ್ತಾನೆ. ಉಪಾಯಾಂತರದಿಂದ ಆ ಊರಿನ ವೇಶ್ಯೆಯ ಮಗಳಾದ ವಸಂತ ತಿಲಕೆಯ ಮೊದಲ ಪರಿಚಯದಲ್ಲೇ ಕಾಮೋದ್ವಿಗ್ನತೆಗೆ, ಪ್ರೇಮೋದ್ವಿಗ್ನತೆಗೆ ಒಳಗಾಗುವಂತೆ ಯೋಜಿಸುತ್ತಾನೆ. ಮಾವನ ಕೈಗೊಂಬೆಯಾಗುತ್ತಾನೆ. ಅಳಿಯನ ಬುದ್ಧಿಯ ದೂರ ನಿಯಂತ್ರಕನಾಗಿ ನಿಂತು ಅಳಿಯನನ್ನು ಸಂಭಾಳಿಸುತ್ತಾನೆ. ರುದ್ರದತ್ತನ ಪುಂಗಿಯ ಮೋಹಕತೆಗೆ ಚಾರುದತ್ತನ

ನಾಗರಮನ ಗರಗರ ತಿರುಗುತ್ತದೆ. ಚಾರುದತ್ತನ ರೂಪಲಾವಣ್ಯ, ಶ್ರೀಮಂತಿಕೆಗಳು ವಸಂತ ತಿಲಕೆಗಿಂತ, ಆಕೆಯ ತಾಯಿ ಅನಾಮಿಕೆಗೆ ಅದಮ್ಯ ಸೆಳೆವಿನಾಕರ್ಷಣೆಯಾಗುತ್ತವೆ. ವೇಶ್ಯಾಧರ್ಮಕ್ಕೆ ಸಹಜವಾದಂತೆ ಅವಳಿಗೆ ಅವನ ಪ್ರೀತಿಯ ಗಾಢತೆಯಾಗಲಿ ಅವನ ವ್ಯಕ್ತಿತ್ವದ ಔನ್ನತ್ಯವಾಗಲೀ ಬೇಕಾಗುವುದಿಲ್ಲ. ನೀಡುವ ಅಲ್ಪ ಮೈಯ್ಯ ಸುಖಕ್ಕೆ ಪ್ರತಿಯಾಗಿ ಬರುತ್ತಿರುವ ಲಾಭ ಅವಳ ದುರಾಸೆಯನ್ನು ಮತ್ತಷ್ಟು ಕೆರಳಿಸುತ್ತದೆ. ಮಗಳಿಗೆ ವೇಶ್ಯೆಯಾದ ತಾಯಿ ನೀಡುವ ಪಾಠ, ಉಪದೇಶ ವೇಶ್ಯಾಧರ್ಮ ಸಂಹಿತೆಯಂತೆ ಕಾಣುತ್ತದೆ.

**"ಶೃಂಗಾರವೆ ಬಂಗಾರವಿದು ವೇಶ್ಯಾಧರ್ಮ**
**ಸ್ತ್ರೀ ರೂಪವೇ ರೂಪವದು ಕಾಪ್ಯವು ತವನಿಧಿಯು**
**ಯೌವ್ವನವಿರೆ ಗೆಲ್ಲುವೆ ಮೂರೂ ಲೋಕಗಳಾ**
**ಜವ್ವನದೊಂದಿಗೆ ಬೆರೆತರೆ ಲಲಿತ ಲಾವಣ್ಯ**
**ಹಾವಭಾವ ವಿನೋದ ವಿಲಾಸ ವಿಭ್ರಮ ಕಾಂತಿ**
**ಅಸ್ತ್ರಶಸ್ತ್ರಗಳು ಮಸೆಯಲು ಮರೆಯದಿರು ನಿತ್ಯ**
**...............................**
**ತಾರುಣ್ಯವೆ ಸಮಸ್ತ ಸಮೃದ್ಧಿಗೆ ಕೀಲಿಕೈ**
**ಸಂಪಾದಿಸು ವಿಪುಲೈಶ್ವರ್ಯವ ಜವ್ವನ ಜಾರುವ**
**ಮೊದಲೆ; ಹಣವುಳ್ಳವನೆ ಗುಣವಂತನು ನಮಗೆ"**

- ಎಂದು ವ್ಯವಹಾರ ಜ್ಞಾನದ ಸೂಕ್ಷ್ಮಗಳನ್ನು ಬೋಧಿಸುತ್ತಾಳೆ. ವಸಂತ ತಿಲಕೆಯು ಈ ಆಲೋಚನೆಗಳಿಗೆ ಎಷ್ಟು ಬದ್ಧವಾಗಿದ್ದಳೋ ತಿಳಿಯದಾದರೂ ಚಾರುದತ್ತ, ವಸಂತ ತಿಲಕೆಯ ಅನನ್ಯ ಪ್ರೇಮ ಕಾಮಗಳ ವರ್ಣನೆಯಲ್ಲಿ ಕವಿಗಳು ವಾತ್ಸ್ಯಾಯನನ ಕಾಮಸೂತ್ರಕ್ಕೆ ಮಿಗಿಲೆನಿಸುವಂತೆ ವರ್ಣಿಸಿದ್ದಾರೆ.

ಅವರಿಬ್ಬರ ಅನುಭೋಗ, ಸಂಭೋಗ ಗೃಹವನ್ನು 'ರತಿ ಕಾಮರ ಪ್ರಯೋಗಶಾಲೆ' ಯಾಗಿಸಿದ್ದಾರೆ. ಕಾಮ ದೇವನ ಭಂಡಾರದ ಬಾಗಿಲು ತೆಗೆವಂತೆ ರತಿಕೇಳೀಗೃಹದ ಬಾಗಿಲು ತೆರೆದೊಡನೆ ವಸಂತ ತಿಲಕೆ ಚಾರುವಿನ ಕೈ ಹಿಡಿದು ಒಳಗೊಯ್ದು ಸಮಸ್ತ ಸುಖಗಳನ್ನೂ ಧಾರೆಯೆರೆದು ಕೊಡುತ್ತಾಳೆ. ಅವರಿಬ್ಬರ ಸುರತ ಕೇಳಿಯ ವರ್ಣನೆ, ಅವನು ಬರುವಾಗಿನ ಸೂಳೆಗೇರಿಯ ವರ್ಣನೆಗಳು ನಮ್ಮ ಯಾವುದೇ ಪ್ರಾಚೀನ ಕವಿಗಳ ಕಾವ್ಯದಲ್ಲಿ ಬರುವುದಕ್ಕಿಂತ ಕಡಿಮೆಯೇನಿಲ್ಲ. ಅತ್ಯಂತ ಸೂಕ್ಷ್ಮ ವಿವರಗಳನ್ನೂ ಅದ್ಭುತವಾಗಿ ಕಂಡರಿಸಿದ್ದಾರೆ. ನಾಟ್ಯಶಾಲೆಯಲ್ಲಿ ನಾಟ್ಯಾಂಗನೆಯರು ನರ್ತಿಸಲು ಬಂದ ಪರಿ, ನಾಟ್ಯ ಸಭೆ ಸಜ್ಜುಗೊಂಡಿದ್ದ ರೀತಿ, ನಟುವಾಂಗದ ಹಿಮ್ಮೇಳನಕ್ಕೆ ತಮ್ಮ ಗೆಜ್ಜೆ ಹೆಜ್ಜೆ ಗತ್ತುಗಳಿಂದ ನರ್ತಿಸಿದ ಅದ್ಭುತ ದೃಶ್ಯವನ್ನು ನಮ್ಮ ಕಣ್ಣಿಗೆ ಕಟ್ಟಿದಂತೆ ಶಬ್ದಗಳಲ್ಲಿ ಸೆರೆಹಿಡಿದಿರುವ ರೀತಿ, ನಾಟ್ಯಾಭಿನಯದ ವರ್ಣನೆಯ ಶೈಲಿ, ಚಾಮರಸನ ಪ್ರಭುಲಿಂಗ ಲೀಲೆ, ಪಂಪನ ಆದಿಪುರಾಣ ಕಾವ್ಯಗಳಲ್ಲಿ ಬರುವ ಮಾಯೆಯ ನಾಟ್ಯ ಪ್ರಸಂಗ, ನೀಲಾಂಜನೆಯ ನಾಟ್ಯ ಪ್ರಸಂಗಗಳನ್ನು ನೆನಪಿಸುತ್ತವೆ. ಇಷ್ಟೆಲ್ಲಾ ನೇತ್ರ ಭೋಗ, ದೇಹಭೋಗಗಳಿಂದ ತಣಿದೂ ತಣಿಯದ ಮನಃಸ್ಥಿತಿಯಲ್ಲಿರುವಾಗಲೇ ತನ್ನ ವಂಶದ ಸಿರಿ ಸಂಪತ್ತೆಲ್ಲ ವಸಂತತಿಲಕೆಯ ಬೊಕ್ಕಸ ಸೇರಲು, ನಿರ್ಗತಿಕ ಸ್ಥಿತಿ ತಲುಪಿದ ಚಾರುದತ್ತನಿಗೆ ವೇಶ್ಯಾ ಗೃಹ ಪ್ರವೇಶಕ್ಕೆ ನಿಷೇಧಾಜ್ಞೆ ಅನಾಮಿಕೆಯಿಂದ ಜಾರಿಯಾಗುತ್ತದೆ. ಸಿರಿತನವೇ ಸರಸಕ್ಕೆ ಕೀಲಿಕೈ ಎಂದು ನಂಬಿದ ಅನಾಮಿಕೆ

"ಹೆಚ್ಚಿಗೆ ಸಿರಿತನವಿರುವತನಕ ಬೆಚ್ಚಗೆ
ಚೊಕ್ಕಸವು ಬರಿದಾಗಲು ಸಾಕಲ್ಲಿಗೆ
ಬಡವರಿಗು ನಮುಗು ಸೀಗೆಯೆಣ್ಣೆಯಾಗೆ
ಸಾಕು ಮಗಳೆ ನೂಕು ಈಗಳೆ ಕದ ತೆಗೆ
ಚಾರುದತ್ತನ ಈಗಲೆ ಕಳಿಸು ಮನೆಗೆ"

- ಎಂದು ನಿಷ್ಠುರವಾಗಿ ಎಚ್ಚರಿಸುತ್ತಾಳೆ. ಆದರೆ ವಸಂತತಿಲಕೆ ತನ್ನ ಜಾತಿ, ಕುಲ ಮನೋಧರ್ಮಕ್ಕಿಂತ ಭಿನ್ನವಾದ ಆತ್ಮ ಸಂಸ್ಕಾರವನ್ನು ರೂಢಿಸಿಕೊಂಡವಳು. ಚಾರುದತ್ತನನ್ನು ಮೊದಲಿಗೆ ಬರಮಾಡಿಕೊಂಡ ಉದ್ದೇಶಕ್ಕಿಂತ ಭಿನ್ನವಾಗಿ ಅವನನ್ನು ಕೇವಲ ಹಣಕ್ಕಾಗಿ ಪ್ರೀತಿಸದೆ ನಿಜವಾದ ಪ್ರೀತಿಯನ್ನು ಬೆಳೆಸಿಕೊಳ್ಳುತ್ತಾಳೆ. ಕಾಮ ಮೂಲದಿಂದ ಹೊರಟದ್ದು ಪ್ರೇಮವಾಗಿ ಪರಿಣಮಿಸುತ್ತದೆ. ತಾಯಿಯ ಸ್ವಾರ್ಥ, ಹಣದಾಹಗಳು ಬೇಸರ ತರಿಸುತ್ತವೆ. ಅಮ್ಮನ ಆದೇಶ, ಉಪದೇಶಗಳು ನಿಷ್ಫಲವಾಗಿ

"ತೀರದು ಚಾರುದತ್ತನ ಸಹವಾಸ |
ಮಿಂಡನಲ್ಲನವ ಗಂಡನೈ ನನಗೆ|
ಆ ಗಂಡನನಪ್ಪಿ ಸಂತೋಷಕೆ |
ಪೋಗಂಡರ ನೋಡೆನೈ ಕಣ್ಣೆತ್ತಿ" -

ಎಂದು ಧೀರ ಪ್ರತಿಜ್ಞೆಗೈಯುತ್ತಾಳೆ. ತಾಯಿ ಅನಾಮಿಕೆಯ ನಿಷ್ಠುರಮಾತುಗಳು, ಚಾರುದತ್ತನ ಜೊತೆಗೆ ತಾಯಿಯ ದುರ್ನಡತೆ, ದೌರ್ಜನ್ಯಗಳು ಅವಳ ಹಟವನ್ನು ಇನ್ನಷ್ಟು ಗಟ್ಟಿಗೊಳಿಸುತ್ತದೆ. ಹೆತ್ತವಳೆಂಬ ಮುಲಾಜಿಲ್ಲದೆ ಧಿಕ್ಕರಿಸಿ, ಅವಳ ಸಾಂತ್ವನದ ಮಾತುಗಳಿಗೂ ಕಿವಿಗೊಡದೆ

"ನೀನಾರೆಲೆ ಶೋಕಾಶ್ರುಜಲ ಧಾರೆಗೆ ಮೋಡ ಕಟ್ಟಿದವಳೇ ಛಿ!
ತೊಲಗಿಲ್ಲಿಂದ ನರಕ ಪಾತಾಳಕೆ" -

ಎಂದು ದೂರ ಅಟ್ಟುತ್ತಾಳೆ. ಸುಖವೈರಿ ಧನಪಿಶಾಚಿ ಎಂದು ಬೈದುದೇ ಅಲ್ಲದೆ, ಬಂಧು ವಿನೋಪಾದಿಯಲ್ಲಿ ಇರಬೇಕಾದ ತಾಯಿ ರಾಹುಕೇತು, ಧೂಮಕೇತುವಾಗಿ ಪರಿಣಮಿಸಿದ್ದೀಯೆ. 'ಏಕ ಪರಿಗ್ರಹವ್ರತಿಯಂತೆ' ಚಾರುವಿಗೇ ತಾನು ನಿಷ್ಠಳಾಗಿರುವಾಗ 'ಬಲವಂತ' ತನ್ನ ಸಾವಿಗೆ ದಾರಿ ಮಾಡೀತೆಂದು ಬೆದರಿಕೆ ಹಾಕುತ್ತಾಳೆ. ಹೆತ್ತ ಕರುಳಿನ ಪ್ರೀತಿ, ಅವಳ ಮತ್ತು ಚಾರುದತ್ತರ ನಡುವಿನ ಅದಮ್ಯ ಪ್ರೀತಿಯ ನಂಟು, ಅವಳ ಕ್ರೂರ ಮಾತುಗಳನ್ನೂ, ಅದರಿಂದಾದ ನೋವನ್ನೂ ಸಹಿಸಿಕೊಳ್ಳುವಂತೆ ಮಾಡುತ್ತದೆ. ವಾತ್ಸಲ್ಯದ ಒರತೆಯುಕ್ಕಿ ಚಾರುದತ್ತನಿಂದ ಕಸಿದು ಕೊಂಡದ್ದನ್ನೆಲ್ಲ ಹಿಂತಿರುಗಿಸುತ್ತಾಳೆ. ಅಲ್ಲದೆ ಈ ಪ್ರಕರಣದಿಂದ ಅವಳಿಗೆ ಒಮ್ಮೆ ತನ್ನ ವೇಶ್ಯಾ ಬದುಕಿನ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳುವಂತಾಗುತ್ತದೆ. ದೇಹ ಸುಖ, ಹಣ ಇವುಗಳ ಬೆಳಕಿನಲ್ಲಿ ನಿಕೃಷ್ಟವಾದ, ಹೇಯವಾದ ಬದುಕಿನ ಬಗ್ಗೆ ಒಮ್ಮೆಯೂ ಆಲೋಚಿಸಲಾಗದ್ದಕ್ಕೆ ಪರಿ ತಪಿಸುತ್ತಾಳೆ. ಮಗಳ ಆತ್ಮಹತ್ಯೆಯ ಬೆದರಿಕೆಯೂ ಅವಳನ್ನು ಭಯತ್ರಸ್ಥಳನ್ನಾಗಿಸುತ್ತದೆ.

"ಹೆಪ್ಪು ಗಟ್ಟಿದ ವಿಷಾದ ತಾನು ಮಾಡಿದ್ದು ಸರಿಯೆ ಬೇರೆಯಾರಿದ್ದಾರೆ ಮಗಳಿಗೆ ನನಗೆ ನಮಗೆ ನಾವೆ ಚಾರುವಿಲ್ಲದೆ ತಾಯಿ ಮಗಳು ಇಬ್ಬರೂ ತಬ್ಬಲಿ!" -

ಎನ್ನುವ ಕಟು ಸತ್ಯದ ಅನುಭವ, ಅಸಹಾಯಕತೆಯ ಅರಿವು ಧುತ್ತೆಂದು ಮೂಡಿ, ತನ್ನದೆಲ್ಲವನ್ನೂ ಅಳಿಯನಿಗೆ ಮೀಸಲಾಗಿಸಿ,

"ಒತ್ತೆಯಿತ್ತವರ ಪಕ್ಕದಲಿ ಬತ್ತಲೆಯಾಗುವ
ಬಾಳುವೀ ಮರೆವಾಳು ಸಾಕಪ್ಪ ಸಾಕೆನಿಸುವ|
ಸೂಳೆಯರ ಪರಿವಾರಗಳ ಪರಿಚಾರಿಕೆಯರ |
ನೊಂದ ನೋವ ನೆನೆದು"

ಜಿಗುಪ್ಸೆಗೊಂಡು ಆಸ್ತಿ ಪಾಸ್ತಿಯೆಲ್ಲವನ್ನೂ ನಿರಾಕರಿಸುವುದರ ಜೊತೆಗೆ ಸಂಚಿತ ಕರ್ಮ ಕಾಳಿಕೆಯ ಕಳೆಯಲು ನಿರ್ಧರಿಸಿ, ಮಂಡೆ ಬೋಳಿಸಿಕೊಂಡು, ಶ್ವೇತಾಂಬರ ಧಾರಿಯಾಗಿ ಸಂನ್ಯಾಸ ಸ್ವೀಕರಿಸಿ ಹೊರಡುತ್ತಾಳೆ.

ಉಚ್ಚಕುಲ ಸಂಜಾತನಾದ ಚಾರುದತ್ತನಿಗೆ ವಸಂತತಿಲಕೆಯನ್ನು ರಾಜಾರೋಷಾಗಿ ಒಪ್ಪಿಕೊಳ್ಳುವುದು, ಮಡದಿಯಿರುವಾಗ ಇನ್ನೊಬ್ಬಳನ್ನು ಮನೆಗೆ ಬರಮಾಡಿಕೊಳ್ಳುವುದು ಮಡಿವಂತ ಸಮಾಜದ ಎದುರಿಗೆ ಅಷ್ಟು ಸುಲಭಸಾಧ್ಯವಾಗುವುದಿಲ್ಲ. ಅದರಲ್ಲಿಯೂ ಕಂಡ ಕಂಡ ಪುರುಷರಿಗೆ ಮೈ ತೆರೆದುಕೊಳ್ಳುವ ವೇಶ್ಯಾಕುಲ ಸಂಜಾತೆಯಾದವಳಿಗೆ ಮತ್ತೂ ಕಷ್ಟವಾಗುತ್ತದೆ.

ಪಾಪ ಪ್ರಜ್ಞೆಯಿಂದ ಮೊದಲೇ ಜರ್ಝರಿತನಾಗಿದ್ದವನು, ತಾಯಿ ಮಡದಿಯ ಮುಂದೆ ಅವಮಾನಿತನಾಗಿ ನಿಂತವನು ವಸಂತ ತಿಲಕೆಯನ್ನು ಸ್ವೀಕರಿಸುವೆನೆಂದು ಹೇಳಲು ಹಿಂಜರಿಯುತ್ತಾನೆ. ಮೊದ ಮೊದಲು ಚಾರುವಿನ ತಾಯಿ ದೇವಿಲೆ ವಿರೋಧಿಸಿದರೂ, ಮಿತ್ರವತಿಯ ಕಡೆಯಿಂದ ಒಪ್ಪಿಗೆ ಬಂದಲ್ಲಿ ಅಭ್ಯಂತರವಿಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾಳೆ. ಸೊಸೆಯೂ ಉದಾರವಾಗಿ, ಉದಾತ್ತವಾಗಿ ತನ್ನ ಗಂಡ ಅಷ್ಟೊಂದು ಗಾಢವಾಗಿ ಪ್ರೀತಿಸಿದವಳನ್ನು ತಾನೂ ಒಪ್ಪಿಕೊಂಡು, ನೆರೆಹೊರೆ, ಬಂಧು ಬಾಂಧವರ ವಿರೋಧವನ್ನು, ಅವಹೇಳನವನ್ನು ಅಲಕ್ಷಿಸಿ ಸವತಿಯಾಗಿ ಬರಮಾಡಿಕೊಳ್ಳುತ್ತಾಳೆ. ಚಾರುದತ್ತನ ಮೇಲೆರಗಿದ ಬೃಹತ್ ಸಮಸ್ಯೆಯೊಂದು ಸಲೀಸಾಗಿ ಜಾರಿ ಮರೆಯಾದರೂ ಕಳೆದುಕೊಂಡ ಸಿರಿ ಸಂಪತ್ತನ್ನು ಮರಳಿ ಪಡೆಯಬೇಕಾದ ಜವಾಬ್ದಾರಿಯಿಂದಾಗಿ ವ್ಯಾಪಾರಯಾತ್ರೆ ಕೈ ಗೊಳ್ಳುತ್ತಾನೆ. ಹಣ, ಅಂತಸ್ತು ಸಾಮಾಜಿಕ ಪ್ರತಿಷ್ಠೆ, ಗೌರವಗಳನ್ನು ಮರಳಿ ಪಡೆದು ವಂಶದ ಘನತೆ ಮತ್ತು ತಂದೆಯ ಕೀರ್ತಿ ಪ್ರತಿಷ್ಠೆಗಳನ್ನು ಪುನಃ ಸ್ಥಾಪಿಸಬೇಕಾದ ಅಗತ್ಯದ ಅರಿವಿನೊಂದಿಗೆ ನೆಲಮಾರ್ಗ ಜಲಮಾರ್ಗಗಳಲ್ಲಿ ಪಯಣಿಸುತ್ತಾನೆ. ಪ್ರಯಾಣದ ಅವಧಿಯಲ್ಲಿ ಎದುರಾಗುವ ಅಡ್ಡಿ, ಆತಂಕಗಳು, ಭೀಷಣತೆ, ಸನ್ನಿವೇಶ ಸಂದರ್ಭಗಳ ಸಂಕೀರ್ಣತೆ ಹೆಚ್ಚುತ್ತಿದ್ದಂತೆ, ಇವುಗಳಿಗೆ ಮುಖಾ ಮುಖಿಯಾಗಿ ಸಾಗುತ್ತ ನಡೆಯುವ ಚಾರುದತ್ತನ ವ್ಯಕ್ತಿತ್ವ ಅನಾವರಣ ಗೊಳ್ಳುತ್ತಾ ಹೋಗುತ್ತದೆ. ಮೊದಲ ಕಾಂಡಗಳಲ್ಲಿ ಕಾಣುವ ಚಾರುದತ್ತನಿಗಿಂತ ಭಿನ್ನವಾದ ಚಾರುದತ್ತ ಇಲ್ಲಿ ಕಾಣಿಸಿಕೊಳ್ಳುತ್ತಾನೆ. ಧೀರಲಲಿತ ನಾಯಕನಾಗಿದ್ದವನು, ಧೀರೋದ್ಧಾತ, ಧೀರಗಂಭೀರ ನಾಯಕನಂತೆ ವಿಕಾಸಗೊಳ್ಳುತ್ತಾ ಕಡೆ ಕಡೆಗೆ ಧೀರೋನ್ನತನಾಗಿ, ದೇವ ಮಾನವನಾಗಿ ಪರಿಣಮಿಸುತ್ತಾನೆ. ಉದ್ಯೋಗ ಕಾಂಡದಿಂದ ಮುಂದಿನ ಕಾಂಡಗಳಲ್ಲಿ ಕಾವ್ಯದ ಹರಿವು ಅನೇಕ ಸ್ಥಾಯಿಗಳಲ್ಲಿ ಮುಂದುವರೆಯುತ್ತದೆ. ಚಾರುದತ್ತನ ಮಾನವೀಯತೆ, ಪ್ರಕೃತಿ ಪ್ರೇಮಗಳ ಒಂದು

ಸೂಕ್ಷ್ಮನೋಟ ಮೊದಲಿಗೇ ನಮಗೆ ಕಾಣಿಸಿರುವುದಾದರೂ ಇಲ್ಲಿಂದ ಅವನ ನಂಬಿಕೆಯ ಮೌಲ್ಯಗಳ ವಿಸ್ತಾರವಾದ ದರ್ಶನ ಸಾಧ್ಯತೆಗಳು ಇಮ್ಮಡಿಸಿವೆ. ಪ್ರಕೃತಿ ಪ್ರೀತಿ, ಪರಾನುಕಂಪೆ, ಮಿತ್ರ ಸ್ನೇಹ ಜೀವದಯಾಪರತೆ. ಸ್ವಾಭಿಮಾನ, ಆತ್ಮವಿಶ್ವಾಸ, ಔದಾರ್ಯ, ಧೈರ್ಯ, ಸಾಹಸಗಳು ಕುಡಿವರಿದು, ಗರಿಗಟ್ಟುತ್ತಿದ್ದಂತೆ ಅವನಲ್ಲಿ ಮೊದಲಿದ್ದ ದೌರ್ಬಲ್ಯಗಳು, ಕರ್ತವ್ಯ ಪರಾಙ್ಮುಖತೆ ಬಂಧುಜನ ನಿರ್ಲಕ್ಷ್ಯಗಳು ಮರೆಯಾಗಿ ಉದಾತ್ತ ವ್ಯಕ್ತಿತ್ವವೊಂದು ರೂಪು ಗೊಳ್ಳುತ್ತದೆ. ಅವನ ಪಯಣದ ಹಾದಿಯಲ್ಲಿ ಪವಾಡಗಳು ಸಂಭವಿಸುತ್ತವೆ. ದೇವತೆಗಳ, ಖೇಚರರ ಸಮಸ್ಯೆಗಳನ್ನು ಪರಿಹರಿಸಬಲ್ಲ ಸಾಮರ್ಥ್ಯದೊಂದಿಗೆ ಅವರಿಂದ ಸ್ತುತಿಗೊಳ್ಳುವ ಎತ್ತರದ ವ್ಯಕ್ತಿತ್ವವನ್ನು ಪಡೆಯುತ್ತಾನೆ. ಎಂತಹುದೇ ಕಷ್ಟ ಬಂದರೂ ತಿಣುಕದ ತನ್ನ ಸಾಹಸವಷ್ಟೇ ಅಲ್ಲ; ತಿಣುಕಿದವರ ಎದೆಗಳಲ್ಲೂ ಸಾಹಸ ತುಂಬ ಬಲ್ಲ ಸಮರ್ಥ! ದುರ್ಗಮವಾದ ದಾರಿಗಳಲ್ಲಿ ಪಯಣಿಸುವಾಗ ಅನಿರೀಕ್ಷಿತ ಅವಾಂತರಗಳು ಎಂಥವರ ಎದೆಗಳನ್ನೂ ನಡುಗಿಸಬಲ್ಲಂಥವುಗಳು. ಕಂಜಸ್ಥಳದುರ್ಗದ ಧಿಪತಿಗೆ ಗೆಲುವು ತಂದಿತ್ತು, ಬಂದ ಕುತ್ತವನ್ನು ನಿವಾರಿಸಿಕೊಟ್ಟದರ ಫಲವಾಗಿ ಆತನಿಂದ ಮನ್ನಣೆ, ಮರ್ಯಾದೆಯ ರೂಪದಲ್ಲಿ ರಾಜ್ಯವನ್ನೇ ಕೊಡಲು ಮುಂದಾದರೂ"

"ಅವಿನಯವೆಂದೆಣಿಸದಿರಿ ನನ್ನ ಬಿನ್ನಪವಿದು ಅವಿವಾಹಿತ ನಾನಲ್ಲ ಬಹುಸತಿಯರು ಬೇಡ ಮನ್ನಿಸಿರಿ ರಾಜ್ಯವಾಳುವ ಬಯಕೆಯೂ ಇಲ್ಲ" ಎಂದು ವಿನಯದಿಂದಲೇ ನಿರಾಕರಿಸುತ್ತ ನಿಷ್ಕಾಮತೆ, ನಿಸ್ಪೃಹತೆಗಳನ್ನು ಮೆರೆಯುತ್ತಾನೆ.

> **ಬರುವುದೇನುಂಟೊಮ್ಮೆ ಬರಲಿ ಬಿಡಿಬಾಳಲ್ಲಿ**
> **ಲಲಾಟ ಲಿಖಿತವನೊರೆಹಚ್ಚಿನೋಡಲು ನಿಲ್ಲಿ**
> **ಬಾಚಿ ಉಳಿಕೊಡಲಿ ಮಚ್ಚು ಗರಗಸ ಜಾಣ ಸುತ್ತಿಗೆ**
> **ಆಯುಧಗಳಲ್ಲಿ ಉಪಕರಣಗಳು ಯೋಗ್ಯ ಬದುಕಿಗೆ**
> **ತತ್ತಳಿಸಿ ತಳಮಳಿಸಬಹುದೆ ಒಂದೆರಡು ಪೆಟ್ಟಿಗೆ**

-ಎಂದು ನಂಬಿ ಹುರಿದುಂಬಿಸಿ ಗೆಳೆಯರನ್ನು ಮುನ್ನಡೆಸುವ ಸಮರ್ಥ. ಧೈರ್ಯ, ಸಾಹಸ ಆತ್ಮ ವಿಶ್ವಾಸಗಳ ಬೆಳಕಲ್ಲಿ ಹಾದಿ ಕ್ರಮಿಸುತ್ತ. ಅಡ್ಡಿ ಆತಂಕಗಳ ಗೆಲ್ಲುತ್ತ, ಕಷ್ಟದಲ್ಲಿ ಇರುವವರಿಗೆ ಸಹಾಯ ಹಸ್ತ ನೀಡುತ್ತ, ಬಂಧು ಮಿತ್ರರ ಪ್ರೀತ್ಯಾದರಗಳನ್ನು ಸ್ವೀಕರಿಸುತ್ತ. ತನ್ನ ತಂದೆಯ ಮೇಲಿನ ಗೌರವದಿಂದ ಸಿರಿ ಸಂಪತ್ತು ಕಾಣ್ಕೆಗಳನ್ನು ನೀಡಲು ಬಂದ ಹಿರಿಯರನ್ನು ವಿನಯದಿಂದಲೇ ನಿರಾಶೆಗೊಳಿಸುತ್ತ, ಋಷಿ ಮುನಿಗಳೊಡ್ಡಿದ ದಿವ್ಯಗಳನ್ನು ಗೆಲ್ಲುತ್ತ, ಅವರೊಡ್ಡುವ ಆಮಿಷಗಳನ್ನು ಬದಿಗಿರಿಸುತ್ತಾ

> **"ಈ ಸೆಟ್ಟಿಯುಸಮಾನ್ಯನಂತೆ ಪರಿಶುದ್ಧನು**
> **ಲೋಭಾಭಿಭೂತನಲ್ಲ ಸಂತುಷ್ಟಚಿತ್ತ**
> **ಎಂಥ ಹಣವಂತ ಗುಣವಂತ ವಿನಯವಂತ!"**

-ಎಂದು ತವಸಿಗಳೇ ಬೆರಗಾಗಿ ಮೆಚ್ಚಿಕೊಳ್ಳುವಂತಹ ವ್ಯಕ್ತಿತ್ವವನ್ನು ರೂಢಿಸಿಕೊಂಡವನು.

ಇವನ ಈ ಎಲ್ಲ ಗುಣಗಳೇ ಅವನ ಗುರಿಸಾಧನೆಗೆ ಸಹಾಯಕವಾಗುತ್ತವೆ. ಸತ್ತು ದುರ್ಗತಿಗಿಳಿಯ ಹೊರಟವರನ್ನು ಪಂಚನಮಸ್ಕಾರ ಮಂತ್ರಗಳಿಂದ, ಸಮಾಧಿ ಮರಣ ಫಲದಿಂದ

ನಾಕಲೋಕದ ಸದ್ಗತಿಯನ್ನು ಕರುಣಿಸಬಲ್ಲ ದಯಾಳು. ಚಾರಣ ಋಷಿಗಳಿಗೂ ಸಲ್ಲದ ಪ್ರಥಮ ಗೌರವಕ್ಕೆ ಪಾತ್ರನಾಗುವ ಔನ್ನತ್ಯಕ್ಕೇರಿರುವ ಚಾರುದತ್ತ ಪ್ರತಿಯಾಗಿ ತನ್ನನ್ನು ಅರಸಿ ಬರುವ ಸುರವಿಭವ, ಸ್ವರ್ಗಗಳನ್ನೂ ನೆಲದ ಪ್ರೀತಿಯ ಮುಂದೆ ಕಡೆಗಣಿಸುತ್ತಾನೆ. ಸಿಂಹ ಗ್ರೀವನು ಅವನಿಂದ ಕೃತಾರ್ಥನಾಗಿದ್ದು.

**"ತಂದೆ ಅಮಿತಗತಿಗೆ ಹರಣವ ಕರುಣಿಸಿದ ವಿಭುವೆ**
**ಖೇಚರರಾಜ್ಯವು ಸಿಂಹವಿಷ್ಟರ ಪರಿವಾರ**
**ಸಮಸ್ತವು ನಿನ್ನದೈ ನಮ್ಮನಾಳು ಶಾಶ್ವತ**
**ಹೋಗದಿರು ಮರಳಿ ನೆಲದ ನಾಡಿಗೆ ಚಂಪೆಯೆಡೆಗೆ"-**

ಎಂದು ಎಷ್ಟೇ ವಿನಯದಿಂದ ಒತ್ತಾಯಿಸಿದರೂ ತನ್ನೂರು, ತನ್ನ ದೇಶದ ಅನನ್ಯ ಪ್ರೀತಿಯ ತುಡಿತಕ್ಕೆ ಒಳಗಾಗಿ ಹಿಂತಿರುಗುತ್ತಾನೆ. ಆದರೆ ಹಾಗೆಂದು ಲೌಕಿಕವೂ ನಶ್ವರವೂ ಆದ ಬದುಕನ್ನೇ ನೆಚ್ಚಿ ಮೋಕ್ಷಕಾಮ್ಯತ್ವದಿಂದ ವಿಮುಖನಾಗಿ ಉಳಿಯಬೇಕೆಂಬ ಉದ್ದೇಶವಿಲ್ಲ. ನೆಲದ ಹಿರಿಮೆ ಸುರರಿಗೂ ಮನದಟ್ಟು ಮಾಡಲು ಸಿಂಹಗ್ರೀವನು ತನ್ನ ಮಗಳ ಹೊಣೆಗಾರಿಕೆಯನ್ನು ಚಾರುದತ್ತನ ಹೆಗಲಿಗೇರಿಸುತ್ತಾನೆ". ಪರೋಪಕಾರ ಮೇರು ಸಂಯಮದ ಮಂದರನು' ನೆಲದ ಮನುಜರ ಮಹೋನ್ನತಿಕೆಯ ಪ್ರತೀಕವಾಗಿ ಕಾಣಿಸಿದ್ದರಿಂದಲೇ,

**"ಎಲೆ ನಿರವದ್ಯ ಮಹಾನುಭಾವ ಭೂಮಿಪುತ್ರ**
**ನಾಕಲೋಕವೆ ಏಕೆ ನಾಲ್ಕು ಲೋಕವನಿತ್ತರು**
**ಸಾಕು ಸಾಕೆಂಬ ಬೇಡ ಬೇಡವೆಂಬ ನೆಲದ**
**ಮನುಜರಿಗೆ ಬಯಕೆಯ ದೇವಗಣ ಸಾಟಿಯಲ್ಲ**
**ಅವಿವಾಹಿತಳೆನ್ನ ಕುವರಿಗೀ ಸುರವರರು**
**ತಕ್ಕವರರಲ್ಲ ಯೋಗ್ಯರಹ ನೆಲದ ಮಗನಿಗೆ**
**ಅವಳ ವಧು ಮಾಡಿ ಮದುವೆಯ ನೆಸಗುವುದು ನೀನೆ"**

ಎಂದು ಚಾರುದತ್ತನನ್ನು ಪ್ರಾರ್ಥಿಸಿ ಕೊಳ್ಳುವುದರಲ್ಲಿ ನೆಲದ ಬಗೆಗೆ ಅವನಲ್ಲಿ ಮೂಡಿದ ಅಭಿಮಾನಕ್ಕೆ ಚಾರುದತ್ತನೇ ಕಾರಣನಾಗಿರುವುದು ಸ್ಪಷ್ಟವಾಗುತ್ತದೆ.

ತನ್ನ ಸುತ್ತಲಿನವರ ಎಲ್ಲ ನಿರೀಕ್ಷೆಗಳನ್ನೂ ಪೂರೈಸಿ ತನ್ನ ಉದ್ದೇಶಿತ ಗುರಿಯನ್ನೂ ಸಾಧಿಸಿ ಒಂದಷ್ಟು ಕಾಲ ಸುಖ ಭೋಗಗಳಿಂದ, ಪ್ರತಿಷ್ಠೆ ಗೌರವಗಳಿಂದ ಬಾಳಿ ಕಡೆಗೆ ಈ ಸಂಸಾರಸಾರೋದಯ, ಜೈನ ಕಾವ್ಯಗಳಲ್ಲಿ ಸಾಮಾನ್ಯವಾಗಿ ವಿರಕ್ತಿಗೆ ಕಾರಣವಾಗುವ, ಜೀವನ ನಶ್ವರತೆಯ ಅರಿವಿನ ಎಚ್ಚರಕ್ಕೆ ಸಾಧನವಾಗುವ ಪ್ರಸಂಗಗಳಂತೆ ಇಲ್ಲಿಯೂ ಅಂತಹ ಒಂದು ಪ್ರಸಂಗ ನಿರ್ಮಾಣವಾಗುತ್ತದೆ. ಅಪ್ಸರ ಲೋಕದ ರೂಪ ತೇಜ ಲಾವಣ್ಯಗಳಿರುವಂತಹ ಮನುಜಲೋಕದಲ್ಲಿ ಯಾರಿರುವರೆಂಬ ಪ್ರಶ್ನೆ ಎದ್ದಾಗ ಚಾರುದತ್ತನ ರೂಪ ಲಾವಣ್ಯದ ಪ್ರಸ್ತಾಪಬರಲು ಅದನ್ನು ಪರೀಕ್ಷಿಸಲೋಸುಗ ಅವಳಿ ದೇವತೆಗಳು ಯತಿಗಳ ವೇಷದಲ್ಲಿ ಅಭ್ಯಂಗನಕ್ಕೆಂದು ಅಣಿಯಾಗುತ್ತಿದ್ದ ಚಾರುದತ್ತನ ದಿವ್ಯ ಸೌಂದರ್ಯಕ್ಕೆ ಸ್ತಂಭಿಸಿ ನಿಂತಿರಲು ಅದರಿಂದ ಹುರುಪುಗೊಂಡ ಚಾರುದತ್ತ ಮಜ್ಜನ ಮುಗಿಸಿಬರುವೆನೆಂದು ಹೇಳಿ, ಮುಗಿಸಿ ಬಂದಾಗ ಅವರಿಂದ ತನ್ನ ದೇಹ ಸೌಂದರ್ಯದ ಬಗ್ಗೆ ಇನ್ನಷ್ಟು ಹೊಗಳಿಕೆಯನ್ನು ನಿರೀಕ್ಷಿಸಿದ್ದವನಿಗೆ,

ಅವನ ದೇಹಕಾಂತಿ ಕುಂದಿದೆ ಎಂದು ಹೇಳಿದಾಗ ಅಚ್ಚರಿಪಟ್ಟು ಅವರಿಗೆ ಹೇಗೆ ತಿಳಿಯಿತೆಂದು ಪ್ರಶ್ನಿಸಲು ಅವಧಿಜ್ಞಾನದ ಮೂಲಕ ತಿಳಿದೆವೆನಲು, ಜ್ಞಾನೋದಯವಾಗಿ, ವೀತರಾಗದೆಡೆಗೆ ಸಾಗುತ್ತಾನೆ.

ಇದಿಷ್ಟೂ ಚಾರುವಸಂತದ ಕಥಾ ಹಂದರವಾಗಿದೆ. ಐದು ಕಾಂಡಗಳ ವಿಸ್ತಾರದಲ್ಲಿ ಕಥನ ಕಾವ್ಯದ ಕಥಾವೃಕ್ಷವು ಬೀಜ ಬಿದ್ದು, ಚಿಗುರೊಡೆದು, ಬೆಳೆದು ಪಲ್ಲವಿಸಿ ಹಬ್ಬಿಟಿಸಿಲೊಡೆದು ಕಡೆಯಲ್ಲಿ ಫಲ ಬಿಡುತ್ತದೆ. ಅರ್ಥ ಪೂರ್ಣವಾದ ಕಾಂಡ ವಿಂಗಡಣೆಯೊಂದಿಗೆ ಸಾಗುವ ಚಾರುದತ್ತ ವಸಂತ ತಿಲಕೆಯರ ಕಥೆಯಲ್ಲಿ, ಚಾರುದತ್ತನನ್ನು ಅತಿಯಾಗಿ ಪ್ರೀತಿಸಿದಳೆಂಬುದನ್ನು ಬಿಟ್ಟರೆ ಚಾರುದತ್ತನದೇ ಪ್ರಧಾನ ಪಾತ್ರ. ಈ ಕಾವ್ಯಕ್ಕೆ ಚಾರುದತ್ತ ವಸಂತ ತಿಲಕೆಯರ ಪ್ರೇಮವನ್ನು ವೈಭವೀಕರಿಸುವ ಉದ್ದೇಶವಷ್ಟೇ ಇದ್ದರೆ ಸಾಲದು. ಇದಕ್ಕೆ ಇನ್ನೂ ಬೇರೆ ಬೇರೆ ಆಯಾಮಗಳ ಸಾಧ್ಯತೆಯೂ ಇದೆ. ಅವರೇ ಹೇಳುವಂತೆ ಸಮಕಾಲೀನ ಚಿಂತನೆ ವಿಚಾರಗಳನ್ನು ಪ್ರಾಚೀನ ಕಥಾಭಿತ್ತಿಯಲ್ಲಿ ಅಳವಡಿಸುವುದು ಮತ್ತು ವ್ಯಾಪಾರ ಲಾಭಗಳಿಕೆಗಷ್ಟೆ ಸೀಮಿತವೆಂಬ ಒಂದು ಜನಾಂಗ ಅಥವಾ ಜನಸಮುದಾಯದಿಂದ ಬಂದ ಭಾನುದತ್ತ, ಚಾರುದತ್ತ - ಇವರುಗಳ ವ್ಯಕ್ತಿತ್ವವನ್ನು ಉದಾತ್ತೀಕರಿಸುವುದಾಗಿದೆ. ನೀತಿ, ಧರ್ಮ, ಸಾಮಾಜಿಕ ಕಳಕಳಿ, ದಯೆ, ಸಹಾನುಭೂತಿ, ಸಕಲ ಜೀವರಾಶಿಗಳ ಕ್ಷೇಮ ಚಿಂತನೆ, ದಾನಗುಣ, ಋಜುತೆ, ಶುಚಿತ್ವ, ನಿಸ್ವಾರ್ಥತೆ, ಸ್ನೇಹಪರತೆ ಇತ್ಯಾದಿಯಾಗಿ ಎಲ್ಲ ಬಗೆಯ ಸಗುಣಾತ್ಮಕ ಮೌಲ್ಯಗಳ ಸಾಕಾರ ರೂಪದಂತೆ ಇದ್ದವರು ಭಾನುದತ್ತ ಮತ್ತು ಚಾರುದತ್ತ. ಆದರೆ ಚಾರುದತ್ತ ಬದುಕಿನ ಒಂದು ಕಾಲಘಟ್ಟದಲ್ಲಿ ಮಾವನ ಪ್ರಚೋದನೆಗೆ ಒಳಗಾಗಿ ಲೈಂಗಿಕ ಸೆಳೆತದ ದೌರ್ಬಲ್ಯದಿಂದ ನೈತಿಕ ಪತನ ಮತ್ತು ಕರ್ತವ್ಯ ಭ್ರಷ್ಟತೆಗೆ ಗುರಿಯಾಗುತ್ತಾನೆ. ಆದರೆ ಈ ಸ್ಥಿತಿ ಕೇವಲ ತಾತ್ಕಾಲಿಕ. ತಂದೆ ಗಳಿಸಿಟ್ಟಿದ್ದ ಆಸ್ತಿ ಪಾಸ್ತಿ, ಕೀರ್ತಿ ಪ್ರತಿಷ್ಠೆಗಳು ಅವನ ನಡತೆಯಿಂದಾಗಿ ಕರಗಿ ಹೋದರೂ, ಕೆಲವು ಸನ್ನಿವೇಶಗಳಿಂದಾಗಿ, ಆತ್ಮ ಗ್ಲಾನಿ, ಪಾಪ ಪ್ರಜ್ಞೆಗಳ ಜಾಗೃತಿಯಿಂದಾಗಿ, ಪಶ್ಚಾತ್ತಾಪದ ಅಗ್ನಿಕುಂಡದಲ್ಲಿ ಬಿದ್ದು ಪರಿಶುದ್ಧನಾಗಿ ಮೊದಲಿಗಿಂತಲೂ ಉದಾತ್ತನಾಗುತ್ತಾನೆ ಮತ್ತು ಆತ್ಮೋನ್ನತಿಯನ್ನೂ ಪಡೆಯುತ್ತಾನೆ. ಆದ್ದರಿಂದ 'ಮಿಲ್ಟನ್‌ನ ಪ್ಯಾರಡೈಸ್ ಲಾಸ್ಟ್ ಅಂಡ್ ಗೈನ್ಡ್' ಕಾವ್ಯದಲ್ಲಿಯಂತೆ ಚಾರುದತ್ತನ ಬದುಕಿನಲ್ಲಿಯೂ ಆತ್ಮ ಪತನ ಮತ್ತು ಆತ್ಮೋದ್ಧಾರಗಳು ಸಾಧ್ಯವಾಗಿ ಇದೊಂದು ಆತ್ಮ ವಿಕಾಸದ ಕತೆಯಾಗಿಯೂ ಪರಿಣಮಿಸುತ್ತದೆ.

ಕಥಾದೃಷ್ಟಿಯಿಂದ ನಿರೂಪಣೆಯ ಶೈಲಿಯಿಂದ ಇದೊಂದು ಸಾರ್ಥಕ ಕಾವ್ಯವೆನಿಸಿದರೂ ಸಮಕಾಲೀನ ವಿಚಾರಗಳು ಕಥಾ ಹಂದರದೊಂದಿಗೆ ಎಷ್ಟು ಸಮರ್ಪಕವಾಗಿ ಹಾಸುಹೊಕ್ಕಿವೆ ಎನ್ನುವುದು ಜಿಜ್ಞಾಸೆಯ ವಿಷಯವಾಗಿದೆ. ಸಮಕಾಲೀನಗೊಳಿಸುವ ಪ್ರಕ್ರಿಯೆಯಲ್ಲಿ, ಇವತ್ತಿನ ಜ್ವಲಂತ ಸಮಸ್ಯೆಗಳಾದ ಹಿಂಸೆ, ಕ್ರೌರ್ಯ, ಜಾತೀಯತೆ, ವರ್ಗಭೇದ, ಆರ್ಥಿಕ ಅಸಮಾನತೆ, ಪರಿಸರ ಕಾಳಜಿ, ಜೀತವ್ಯವಸ್ಥೆ ಅಜ್ಞಾನ, ನಿರಕ್ಷರತೆ, ಬಡತನ ಇತ್ಯಾದಿ ಪರಿಕಲ್ಪನೆಗಳು ಹಾದು

ಹೋಗುತ್ತವೆಯಾದರೂ ಈ ಸಮಸ್ಯೆಗಳಿಂದ ಹುಟ್ಟಿಕೊಳ್ಳುವ ಸನ್ನಿವೇಶ, ಸಂದರ್ಭಗಳ ಚಿತ್ರಣಕ್ಕೆ ಅವಕಾಶವಿಲ್ಲವಾಗಿದೆ. ಮೂಲ ಕಾವ್ಯದ ಆಶಯದ ಮೇಲೆ ಇವು ಹೇರಿಕೆಯಾಗಿ, ಕಥಾಂತರ್ಗತವಾಗಿ, ಕಥೆಗೆ ಪೂರಕವಾಗಿ ಇವುಗಳ ಚರ್ಚೆ ನಿಲ್ಲುವುದಿಲ್ಲ. ಭಾನುದತ್ತ ಚಾರುದತ್ತರ ವ್ಯಕ್ತಿತ್ವನ್ನು ಉದಾತ್ತೀಕರಿಸಲು, ಔನ್ನತ್ಯಕ್ಕೇರಿಸಲು ಸಹಕರಿಸಿವೆಯೇ ಹೊರತಾಗಿ ಅವರ ವ್ಯಕ್ತಿತ್ವದಲ್ಲಿನ ಈ ಮುಖಗಳು ಸನ್ನಿವೇಶಗಳ ಮೂಲಕ ಅನಾವರಣಗೊಳ್ಳುವುದಿಲ್ಲ. ಕವಿಗಳೇ ಭಾನುದತ್ತನ ವ್ಯಕ್ತಿತ್ವವನ್ನು-

**'ಭಾನುವಿನ ಹೃದಯವದು ಮಾನವತೆಯ ಮಂದಾರ**
**ನೆರವಿಗಿಳಿವ ಮೊದಲ ಮೇಲಾಳು ದೀನದಲಿತರ**
**ಕಾರ್ಪಣ್ಯದಗ್ನಿಗೊಡನೆ ಕರಗುವನು ಕರ್ಪೂರ**
**ನೆಲಜಲವಾಯು ಮಾಲಿನ್ಯ ತಪ್ಪಿಸುವ ಕಾಯಕ**
**ಸರ್ವೋದಯ ಅಂತ್ಯೋದಯವೆಂಬ ಕಾರ್ಯ ತವಕ**
**.................................**
**ಸಮರಸವೆ ಜೀವನವೆಂಬ ತತ್ವ ಸಾರಿದನಹುದು'-**

ಎಂದು ವಿವರಿಸುವುದಕ್ಕೆ ನಿಲ್ಲದೆ, ಮಲಹೊರುವ ಪದ್ಧತಿಯನ್ನು ನಿಷೇಧಿಸಿ, ತಲೆ ಮೇಲೆ ಹೊರುವುದನ್ನು ನಿಲ್ಲಿಸಿ ಬಂಡಿಗಳಲ್ಲಿ ಸಾಗಿಸುವ ವ್ಯವಸ್ಥೆಮಾಡಿದ; ಪುರದ ನೆಮ್ಮದಿಗೆ ಬಹುಕಾಲದಿಂದಲೂ ಬೆವರು ಸುರಿಸಿದುಡಿದವರನ್ನು ಮುಕ್ತಗೊಳಿಸಿ, ತೊತ್ತುಗಳಾಗದೆ ಸ್ವತಂತ್ರವಾಗಿ ಬದುಕಲು ಅವಕಾಶ ಕಲ್ಪಿಸಿ ಜೀತಪದ್ಧತಿಗೆ ಕೊನೆ ಹಾಡಿದ; ವ್ಯಾಪಾರ ವ್ಯವಹಾರಗಳಲ್ಲಿ ವಂಚನೆ, ದ್ರೋಹಕ್ಕೆಡೆಯಿಲ್ಲದಂತೆ ಪಾರದರ್ಶಕತೆಯನ್ನು ನಿಯೋಜಿಸಿದ - ಎಂದು ಭಾನುದತ್ತನನ್ನು ಸದ್ಗುಣಗಳ, ಮಾನವೀಯ ಮೌಲ್ಯಗಳ ಹರಿಕಾರನಂತೆ ಚಿತ್ರಿಸಿದ್ದಾರೆ. 'ಸರ್ವೇಜನಾ ಸುಖಿನೋಭವಂತು' ಎಂಬಂತೆ ಎಲ್ಲ ಪ್ರಜೆಗಳ ಸುಖ ಕ್ಷೇಮಗಳಿಗೆ ತುಡಿವವನು ಭಾನುದತ್ತ. ತಾವು ಉದ್ಧಾರವಾದರೆ ಸಾಲದು ಎಲ್ಲರೂ ಅಕ್ಷರ ಬಲ್ಲವರಾಗಬೇಕು. ನಮ್ಮ ಸುತ್ತಮುತ್ತಲಿನ ಪರಿಸರ ನಿರ್ಮಲವಾಗಿರಬೇಕು. ಸೃಷ್ಟಿಯಲ್ಲಿನ ಸಮಸ್ತ ಜೀವರಾಶಿಗಳು ಸ್ವಚ್ಛಂದವಾಗಿ ಬದುಕುವ ಅವಕಾಶಗಳು ಇರಬೇಕು ಎನ್ನುವ ಆದರ್ಶಗಳಲ್ಲಿ ನಂಬಿಕೆ ಇಟ್ಟವ. ಆದ್ದರಿಂದಲೇ ಮಗನ ಮದುವೆಗೆ, ಮರ ಗಿಡಗಳ ಹಿಂಸೆಯಿಂದ ತರುವ ಹೂ ತಳಿರು ತೋರಣಗಳಿಗೆ ಬದಲಾಗಿ ಬಟ್ಟೆಯ ಬಾವುಟಗಳಿಂದ ತೋರಣಗಳನ್ನು ಕಟ್ಟಿಸುತ್ತಾನೆ. ಆದರೆ ಅವನ ಈ ನಿಲುವು ತೀರ ಅತಿರೇಕದ ರೀತಿಯೆನಿಸುತ್ತದೆ.

ತಂದೆಯಂತೆ ಮಗ. ಚಾರುದತ್ತನಲ್ಲಿಯೂ ಪರಿಸರ ಕಾಳಜಿ, ಅಹಿಂಸಾಪ್ರವೃತ್ತಿಗಳು ಸಹಜವಾಗಿ ಮೂಡಿ ನಿಂತಿರುತ್ತವೆ. ಅವನು ಗೆಳೆಯರೊಡನೆ ಮೃಗಯಾ ವಿಹಾರಕ್ಕೆಂದು ಹೊರಟ ಸಂದರ್ಭದಲ್ಲಿ, ಅವನು ಗೆಳೆಯರನ್ನು ಎಚ್ಚರಿಸುವಾಗಿನ ಮಾತುಗಳು ಇಂದಿಗೆ ತೀರಾ ಪ್ರಸ್ತುತವೆನಿಸುತ್ತವೆ. ಅವನ ಮಾತುಗಳಲ್ಲಿ ವಿಜ್ಞಾನಿಗಳೂ ನುಡಿದ ಸತ್ಯದ, ವಾಸ್ತವದ ಪ್ರತಿಫಲವಿದೆ. ಜೀವಹಿಂಸೆ, ನಿಸರ್ಗ ವಿನಾಶಕ್ಕೆ ಮುಂದುವರೆಯುತ್ತಿದ್ದ ಗೆಳೆಯರನ್ನು ತಡೆದು,

"ನಿಲ್ಲಿ ಗೆಳೆಯರೆ ತಾಳಿ ತಾಳ್ಮೆಯಿರಲಿ;
ಕೈದುಗಳ ಮೇಲೆತ್ತುವಿರೀ ಪ್ರಾಣಿ ಸಂಕುಲ
ವಿನಾಶಕೆ? ನಿಸರ್ಗವಿರುವುದು ಮನುಜಕುಲ ರಕ್ಷಿಸೆ
ಪಶುಪಕ್ಷಿ ಕೀಟಗಳು ಪ್ರಕೃತಿಯ ಮಡಿಲೊಳಗೆ
ತಮ್ಮ ಪಾಡಿಗೆ ತಾವು ವಿನೋದ ವಿಹಾರಕೆ ಗುರಿಯಾಗಬೇಕೆ
ಯಾರ ತೀಟೆಯನು ತೀರಿಸಲೀ ಮೃಗಗಳ ಬೇಟೆ?
ಏಕಿಂತು ಕಿರುಚುವಿರಿ ಅರಚುವಿರಿ ಹುಚ್ಚರಂತೆ
ಶಬ್ದ ಮಾಲಿನ್ಯವನೆಸಗದಿರಲದೆ ಲೇಸಂತೆ
ನೀರು ನೆಲಗಾಳಿ ಧ್ವನಿಯ ಮಲಿನತೆ ಬಲುಕೆಡುಕು ಮುಂಬರುವ
ಪೀಳಿಗೆಗೆ ಗೋಳವಾ ನರಕ
ವಿನೋದ ಲಹರಿಗೀಡಾದಗದಿರಲಿ ಜೀವಜಾಲ"

- ಎಂದು ಎಚ್ಚರಿಸುವುದರ ಮೂಲಕ ಚಾರುದತ್ತ ತನ್ನ ಪರಿಸರ ಮಾಲಿನ್ಯ, ಜಲಮಾಲಿನ್ಯ, ಶಬ್ದ ಮಾಲಿನ್ಯಗಳ ಬಗೆಗಿನ ಕಾಳಜಿಯನ್ನು ವ್ಯಕ್ತಪಡಿಸುತ್ತಾನೆ. ಅವನ ಗೆಳೆಯರಿಗೆ ಮಾತ್ರ ಅನ್ವಯವಾಗುವ ಮಾತುಗಳಲ್ಲ ಇವು. ಇವತ್ತಿನ 'ಪರಿಸರ ಮಾಲಿನ್ಯ'ದ ದುರಂತಗಳನ್ನು ಎದುರಿಸುತ್ತಿರುವ ಮತ್ತು ಅದರ ರಕ್ಷಣೆಯ ತುರ್ತಿನ ಸಂದರ್ಭದಲ್ಲಿ ಅತಿ ಮುಖ್ಯವಾದ ಸಂದೇಶವೆನಿಸುತ್ತದೆ. ಪುರಾತನ ಕಾಲದಿಂದಲೂ ಪ್ರಕೃತಿ ಮತ್ತು ಮನುಷ್ಯರ ನಡುವಿನ ಸಂಬಂಧಗಳ ಬಗ್ಗೆ ಋಷಿ, ಮುನಿಗಳು ತತ್ವಜ್ಞಾನಿಗಳು. ಜನಸಾಮಾನ್ಯರು ಚಿಂತನೆ ನಡೆಸುತ್ತಲೆ ಬಂದಿದ್ದಾರೆ. ಆದರೆ ಇವತ್ತಿನ ಮನುಷ್ಯನ ಅತಿಯಾದ ಸ್ವಾರ್ಥ, ಭೌತಿಕ, ವೈಜ್ಞಾನಿಕ ಸುಖಸಾಧನೆಗಳ ಬಗ್ಗೆಯೇ ಆಲೋಚಿಸುತ್ತಿರುವಾಗ ಅವನು 'ಹಸಿರಿನ' ಪ್ರಕೃತಿಯ ಪ್ರಯೋಜನಗಳು ಮತ್ತು ಅದರ ವಿನಾಶದಿಂದ, ಕಾಡುಗಳನ್ನು ಕಡಿಯುತ್ತಾ ಹೋಗುವುದರಿಂದ ನಮಗೆ ಎದುರಾಗಬಹುದಾದ ದುರಂತಗಳ ಬಗ್ಗೆ ಮರೆಯುತ್ತಿದ್ದಾನೆ. ಜಾಗತೀಕರಣದ ಭರಾಟೆಯಲ್ಲಿ ಮನುಷ್ಯನಿಗೆ ನೈಸರ್ಗಿಕವಾದ, ದೇಶೀಯವಾದ ಯಾವುದೂ ಬೇಕಾಗಿಲ್ಲವಾಗುತ್ತಿದೆ. ಇಂತಹ ವರ್ತಮಾನ ಸಂದರ್ಭದಲ್ಲಿ ಹಂಪನಾ ಅವರ ಈ ಸಾಲುಗಳು, ಚಾರುದತ್ತನ ವಿಚಾರ ಲಹರಿ ಅತ್ಯಂತ ಪ್ರಸ್ತುತವೂ ಸಾಂದರ್ಭಿಕವೂ ಆಗುತ್ತದೆ. ಪ್ರಕೃತಿ ಬಗೆಗಿನ ಅವರ ಚಿಂತನೆಯ ಈ ಭಾಗ ನಿಜಕ್ಕೂ ಆಪ್ಯಾಯಮಾನವೆನಿಸುತ್ತದೆ. ಪ್ರಕೃತಿ ಶ್ರೀಮಂತವಾಗಿದ್ದರೆ, ಸಮೃದ್ಧವಾಗಿದ್ದರೆ, ಪಶುಪಕ್ಷಿ ಪ್ರಾಣಿ ಸಂಕುಲ ಉಳಿದರೆ ಈ ಭೂಮಿ ಉಳಿದೀತು. ಭೂಮಿಯ ಮೇಲಿನ ಮನುಷ್ಯರೂ ಉಳಿದಾರು. ಪ್ರಕೃತಿ, ಪರಿಸರದ ಬಗ್ಗೆ ಪ್ರೀತಿ, ಶ್ರದ್ಧೆ, ಕಾಳಜಿ ಉಳಿಸಿಕೊಳ್ಳದೆ ಹೀಗೇ ವಿನಾಶಕ್ಕೇ ಮುಂದಾಗುತ್ತ ಹೋದರೆ ಏನಾಗಬಗುದು ಎಂಬುದರ ಕಲ್ಪನೆ ಮೂಡಿಸುವ ಚಾರುದತ್ತನ ಮಾತುಗಳಲ್ಲಿನ ಎಚ್ಚರಿಕೆ, ಮನುಕುಲಕ್ಕೆ ನೀಡಿದ ಎಚ್ಚರಿಕೆಯಾಗಿದೆ.

"ಕಾಡು ಮಾಡಿದ ಕೇಡಾದರು ಏನೀ ಊರಿಗೆ?
ಹಸಿರು ಹೋದರೀ ಜೀವದುಸಿರು ಉಳಿವುದೇನು?
ಗಿಡ ಮರದನಾಶ ಸುಗಮವದಾ ಸುಡುಗಾಡಿಗೆ
ನಮ್ಮ ಗೋರಿಯ ನಾವೇ ತೋಡುವುದು ಬೇಡಬಿಡಿ.
ಬನ್ನಿ ಗಿಡವನೆಟ್ಟು, ಹಸಿರಿಗೆ ನೀರು ಸುರಿಯೋಣ"

- ಎನ್ನುವುದು ನಮ್ಮೆಲ್ಲರಿಗೂ ನೀಡಿದ ಕರೆಯಂತಿದೆ. ಚಾರುದತ್ತನ ಇಂತಹ ಪರಿಸರದ ಕಾಳಜಿ, ವಿವೇಕೋಪದೇಶ ಕಾವ್ಯದ ಉದ್ದಕ್ಕೂ ಮುಂದುವರಿಯುತ್ತದೆ. ಸಂದರ್ಭಗಳು ಒದಗಿದಾಗಲೆಲ್ಲ ಅವನ ಈ ಜಾಗೃತ ಪ್ರಜ್ಞೆ, ಪ್ರಕೃತಿಗೆ, ಜೀವಕುಲಕ್ಕೆ ಒದಗಬಹುದಾದ ಹಾನಿಯನ್ನು ತಪ್ಪಿಸುತ್ತದೆ. ವ್ಯಾಪಾರ ಪ್ರಯಾಣದ ಸಂದರ್ಭದಲ್ಲಿ, ಅದರಲ್ಲೂ ರತ್ನದ್ವೀಪದ ಸಾಹಸಯಾತ್ರೆಯ ಸಂದರ್ಭದಲ್ಲಿ ಇಂತಹ ವಿವೇಕದ ಎಚ್ಚರ ಮಹತ್ವಪೂರ್ಣವಾಗುತ್ತದೆ.

ಈ ಕೃತಿಯಲ್ಲಿ ಏಳುವ ಮತ್ತೊಂದು ಪ್ರಶ್ನೆ ದೇವರು, ಧರ್ಮ, ಮತ ಸಂಬಂಧವಾಗಿ. ಹಂಪನಾ ಸ್ವತಃ ಜೈನ. ತಮ್ಮ ಕಾವ್ಯದ ನಾಯಕ ಚಾರುದತ್ತ, ಭಾನುದತ್ತ ಜಾತಿಯಿಂದ ವಣಿಕ ಅಥವಾ ಅವರು ಹೇಳುವಂತೆ ಇವತ್ತು ಪ್ರಚಲಿತ, ಔದ್ಯಮಿಕವಾಗಿ ಮುಂದುವರೆದಿರುವ ಆರ್ಯವೈಶ್ಯ. ಆದರೆ ಜೈನ ಮತಾವಲಂಬಿಗಳು. ಕಾವ್ಯದ ಉದ್ದಕ್ಕೂ ಜೈನಮತೀಯ ತಾತ್ವಿಕ ಚಿಂತನೆಗಳು, ಪರಿಕಲ್ಪನೆಗಳೆ ಹಾಸು ಹೊಕ್ಕಂತಿರುವಾಗ, ಆರ್ಯ ವೈಶ್ಯ ಕುಲದೇವತೆಯಾದ ಕನ್ಯಕಾ ಪರಮೇಶ್ವರಿ ಮತ್ತು ಕುದ್ರ ದೇವತೆಗಳು ಅವುಗಳ ಪ್ರಸ್ತಾಪ ಬರುತ್ತದೆ. ಮಾರಮ್ಮನಿಗೆ ಕುರಿಕೋಳಿ ಬಲಿಕೊಟ್ಟ ಭಾನುದತ್ತನ ಕುಟುಂಬಕ್ಕೆ ಒದಗಿದ ಅನಿಷ್ಟವನ್ನು ಪರಿಹರಿಸುವ ಸಲಹೆಯನ್ನು, ಅಹಿಂಸೆಯೇ ಧರ್ಮವೆಂದು, ನಂಬಿದ ದೇವಿಲೆ ನಿರಾಕರಿಸುವಳಾದರೂ ಅಂಬುಜಮ್ಮ ಕನ್ಯಕಾ ಪರಮೇಶ್ವರಿಯರ ಪೂಜೆ, ಹೋಮಕಾರ್ಯ, ಬ್ರಾಹ್ಮಣ ಸಂತರ್ಪಣೆ, ದಾನದಕ್ಷಿಣೆ ಇತ್ಯಾದಿ ಜೈನಮತಕ್ಕೆ ಹೊರತಾದ ರೀತಿಯಲ್ಲಿ ನಿರ್ವಹಿಸುತ್ತಾಳೆ. ಚಾರಣರು, ಖೇಚರರು, ವಿದ್ಯಾಧರರು, ಸಮವಸ್ಸರಣ, ವೀತರಾಗಿ ಸವಣದೀಕ್ಷೆ ಇತ್ಯಾದಿ ವಿವರಗಳ ಮೂಲಕ ನಿರ್ಮಾಣಗೊಂಡ ಒಂದು ನಿರ್ದಿಷ್ಟ ಪರಿಸರದಲ್ಲಿ ದೇವಿಪೂಜೆ ಹೋಮಾದಿಗಳು ಸ್ವಲ್ಪ ಅಸಂಬದ್ಧವಾಗಿ ಕಾಣಿಸುತ್ತವೆ.

ಆರ್ಯ ವೈಶ್ಯ ಜನಾಂಗ, ಕನ್ಯಕಾಪರಮೇಶ್ವರಿ ಇತ್ಯಾದಿ ಪ್ರಯೋಗಗಳು ಈ ಕಾವ್ಯದ ಚೌಕಟ್ಟಿನಲ್ಲಿ, ಕಥಾಸಂದರ್ಭದಲ್ಲಿ ಅನಗತ್ಯವಾಗಿ ತೋರುತ್ತವೆ. ಭಾನುದತ್ತ ಚಂಪಾದೇವಿಯ ಜಾತ್ರೆಯಲ್ಲಿ ನಡೆಯುವ 'ಬಲಿ' ಪೂಜೆಗಳನ್ನು ತಡೆಯುತ್ತಾನೆ. ಹಲವು ಧರ್ಮಗಳ ಬಗ್ಗೆ ಗೌರವವಿರಿಸಿ ಪರಧರ್ಮ ಸಹಿಷ್ಣುತೆಯನ್ನು ಬೋಧಿಸುವುದರ ಜೊತೆಗೆ ಏಕದೇವೋಪಾಸನೆಗೆ ಮಹತ್ವವನ್ನು ನೀಡುತ್ತಾನೆ. ಅವರವರ ಧರ್ಮ, ದೇವರು ಅವರವರು ಇರಿಸಿಕೊಂಡೇ ಸಹಬಾಳ್ವೆಯ ಅಗತ್ಯವನ್ನು ಸಾರುವಂತಹ ಉದಾತ್ತನು; ಜೈನಧರ್ಮ ನಿಷ್ಠೆ ಇರಿಸಿಕೊಂಡವನು. ಮಗನ ವಿಚಾರದಲ್ಲಿ ಬೇಸತ್ತು ದೀಕ್ಷೆ ತಳೆದು ಸುರಲೋಕ ಸುಖದ ಬಯಕೆಯಲ್ಲಿ ಬತ್ತಲೆಗರ ದಾರಿ ಹಿಡಿಯುತ್ತಾನೆ. ಇಂತಹ ಒಂದು ವಾತಾವರಣದಲ್ಲಿ, ಆ ಕುಟುಂಬದವರು ಅನ್ಯದೈವ ಆರಾಧನೆ, ಹೋಮಗಳಿಗೆ ಮನಸ್ಸು ತೆರುವುದು ವಿಸಂಗತಿಯಾಗಿ ಗೋಚರಿಸುತ್ತದೆ.

ಹಂಪನಾ ಅವರ ಮಹತ್ವಾಕಾಂಕ್ಷೆಯ ಈ ಕಥನ ಕಾವ್ಯದಲ್ಲಿ ಸಮಕಾಲೀನವಾದ ಎಷ್ಟೋ ವಿಚಾರಗಳು ನುಸುಳಿವೆ. ವ್ಯಾಪಾರ ಸಮಸ್ಯೆಗಳು, ಆರ್ಥಿಕ ಏರುಪೇರುಗಳು, ಜಾಗತೀಕರಣ ಸಮಸ್ಯೆಗಳು ಎಲ್ಲವೂ ಪ್ರಸ್ತಾಪಿತವಾಗುತ್ತವೆ. ಆದರೆ ಇವೆಲ್ಲ ಕಾವ್ಯದ ಅನಿವಾರ್ಯ ಭಾಗವಾಗದೆ, ವಿಚಾರಕ್ಕೆಂದು ವಿಚಾರಗಳಾಗಿ ಬಂದು ಹೊರಗೇ ಉಳಿದು ಬಿಡುತ್ತವೆ.

ಅಲ್ಲಲ್ಲಿ ಇಂತಹ ಕೆಲವು ವಿಸಂಗತಿಗಳನ್ನು ಹೊರತು ಪಡಿಸಿದರೆ, ನುಡಿಗಟ್ಟಿನ ಬಳಕೆಯಲ್ಲಿ, ದೇಶೀತನದ ನಿರ್ವಹಣೆಯಲ್ಲಿ, ನಿರೂಪಣೆಯ ಲಯದಲ್ಲಿ ಅವರ (ಹಂಪನಾ) ಪ್ರತಿಭೆ ಗರಿಗಟ್ಟಿದೆ. ಕನ್ನಡ ಕಾವ್ಯ ಸಾಹಿತ್ಯ, ಶಾಸ್ತ್ರ ಸಾಹಿತ್ಯವೆಲ್ಲವನ್ನೂ ಆಳವಾಗಿ ಅಧ್ಯಯನ ಮಾಡಿರುವ ಹಂಪನಾ ಅವರಿಗೆ ನಮ್ಮ ಪೂರ್ವ ಕವಿಗಳಾದ ಪಂಪ, ರನ್ನ, ರಾಘವಾಂಕ, ಹರಿಹರ, ಅಕ್ಕ, ಬಸವಣ್ಣ, ಲಕ್ಷ್ಮೀಶ ಮುಂತಾದವರ ದಟ್ಟ ಪ್ರಭಾವದಿಂದ ಬಿಡಿಸಿಕೊಳ್ಳುವುದು ಸಾಧ್ಯವಾಗಿಲ್ಲವೆನ್ನುವುದಕ್ಕೆ ಅಲ್ಲಲ್ಲಿ ಬಂದಿರುವ ಸಾಲುಗಳು ಈ ಕವಿಗಳ ಕಾವ್ಯದಲ್ಲಿನ ಸಾಲುಗಳನ್ನು ನೆನಪಿಗೆ ತರುತ್ತವೆ. ಅಲ್ಲಿನ ಲಯಗಳನ್ನೇ ಅದ್ಭುತವಾಗಿ ಸೆರೆಹಿಡಿದಿದ್ದಾರೆ. ಇಲ್ಲಿನ ಸಾಲುಗಳು, ಸನ್ನಿವೇಶಗಳು ನಮ್ಮ ಕವಿ, ಕಾವ್ಯ ಸಂದರ್ಭಗಳಿಗೆ ನಮ್ಮನ್ನು ಕರೆದೊಯ್ದು ಕಣ್ಣಿಗೆ ಕಟ್ಟಿದಷ್ಟು ಸಮರ್ಥವಾಗಿ ಚಿತ್ರಿಸುತ್ತವೆ. ಹೀಗೆ ನಮ್ಮ ಪೂರ್ವ ಕವಿ ಸ್ಮರಣೆಗೆ ದಾರಿ ಮಾಡುತ್ತವೆಂದ ಮಾತ್ರಕ್ಕೆ ಹಂಪನಾ ಅವರ ಪ್ರತಿಭೆಯ ಬಗ್ಗೆ ಅವರ ಕಾವ್ಯ ಮೌಲ್ಯದ ಬಗ್ಗೆ ಅನುಮಾನ, ಶಂಕೆಗಳನ್ನು ತಾಳುವುದು ನನ್ನ ಉದ್ದೇಶವಲ್ಲ. ಕವಿಗಳು ಪರಸ್ಪರ ಪ್ರಭಾವಕ್ಕೆ ಒಳಗಾಗುವುದು ಸಹಜ; ಸ್ವಾಭಾವಿಕ. ಆದರೆ ಪ್ರಭಾವದ ಪ್ರಮಾಣದಲ್ಲಿ ಮಾತ್ರ ವ್ಯತ್ಯಾಸವಾಗುತ್ತದೆ.

ಹಂಪನಾ ಅವರ ವರ್ಣನಾ ಸಾಮರ್ಥ್ಯ, ಚಿತ್ರಕ ಶಕ್ತಿಗಳು ಕಾವ್ಯದ ಉತ್ತರಾರ್ಧದಲ್ಲಿ ಅದ್ಭುತವಾಗಿ ಬಿಚ್ಚಿಕೊಳ್ಳುತ್ತವೆ. ಪ್ರಮುಖವಾಗಿ ವನವರ್ಣನೆ, ಸಮುದ್ರ ವರ್ಣನೆ, ಸೂಳೆಗೇರಿಯ ವರ್ಣನೆ, ಶೃಂಗಾರ ವರ್ಣನೆ ಮುಂತಾದ ಎಡೆಗಳಲ್ಲಿ ಅದ್ಭುತ, ರೋಮಾಂಚಕಾರಿ ಅನುಭವಗಳು ನಮ್ಮ ಪಾಲಿಗೆ ದಕ್ಕುತ್ತವೆ. ಅದರಲ್ಲಿಯೂ ನೌಕಾಯಾತ್ರೆ ಸಂದರ್ಭದಲ್ಲಿ, ಸಮುದ್ರದ ಸೌಮ್ಯ, ರೌದ್ರ ಭಯಾನಕ ಮುಖಗಳನ್ನು ಪರಿಚಯಿಸುವ ವರ್ಣನಾ ವೈಖರಿಯನ್ನು ಗಮನಿಸಬೇಕು.

**"ಅಲೆಗಳ ಆಟ ಬಲು ಚೆಲುವು | ಆರ್ಣವ ವೀಚಿಯು ದೇಸಿಯು**
**ಮೂಡುವ ತೆರೆ ಓಡುವ ತೆರೆ | ದೂಡುವ ತೆರೆ ಜಾರುವ ತೆರೆ**
**ನೋಡುವ ಬಲಯಾಗುವ ತೆರೆ | ಕಣ್ಣಿಗೆ ಎಲ್ಲೆಲ್ಲಿಯು ತೆರೆ**
**ಕ್ಷಣ ತೋರುತ ಕ್ಷಣ ಪರಿಯುತ | ವಾಃಕರಣಗಳ ಸಿರಿ ಚಿಮ್ಮುತ**
**ಜಲಕನ್ನೆಯು ಜಲ ಸೀರೆಯು | ಹಲನಿರಿಗೆಯ ಬಲು ಚೆಲುವಿಗೆ**
**ಕಡಲಾಳಕೆ ಕಡಲೋಘುಕೆ | ಜಲಚರಗಳ ಸುಳಿದಾಟಕೆ**
**ಜುಮ್ಮೆಂದರೆ ಮೈಮನ ತುಳುಕೆ | ನಡುಹಗಲಿನ ನೇಸರ ಝಳಕೆ**
**ಥಳ ಥಳಿಸಲು ನೀರ್ಗನ್ನಡಿ | ಕರಿತಿಂಗಳು ಭಯವೆನಿಸಲು**
**ಬೆಳುದಿಂಗಳು ಇಳೆ ಗಿಳಿಯಲು | ಕಡಲಾಯಿತು ಹಾಲ್ಗಡಲು"**

- ಎಂದು ಅಲೆಗಳ ನಾಟ್ಯಾಭಿನಯ, ಚಲನ ಸ್ವರೂಪ ಅವುಗಳಿಂದಾಗಿ ಜಲಚರಗಳ ನೆಮ್ಮದಿ ಕದಡಿ ಮೇಲೆದ್ದು ಬರಲು ಮನಕೆ ಮೂಡುವ ರೋಮಾಂಚಕ ಮುದ; ಅಮಾವಾಸ್ಯೆ, ಹುಣ್ಣಿಮೆಗಳಲ್ಲಿ ಕಡಲಿನ ರೀತಿ - ಇವೆಲ್ಲವನ್ನೂ ಸಮರ್ಥಭಾಷಾ ಲಯಗಳಲ್ಲಿ ಹಿಡಿದಿಟ್ಟಿದ್ದಾರೆ.

ಸೌಮ್ಯದಲ್ಲಿ ಸಮುದ್ರದ ಈ ಮೋಹಕ ಮುಖ ಚಂಡಮಾರುತದಿಂದ ಕ್ರುದ್ಧವಾಗಿ ಅದು ತಳೆಯುವ ಭೈರವರೂಪ ಮೈಮನಗಳನ್ನು ತಲ್ಲಣಿಸುವಂತೆ ಮಾಡುತ್ತದೆ. ನೌಕೆಯಲ್ಲಿರುವವರ ಭಯ, ಚಂಡಮಾರುತದಿಂದ ನೌಕೆಗೆ ಆದ ಆಘಾತ; ಅಸಹಾಯಕತೆಯ ಆರ್ತ ಮೊರೆ- ಮುಂತಾದ ವಿವರಗಳನ್ನು ಅಧ್ಭುತವಾಗಿ ಚಿತ್ರಿಸಿದ್ದಾರೆ.

"ಪ್ರಚಂಡ ತೆರೆಗಳೆದ್ದು ಅಪ್ಪಳಿಸುತಿರಲಲ್ಲಿ
ನೆಗೆನೆಗೆದು ಮೊಗೆ ಮೊಗೆದು ಘೂರ್ಣಿಸುತ ಮಸಗುವ
ನೌಕೆಯಲುಗಿ ಬಿಗಿದ ಹಗ್ಗದ ಕಟ್ಟು ಬಿರಿದು
ಕೂವ ಕಂಬ ಮುರಿದು ನಾವೆ ತಿಟ್ಟನೆ ತಿರಿದು
ಕಳಚಿ ಕೀಲುಗಳು ಸೀಳಿ ಹಾಯಿಗಳು ತೇಲಿ
ಹಡಗಿನ ಜನ ನಿಡುಸುಯ್ದು ಕಂಪಿಸುತ್ತ ಭಯಕೆ
ಎದೆ ಬಡಿದು ಬಾಯ್ಬಿಟ್ಟು ಬಿದ್ದು ಹೊರಳಾಡುತ
ಭೈತ್ರ ಜಲಧಿಯೊಳೋಡಿ ಬಂಡೆಗಳ ನೆಡಹುತ
ನಾವೆ ಮುಳುಗುವ ಸಮಯ ಸಮೀಪಿಸುತಿರಲು
ಗಡಗಡ ನಡುಗುತ ಸಹವಂದಿಗರು......

- ಎಂದು ಏಕಕಾಲದಲ್ಲಿ ನೌಕೆಗೆ ಮತ್ತು ಪ್ರಯಾಣಿಕರಿಗೆ ಒದಗಿದ ಸಂಕಟವನ್ನು ಚಿತ್ರವತ್ತಾಗಿ ವಿವರಿಸಿದ್ದಾರೆ. ಹೀಗೆ ಒಂದೊಂದು ಪ್ರಸಂಗದಲ್ಲೂ ಔಚಿತ್ಯಪೂರ್ಣ, ಧ್ವನಿಪೂರ್ಣ ಪದ ಪ್ರಯೋಗಗಳ ಮೂಲಕ ಯಥಾವತ್ತಾದ, ಸಮರ್ಥವಾದ ರೀತಿಯಲ್ಲಿ ವಿವರಿಸಿದ್ದಾರೆ.

ಇಂತಹದೇ ಸಮರ್ಥ ವಿವರಣೆಗಳು ವೇಶ್ಯಾವಾಟಿಕೆ, ಶೃಂಗಾರ ಲೀಲೆಗಳ ಸಂದರ್ಭದಲ್ಲಿ ಕಾಣಿಸಿಕೊಳ್ಳುತ್ತವೆ. ವಾತ್ಸ್ಯಾಯನನ ವರ್ಣನೆಗೆ ಸರಿಮಿಗಿಲೆನಿಸುವಂತಹ ರೀತಿಯಲ್ಲಿ ಚಾರುದತ್ತ ವಸಂತ ತಿಲಕೆಯರ ಸುರತ ಕ್ರೀಡೆಯು ಸೂಕ್ಷ್ಮ ವಿವರಗಳೊಂದಿಗೆ ನಿರೂಪಿತವಾಗಿವೆ. ನಮ್ಮ ಪೂರ್ವ ಕವಿಗಳಲ್ಲಿನ ಶೃಂಗಾರ ಸನ್ನಿವೇಶಗಳಿಗೂ ಮಿಗಿಲಾದ ವರ್ಣನಾ ವೈಖರಿ ಇಲ್ಲಿ ಕಾಣಸುತ್ತದೆ.

ಚಾರುದತ್ತ ವಸಂತ ತಿಲಕೆಯರ ಏಕಾಂತದಲ್ಲಿನ ಒಂದು ಸರಸ ಸನ್ನಿವೇಶದಲ್ಲಿ,

ಕುತ್ತಿಗೆ ಸರಕೆಂದು ಮುಂಚಾಚಿದ ಚಾರುದತ್ತನ
ಮುಂಗೈಯನು ತನ್ನಂಗೈಯಲಿ ಆಂತು ನಳಿನ ಮುಖಿ
ಸಿಕ್ಕಿದ ಸೆರಗನೆ ಸೆರಗನೋಸರಿಸೆ ಜೋಡಿ ಕಳಶ
ಅಮೃತ ಪೀಯೂಷ ಪಾನಕೆ ಕದ ತೆರೆವೊಲು ಕುಪ್ಪುಸ
ಜಾರಲು ಕಾಮನು ಬಿಟ್ಟನು ಒಟ್ಟಿಗೆ ಐದು ಬಾಣ
ಡವ ಗುಟ್ಟಲು ಎದೆ ಬಡಿತ ಜುಮ್ಮನೆ ನರನಾಡಿಗಳು....

..... ಎಂದು ಹೀಗೆಯೇ ರೋಮಾಂಚಕಾರಿಯಾದ ರೀತಿಯಲ್ಲಿ ವರ್ಣನೆ ಮುಂದುವರೆಯುತ್ತದೆ.

ಇದರಷ್ಟೇ ಕೈ ಕೊಳ್ಳುವ ಸಾಹಸಯಾತ್ರೆಯ ವಿವರಗಳು, ಕಡಿದಾದ ದಾರಿಗಳು, ಬೆಟ್ಟ ಗುಡ್ಡ ಗುಹೆಗಳು, ಇವುಗಳನ್ನು ಲಂಘಿಸುವಲ್ಲಿ ಚಾರುದತ್ತ ಮತ್ತು ಗೆಳೆಯರು ತೋರುವ ಸಾಹಸ ಇವೆಲ್ಲವೂ ಮೈ ನವಿರೇಳಿಸುತ್ತವೆ. ಹೆಜ್ಜೆ ಹೆಜ್ಜೆಗೂ ದಟ್ಟವಾಗುತ್ತ ಹೋಗುವ ನಿಗೂಢತೆ ಓದುಗರಲ್ಲಿ ಕುತೂಹಲವನ್ನು ಕೆರಳಿಸುತ್ತದೆ.

ಈ ಕಾವ್ಯದ ಇನ್ನೊಂದು ಮುಖ್ಯ ನೆಲೆ ಸ್ತ್ರೀವಾದಿ ಚಿಂತನೆ. ದೇವಿಲೆ, ಮಿತ್ರಾವತಿ, ಸುಮಿತ್ರೆ, ವಸಂತ ತಿಲಕೆ - ಇವರೆಲ್ಲರೂ ಉದಾತ್ತ ವ್ಯಕ್ತಿತ್ವದವರು. ಅನಾಮಿಕೆ ಒಬ್ಬಳೇ ಇರುವುದರಲ್ಲಿ ಸ್ವಲ್ಪ ಮಟ್ಟಿಗೆ ಖಳನಾಯಕಿಯಾಗಿ ಕಾಣಿಸಿಕೊಳ್ಳುತ್ತಾಳೆ. ಆದರೆ ಮಗಳ ಮೇಲಿನ ಅದಮ್ಯ ಪ್ರೀತಿ, ವಾತ್ಸಲ್ಯಗಳು, ಅವಳು ಹಾಕಿದ ಸಾವಿನ ಬೆದರಿಕೆಗಳು, ಒಂದು ಹಂತದಲ್ಲಿ ಸೂಕ್ಷ್ಮವಾದ ಆತ್ಮಾವಲೋಕನಗಳು ಅವಳನ್ನೂ ಉದಾತ್ತೀಕರಿಸಿ ಬಿಡುತ್ತದೆ. ತಮ್ಮಂತಹವರ ಅನಿಷ್ಟ ಬದುಕಿಗೆ

ಜಿಗುಪ್ಸೆಗೊಂಡು ಸಂಸಾರ ವಿಮುಖಳಾಗಿ ಸವಣಿತಿಯಾಗಲು ಹೊರಟು ಬಿಡುತ್ತಾಳೆ. ದೇವಿಲೆ ಮೊದಲ್ಗೊಂಡು ಎಲ್ಲ ಸ್ತ್ರೀ ಪಾತ್ರಗಳು, ನಯ ವಿನಯ, ಕಷ್ಟ ಸಹಿಷ್ಣುತೆ, ಧೀರತೆ, ದೃಢತೆ, ಉದಾರತೆಗಳನ್ನು ಮೈಗೂಡಿಸಿಕೊಂಡವರು. ಸಂಪ್ರದಾಯ ನಿಷ್ಠೆ, ಸಾಮಾಜಿಕ ನಿರ್ಬಂಧಗಳ ನಡುವೆಯೂ ಸ್ವತಂತ್ರವಾಗಿ ಆಲೋಚಿಸಬಲ್ಲರು. ಪ್ರತಿಕೂಲ ಪರಿಸ್ಥಿತಿಗಳಲ್ಲಿಯೂ ಅಧೀರರಾಗದೆ ಗೊಣಗಾಟವಿಲ್ಲದೆ ಬದುಕನ್ನು ಬಂದಂತೆ ಸ್ವೀಕರಿಸಿ ನಿಲ್ಲುವ ಎದೆಗಾರಿಕೆ, ಸಮಚಿತ್ತತೆಯುಳ್ಳವರು. ಮಗನ ವಿಚಾರದಲ್ಲಿ ಬೇಸರಗೊಂಡ ತಂದೆ (ಭಾನುದತ್ತ) ವೈರಾಗ್ಯಕ್ಕೊಲಿದು ಒಂದು ರೀತಿ ಪಲಾಯನ ಮಾಡಿದರೆ, ದೇವಿಲೆ ತಾನುಳಿದು ಸಂಸಾರಭಾರದ ಹೊಣೆ ಹೊರುತ್ತಾಳೆ. ಮಗನಿಗೂ ನೈತಿಕ ಬಲವಾಗಿ ನಿಲ್ಲುತ್ತಾಳೆ. ಮಿತ್ರವತಿ ಗಂಡನ ಔದಾಸೀನ್ಯ, ನಿರ್ಲಕ್ಷ್ಯಗಳನ್ನು ಸಹಿಸಿಕೊಂಡು, ಕಣ್ಣೀರಿನಲ್ಲಿ ಮೀಯುತ್ತಿದ್ದರೂ ಕಷ್ಟ ಕಾರ್ಪಣ್ಯಗಳ ನಂಜನ್ನೇ ಕುಡಿಯುತ್ತಿದ್ದರೂ, ಗಂಡನನ್ನು ಪ್ರತಿಭಟಿಸುವುದಿಲ್ಲ. ಕೆಡೆನುಡಿವುದಿಲ್ಲ. ತನ್ನ ಹಣೆಬರಹವನ್ನು ಹಳಿಯುತ್ತಾಳೆಯೇ ಹೊರತಾಗಿ ಯಾರ ವಿಚಾರದಲ್ಲೂ ಕಟುನುಡಿಯುವುದಿಲ್ಲ. ಕಡೆಗೆ ತನಗೆ ಸವತಿಯಾಗಿ ಬಂದು ನಿಂತ ವಸಂತತಿಲಕೆಯನ್ನು, ಅತ್ತೆ ದೇವಿಲೆ ಸುಲಭವಾಗಿ ಒಪ್ಪಿಕೊಳ್ಳದಿದ್ದರೂ, ಸಮಾಜದ ಪ್ರತಿಷ್ಠಿತ ವರ್ಗದವರಿಂದ, ತನ್ನ ಜಾತಿ ಹಿರಿಯರಿಂದ, ನೆರೆಹೊರೆಯವರಿಂದ ಹೊರಟ ಕಟಕಿ, ವ್ಯಂಗ್ಯ, ಪ್ರತಿರೋಧಗಳ ನಡುವೆಯೂ ವಸಂತ ತಿಲಕೆಯನ್ನು ಒಪ್ಪಿಕೊಳ್ಳಲು ಮುಂದಾಗುತ್ತಾಳೆ. 'ಗುಣಗ್ರಾಹಿ' ಗುಣದವಳಾದ ಮಿತ್ರಾವತಿಗೆ ವಸಂತ ತಿಲಕೆಯ ರೂಪ, ಲಾವಣ್ಯ, ಸದ್ಗುಣಗಳು ತಟ್ಟನೆ ಮನವರಿಕೆಯಾಗುತ್ತದೆ. ಅಲ್ಲದೆ ಅವಳು ತಿರಸ್ಕೃತಳಾದಲ್ಲಿ ಪುರುಷವಂಚಿತಳೂ, ಶೋಷಿತಳೂ ಆಗುತ್ತಾಳೆ. ಚಾರುದತ್ತನ ಬಗ್ಗೆ ಅವಳ ಅದಮ್ಯ ಪ್ರೀತಿ, ಸಿರಿಸಂಪತ್ತೆಲ್ಲವನ್ನೂ ಒದ್ದು ಬಂದ ಅವಳ ತ್ಯಾಗ ಮನೋಭಾವ, ನಿರ್ಗತಿಕನೂ, ದರಿದ್ರನೂ ಆಗಿರುವ ಚಾರುದತ್ತನಿಗಾಗಿ ಆತ್ಮಾಹುತಿಗೂ ಸಿದ್ಧಗೊಂಡ ಅವಳ ಪರಿ, ಸ್ವಜಾತಿಯ ಬಗ್ಗೆ ಸಹಾನುಭೂತಿಗೆ ಒಳಗಾಗುವಂತಾಗುತ್ತದೆ.

ಕುಲೀನ ಆರ್ಯವೈಶ್ಯರ ಮನೆಗೆ ವೇಶ್ಯೆ ಸೊಸೆಯಾಗುವುದನ್ನೂ, ತನ್ನ ಸ್ವಂತ ಸೊಸೆಗೆ ಅನ್ಯಾಯವಾಗುವುದನ್ನು ಸಹಿಸದ ಅತ್ತೆನಿರಾಕರಿಸಿದರೂ, ವಸಂತ ತಿಲಕೆಯನ್ನು ಒಮ್ಮೆ ಅಡಿಯಿಂದ ಮುಡಿಯವರೆಗೆ ಅವಲೋಕಿಸಿದಾಗ,

> **" ಗಂಡನಬಾಯಿಂದಲು ಆಗಾಗ ಕೇಳಿದ್ದ |**
> **ವಿನಯಶ್ರೀಯಿೀಕೆ ಠಕ್ಕು ಸೊಕ್ಕಿನವಳಲ್ಲ"**

-ಎಂದು ಖಾತ್ರಿಯಾದುದರ ಜೊತೆಗೆ

> **"ಚಾರು ಬಿತ್ತಿದ ಕಾಳು ಹೊತ್ತು ನಿಂತಿರುವಾಕೆ ಪುಷ್ಪವತಿ**
> **ನಾನು ಫಲವತಿ ಭಾಗ್ಯಲಕ್ಷ್ಮಿಯಾಕೆ**
> **ಈ ಮನೆಗೆ ಸಹಜ ಹಕ್ಕೊಕ್ತಾಯ ಅವಳಿಗಿದೆ" -**

ಎಂದು ಕಾನೂನು ಬದ್ಧ ಆಲೋಚನೆಗಳ ಹಿನ್ನೆಲೆಯಲ್ಲಿ ಬರಮಾಡಿಕೊಳ್ಳುವ ಅವಳ ಔದಾರ್ಯ ಹೃದಯ ಸ್ಪರ್ಶಿಯಾದ ಸನ್ನಿವೇಶದ ಮೂಲಕ ಎತ್ತಿ ತೋರಿಸಿದ್ದಾರೆ.

ಹೀಗೆ ಹಂಪನಾ ಅವರು ತಮ್ಮ ಕಾವ್ಯದ ಕೇಂದ್ರವಸ್ತುವಾದ ಆದರ್ಶ, ಅನನ್ಯ ಪ್ರೀತಿ, ಪ್ರೇಮದ ಚಿತ್ರಣಕ್ಕಷ್ಟೇ ಸೀಮಿತಗೊಳ್ಳದೆ ಸಮಕಾಲೀನವೆನ್ನುವ ಹಲವಾರು ವಿಚಾರಗಳಾದ ವಿದೇಶೀ ಮಾರುಕಟ್ಟೆ, ಆಧುನಿಕ ಆರ್ಥಿಕ ನೀತಿಗಳು ಜಾಗತೀಕರಣ, ಪರಿಸರ ಸಮಸ್ಯೆ, ವಾಣಿಜ್ಯವಲಯದ ಸ್ಥಿತ್ಯಂತರಗಳು, ತಲ್ಲಣಗಳು, ಸ್ತ್ರೀವಾದಿ ನೆಲೆಯ ಚಿಂತನೆಗಳಲ್ಲಿ ಒಂದಾದ ವೇಶ್ಯಾ ಸಮಸ್ಯೆ - ಹೀಗೆ, ಇವೆಲ್ಲಕ್ಕೂ ಅವಕಾಶವನ್ನು ಕಲ್ಪಿಸಿದ್ದಾರೆ. ಸಮಕಾಲೀನಗೊಳಿಸುವ ಪ್ರಕ್ರಿಯೆಯಲ್ಲಿ ವಿಚಾರಗಳು ಸಮಕಾಲೀನವಾಗಬಹುದೇ ಹೊರತಾಗಿ ವಸ್ತುಗಳು, ಪ್ರದೇಶಗಳು, ನಾಮನಿರ್ದೇಶನಗಳು ಮಂಡ್ಯದ ಬೆಣ್ಣೆ, ಧಾರವಾಡದ ಪೇಡ, ಬೆಳಗಾವಿಯ ಕುಂದ, ಗೋಕಾಕದ ಕರಿದಂಟು, ಮಂಗಳೂರಿನ ಬಾಳೆಯುಪ್ಪೇರಿ ಮೊದಲಾದವುಗಳು ಆ ಕಾವ್ಯದ, ಸನ್ನಿವೇಶದ ಪರಿಸರದಲ್ಲಿ ಅತಿಯೆನಿಸಿ ಮುಜುಗರಕ್ಕೆಡೆಯಾಗುತ್ತದೆ.

ಸಮಕಾಲೀನತೆಯನ್ನು ಅತಿಗೊಳಿಸುವ ಕೆಲವು ಸಂದರ್ಭಗ್ಳನ್ನು ಬಿಟ್ಟರೆ, ಇಡೀ ಕಾವ್ಯ ಅನೇಕ ನೆಲೆಗಳಲ್ಲಿ ಅನುಭೂತಿಯನ್ನು ಓದುಗರಿಗೆ ಹಂಚಿಕೊಡುತ್ತ, ಪ್ರಸಂಗಗಳ ರಮ್ಯತೆ, ರಸಮಯತೆ, ರೋಚಕತೆಗಳಿಂದಾಗಿ ಕುತೂಹಲ ಅಚ್ಚರಿಗಳನ್ನು ಹುಟ್ಟುಹಾಕುತ್ತ, ರತ್ನದ್ವೀಪಕ್ಕೆ ಸಾಗಬೇಕಾದ ಹಾದಿಗಳಲ್ಲಿ ಮೈ ನವಿರೇಳಿಸುವಂತಹ ಸನ್ನಿವೇಶಗಳನ್ನು ನಿರ್ಮಿಸುತ್ತ ಅತ್ಯಂತ ಪರಿಣಾಮಕಾರಿಯಾಗಿ ಸಾಗಿದೆ.

ನಿರಂತರ ಚಿಂತನೆ, ಅಧ್ಯಯನ, ಅದಮ್ಯ ಒತ್ತಡಗಳಿಗೆ ಮಣಿದ ಹಂಪನಾ ಅವರು ತಮ್ಮ ಈ ಸುದೀರ್ಘವಾದ ಕಾವ್ಯವನ್ನು ಕೇವಲ ಒಂದು ತಿಂಗಳಲ್ಲಿ ಮುಗಿಸಿ ಕವಿಗಳಿಗೇ ಅಚ್ಚರಿ ಮೂಡಿಸಿದ್ದಾರೆ; ಒಂದು ಸವಾಲಾಗಿದ್ದಾರೆ. ಆಧುನಿಕ 'ಮಹಾ ಕಾವ್ಯಗಳು', 'ಕಥನ ಕಾವ್ಯಗಳು' ಸಾಲಿನಲ್ಲಿ ನಿಂತಿರುವ ಈ 'ಚಾರುವಸಂತ' ಕನ್ನಡ ಕಾವ್ಯ ಸಂದರ್ಭದಲ್ಲಿ ಹೆಚ್ಚಿನ ಚರ್ಚೆಗೆ ಒಳಗಾದಾಗ ಅದರ ನೆಲೆ ಬೆಲೆಗಳನ್ನು ಗುರುತಿಸಲು ಸಹಾಯವಾಗುತ್ತದೆ.

ಕಾವ್ಯ ಪ್ರವೇಶವೇ ಇಲ್ಲದ ಹಂಪನಾ ಅವರು ಇಂತಹ ಒಂದು ಸುದೀರ್ಘ ಕಾವ್ಯವನ್ನು ಬರೆದು ತಮ್ಮ ಪ್ರತಿಭೆ, ಕಾವ್ಯ ಸೃಷ್ಟಿಗೆ ಬೇಕಾದ ಆರ್ದ್ರತೆ, ಮನೋಧರ್ಮಗಳನ್ನು ಕನ್ನಡ ಲೋಕಕ್ಕೆ ಪರಿಚಯಿಸಿದ್ದಾರೆ.



## ಡಾ. ಸಾ. ಶಿ. ಮರುಳಯ್ಯ ಅವರ ಎರಡು ನಾಟಕಗಳು

ಸುಪ್ರಸಿದ್ಧ ಕವಿಗಳೂ ಕನ್ನಡ ಪ್ರಾಧ್ಯಾಪಕರೂ ಆಗಿ ಕನ್ನಡ ಸಾಹಿತ್ಯ ಲೋಕಕ್ಕೆ ಪರಿಚಿತರಿರುವ ಡಾ. ಸಾ. ಶೀ. ಮರುಳಯ್ಯ ಅವರು ನಾಟಕಗಳನ್ನೂ ಬರೆದಿರುವುದು ಅತ್ಯಂತ ಕುತೂಹಲಕಾರಿ ಸಂಗತಿಯಾಗಿದೆ. ಸುಮಾರು ನಾಲ್ಕು ದಶಕಗಳಷ್ಟು ಹಿಂದೆಯೇ ಅವರು ನಾಟಕ ರಚನೆಗೆ ತೊಡಗಿದ್ದರೆಂಬುದಕ್ಕೆ ಅವರ 'ಮರೀಬೇಡಿ' ಎಂಬ ಪ್ರಹಸನ ಮತ್ತು 'ವಿಜಯ ವಾತಾಪಿ' ಎಂಬ ಗಂಭೀರ ನಾಟಕ ಗಳೇ ಸಾಕ್ಷಿಯಾಗಿವೆ, ಅರವತ್ತು ಎಪ್ಪತ್ತರ ದಶಕದಲ್ಲಿ ಕನ್ನಡ ರಂಗಭೂಮಿ ಕ್ರಿಯಾಶೀಲವಾಗತೊಡಗಿತ್ತು. ಅಂತಹ ಸಂದರ್ಭದಲ್ಲಿ ಬಹುಶಃ ಮರುಳಯ್ಯನವರು ನಾಟಕ ರಚನೆಗೆ ಪ್ರೇರಣೆ ಪಡೆದಿರಬಹುದೆನಿಸುತ್ತದೆ. ಬರೆದಿರುವುದು ಎರಡೇ ನಾಟಕಗಳಾದರೂ ನಾಟಕಗಳ ಆಶಯಕ್ಕೆ ಬದ್ಧವಾಗಿ ಯಶಸ್ವೀ ನಾಟಕಗಳಾಗಿವೆ ಮತ್ತು ರಂಗದ ಮೇಲೆ ಪ್ರಯೋಗವಾಗಿವೆ.

1961ರ ಸುಮಾರಿಗೆ ಬರೆದ 'ಮರೀಬೇಡ' ನಾಟಕ ಮರಗುಳಿಯಾದ ಪ್ರಾಣಿಶಾಸ್ತ್ರ ಪ್ರೊಫೆಸರನೊಬ್ಬನ ಸುತ್ತ ಹೆಣೆದ ಕತೆಯಾಗಿದೆ. ವಾಸ್ತವವಾಗಿ ಕತೆಯ ಅಂಶವೇ ಇಲ್ಲ. ಮರಗುಳೀತನದ ವಿವಿಧ ಮುಖಗಳನ್ನು ಪರಿಚಯಿಸುವುದರ ಜೊತೆಗೆ ಮರಗುಳಿತನ ದಾರಿಮಾಡಬಹುದಾದ ಮುಜುಗರ ಪರಿಸ್ಥಿತಿ, ದುರಂತಗಳನ್ನು ನಾಟಕದ ಬೆಳವಣಿಗೆ ಸೂಚಿಸುತ್ತದೆ. ಇಲ್ಲಿನ ಸನ್ನಿವೇಶ, ಸಂದರ್ಭಗಳು ಪ್ರೊಫೆಸರನ ಮರಗುಳಿತನದ ಪರಿಣಾಮವಾಗಿ ಹುಟ್ಟಿಕೊಳ್ಳುವಂತಹವು. ಇವುಗಳನ್ನು ಸಂದರ್ಭ, ಸನ್ನಿವೇಶಗಳೆನ್ನುವುದಕ್ಕಿಂತ ಅವಾಂತರಗಳೆನ್ನುವುದೇ ಸೂಕ್ತವೆನಿಸುತ್ತದೆ. ಈ ಅವಾಂತರಗಳು ಪ್ರೇಕ್ಷಕರನ್ನು ನಗೆಗಡಲಿನಲ್ಲಿ ಮುಳುಗಿಸುತ್ತವೆ ಎನ್ನುವುದು ನಿಜವಾದರೂ ಕೆಲವು ಗಂಭೀರ ಪರಿಣಾಮಗಳಿಗೆ ದಾರಿ ಮಾಡಿ ದುರಂತವಾಗಿಸುವ ಅಪಾಯಗಳೂ ಇರುತ್ತವೆನ್ನುವುದಕ್ಕೆ ಔಷಧಿಗೆ ಬದಲಾಗಿ ಮಗುವಿಗೆ ಇಂಕನ್ನು ಕುಡಿಸಿ ಸಾವಿನಂಚಿಗೆ ಕೊಂಡೊಯ್ದುದ್ದೇ ಸಾಕ್ಷಿ.

ಮೂರು ದೃಶ್ಯಗಳಲ್ಲಿ ಬೆಳೆಯುವ ಈ ನಾಟಕದ ಯಶಸ್ಸು ನಿಂತಿರುವುದು ಕೇವಲ ಸಂಭಾಷಣೆಗಳ ಮೇಲೆ! ಚುರುಕಾದ, ಲವಲವಿಕೆಯ ಮಾತುಗಳು ಹೆಜ್ಜೆ ಹೆಜ್ಜೆಗೂ ಪ್ರೊಫೆಸರನ ಮರಗುಳಿತನದ ತೀವ್ರತೆಯ ಸ್ವರೂಪವನ್ನೂ, ಬಿಚ್ಚಿಡುತ್ತಾ ಹೋಗುತ್ತವೆ. ಮರಗುಳಿತನದ ಹಲವು ಮುಖಗಳು ತೆರೆದುಕೊಳ್ಳುತ್ತಾ ಹೋದಂತೆ ಹಾಸ್ಯದ ಪರಿಸರ ನಿರ್ಮಾಣವಾಗುತ್ತದೆ. ತಾನೇನು, ಎಲ್ಲಿದ್ದೇನೆ,

ತನ್ನೆದುರು ಇರುವವರು ಯಾರು, ತಾನೇನು ಮಾಡುತ್ತಿದ್ದೇನೆ, ತಾನೇನು ಕುಡಿಯುತ್ತಿದ್ದೇನೆ ಎನ್ನುವುದನ್ನೂ ಮರೆತುಹೋಗುವ ಪ್ರಚಂಡ ಮರೆವಿನ ಮಾಸ್ಟರ್ ರಾಜಣ್ಣ. ಇಂತಹ ಮರಗುಳಿಯನ್ನು ಮದುವೆಯಾದ ಮಡದಿಯರ ಪಾಡು ಊಹಾತೀತವಾದದ್ದು. ಮರಗುಳಿತನದ ಕೊರತೆಯೊಂದನ್ನು ಬಿಟ್ಟರೆ ರಾಜಣ್ಣ ಎಲ್ಲ ವಿಧದಿಂದಲೂ ಸಮರ್ಥ. ಪ್ರಪಂಚದ ಆಗುಹೋಗುಗಳ ಬಗ್ಗೆ ಬದುಕಿನ ಸ್ಥಿತಿಗತಿಗಳ ಬಗ್ಗೆ ಪ್ರೀತಿ, ಪ್ರೇಮ, ದಾಂಪತ್ಯ ಮಕ್ಕಳ ಬಗ್ಗೆ, ಸಾಮಾಜಿಕ ಸಮಸ್ಯೆಗಳ ಬಗ್ಗೆ ಸ್ಪಂದಿಸಬಲ್ಲ. ಮಾನವೀಯವಾಗಿ ವರ್ತಿಸಬಲ್ಲ. ತನ್ನ ಮರಗುಳಿತನದ ಬಗ್ಗೆ ಸಿಟ್ಟಾಗುವ, ದೂರುವ, ತಲೆ ಚಚ್ಚಿಕೊಳ್ಳುವ ಹೆಂಡತಿಯ ಬಗ್ಗೆ ಅಸಮಾಧಾನವಿಲ್ಲ. ಜೀವನದಲ್ಲಿ ಗಂಡ ಹೆಂಡಿರ ನಡುವಿನ ವಿರಸ, ವಾಗ್ವಾದ, ಆರೋಪ, ಪ್ರತ್ಯಾರೋಪಗಳೆಲ್ಲವೂ ಕಿಡಿಗಳಾಗಿ ಬೆಂಕಿಯಾಗಿ ಸುಡದೆ ಮರಗುಳಿತನದ ಪರಿಣಾಮವಾಗಿ ತಣ್ಣಗೆ ಆರಿ ಹೋಗುತ್ತದೆ. ಕಿತ್ತುಕೊಂಡು ಹೋಗಬಹುದಾದ ಸಂಬಂಧಗಳೂ ರಾಜಣ್ಣನ ಆರೋಗ್ಯಪೂರ್ಣವಾದ ಹಗುರವಾದ ಮನಃ ಸ್ಥಿತಿಯಿಂದ ಗಟ್ಟಿಯಾಗಿ ಉಳಿಯುತ್ತವೆ.

ಸಾಮಾಜಿಕ ವಸ್ತುವನ್ನೊಳಗೊಂಡ ಈ ಪ್ರಹಸನದಲ್ಲಿ ಹಾಸ್ಯವೇ ಬಂಡವಾಳ. ಬೇಸರ ಬರಿಸದ ಲವಲವಿಕೆಯ ಮಾತುಗಳು ಮತ್ತು ಅದರಲ್ಲಿನ ಹಾಸ್ಯ ಗಂಭೀರ ವಿಷಯ, ವಿಚಾರಗಳನ್ನು ಕಹಿ ಔಷಧಿಯಂತೆ ನೀಡದೆ ಸಿಹಿಗುಳಿಗೆಗಳಾಗಿ ನೀಡಿದೆ. ಗಂಡ - ಹೆಂಡಿರ ನಡುವೆ ವಿರಸದಂತೆ ಕಂಡರೂ ಅದು ಸರಸದ ಮತ್ತೊಂದು ರೂಪವೇ ಆಗಿದೆ. ಹೆಂಡತಿ ದೂರುತ್ತಲೇ ಆಕ್ಷೇಪಿಸುತ್ತಲೇ ಅವಳೆದೆಯ ಪ್ರೀತಿಯನ್ನು ಧಾರೆಯೆರೆಯುತ್ತಾಳೆ. ಗಂಡ ಹೆಂಡಿರು ಪರಸ್ಪರ ಟೀಕಿಸುತ್ತ ಲೇವಡಿಮಾಡುತ್ತಲೇ ಪ್ರೀತಿಯ ಎಳೆಗಳಿಂದ ಬಂಧಿತರಾಗಿ ಅನ್ಯೋನ್ಯ ದಾಂಪತ್ಯವನ್ನು ಬಾಳುತ್ತಾರೆ. ಗಂಡನ ವ್ಯಕ್ತಿತ್ವದ ಬಗೆಗಿನ ವಿಶ್ವಾಸ. ಅಚಲ ನಂಬಿಕೆ, ಗಂಡನ ನಡವಳಿಕೆಯನ್ನು ಶಂಕಿಸದಂತೆ ಕಾಪಾಡುತ್ತದೆ.

ರಾಜಣ್ಣನ ಮರಗುಳಿತನಕ್ಕೆ ನಾಟಕದಲ್ಲಿ ಹೆಜ್ಜೆ ಹೆಜ್ಜೆಗೂ ನೂರೆಂಟು ನಿದರ್ಶನಗಳು. ಹೆಂಡತಿಯೊಡನೆ ಮಾತಾಡುವುದು ಮರೆತು ಭಾಷಣಮಾಡುತ್ತಾನೆ. ಕೆಲಸದಾಕೆಯನ್ನು ಹೆಂಡತಿಯೆಂದು ಅಪ್ಪಿಕೊಳ್ಳುತ್ತಾನೆ. ಕಾಫಿಲೋಟವೆಂದು, ಕಪ್ಪೆಗಳನ್ನು ತಂದಿರಿಸಿದ್ದನ್ನೇ ಬಾಯಿಗೆತ್ತಿಕೊಳ್ಳುತ್ತಾನೆ. ಕೇಳುವ ಪ್ರಶ್ನೆಗಳು ಅಸಂಬದ್ಧವಾಗಿ ಉತ್ತರಿಸುತ್ತಾನೆ. - ಇಂಥಾದ್ದೆಲ್ಲ ಮಾಡುವ ಗಂಡನ ಬಗ್ಗೆ ಬೇಸರ ಪಟ್ಟ ಹೆಂಡತಿ ''ನಿಮ್ಮ ಬುದ್ಧಿವಂತಿಕೆ ಹೀಗೇಂತ ಗೊತ್ತಿದ್ದಿದ್ದರೆ, ನಮ್ಮಪ್ಪ ದೇವರಾಣೆಗೂ ನನ್ನನ್ನು ಕೊಡ್ತಿರಲಿಲ್ಲ ನಿಮಗೆ'' ಎಂದು ಸಿಟ್ಟಿನಿಂದ ಹೇಳಿದ ಮಾತಿಗೆ ''ಅಲ್ವೇ ಹುಚ್ಚೀ, ನಿಮ್ಮಪ್ಪನ ದಡ್ಡತನ ಹಾಗಿರಲಿ, ನಮ್ಮಪ್ಪನ ಬುದ್ಧಿವಂತಿಕೆ ಏನು ಗೊತ್ತಾ? ತನ್ನದೂ ಅನ್ನೋ ಒಂದು ವಸ್ತು ಇರಲಿ, ಇಲ್ಲದೆ ಇದ್ದರೆ ನನ್ನ ಮಗ ಅರಬ್ಬೀ ಸಮುದ್ರದಾಟಿ ಆಫ್ರಿಕಾದ ಕಡೆಗೆ ಹೊರಟು ಬಿಟ್ಟಾನು ಅಂತ ಹೇಳಿ ನನಗೆ ನೆನಪು ಮಾಡಿಕೊಡೋದಕ್ಕಾಗಿ ನಿನ್ನಂಥಾ ಮೇಧಾವಿ ಮಹಿಳೆಯನ್ನು ಮದುವೆ ಮಾಡಿದನೋಡು'' ಎಂದು ರಾಜಣ್ಣ ಉತ್ತರಿಸಿವಾಗ ಘರ್ಷಣೆಗೆ, ಚರ್ಚೆಗೆ ಆಸ್ಪದವೇ ಇಲ್ಲದಂತೆ ಗಂಡ ಹೆಂಡಿರ ನಡುವಿನ ವಾತಾವರಣ ತಿಳಿಯಾಗಿ ಬಿಡುತ್ತದೆ. ಮರೆಗುಳಿ ಪ್ರೊಫೆಸರನಿಗೆ 'ಮರವು' ಮನುಷ್ಯನಿಗೆ ಬದುಕನ್ನು ಸಹ ನೀಯವಾಗಿಸಲು ಬೇಕೇ ಬೇಕೆನ್ನುವ ಸರಳ ತತ್ವದಂತೆ ಕಾಣಿಸುತ್ತದೆ. 'ಮರೆವು' ಇಲ್ಲದಿದ್ದರೆ ಈ ಬಾಳಿನ ಬೇಗುದಿಯಲ್ಲಿ ಮಾಡಿದ ಪಾಪ ಪುಣ್ಯ

ಅನುಭವಿಸಿದ ಅನ್ಯಾಯ, ದ್ರೋಹಗಳೆಲ್ಲ ಎದೆ ಒಳಗೇ ಉಳಿದು ಮತ್ತೆ ಮತ್ತೆ ನೆನಪಿಗೆ ಬಂದು ರಕ್ತದ ಒತ್ತಡ ಹೆಚ್ಚಿ ಸಾಯುತ್ತಾನೆ ಎನ್ನುವ ಮಾತು ಲಘು ಲಹರಿಯದಾಗಿ ಅನಿಸಿದರೂ ಗಂಭೀರ ಸತ್ಯವಿರುವುದು ಸ್ಪಷ್ಟವಾಗುತ್ತದೆ.

ಇಂತಹ ಮರಗುಳಿಯಲ್ಲೂ ಸೌಂದರ್ಯ ಪ್ರಜ್ಞೆ, ಸರಸ ಮನೋಭಾವ, ರಸಿಕತೆಗಳು ಆತನ ಮನಸ್ಸಿನ ಆರ್ದ್ರತೆಗೆ ನಿದರ್ಶನವಾಗಿದೆ. ಕಾಫಿ ಬೇಕೆಂದಾಗ ಹೆಂಡತಿಯನ್ನು ಕವಿಯಂತೆ ಮಾತನಾಡಿಸಬಲ್ಲ. "ಹಾಲಿನ ಸವಿ, ಸಕ್ಕರೆ ಸಿಹಿ, ಪೌಡರ್ ಪರಿಮಳ, ಕೆನ್ನೆಯ ಮಾಧುರ್ಯ" ಎಂದು ಛೇಡಿಸಿದಾಗ, ಸಿಟ್ಟಾದ ಮಡದಿಗೆ ಮಾತನ್ನು ತಿರುಚಿ ಮನರಂಜಿಸುವ ಜಾಣ್ಮೆನವಿದೆ. 'ಕೆನ್ನೆಯ ಮಾಧುರ್ಯ, ಪೌಡರ್ ಪರಿಮಳ' ಎಂಬುದನ್ನು 'ಕೆನೆಯ ಮಾಧುರ್ಯ, ಕಾಫಿ ಪೌಡರ್ ಪರಿಮಳ' ಎಂದು ಉಚಾಯಿಸುತ್ತಾನೆ.

ಇಷ್ಟಕ್ಕೇ ನಿಲ್ಲದ ರಾಜಣ್ಣ, ಪ್ರಾಣಿಶಾಸ್ತ್ರ ಪ್ರೊಫೆಸರ್ ಆಡುವ ಮಾತುಗಳ ಜಾಣ್ಮೆಗೆ ಸರಿಸಾಟಿಯಿಲ್ಲ - ಎಮ್ಮೆ ಹೆರೋ ದುಂಟಾ? "ಮಳೆ ಬರ್ತಾ ಇದ್ರೆ ಕೊಡೆ ಹಿಡ್ಕೊಂಡು ನೀರು ಹಾಕೋ ಜ್ಞಾನ ಇಲ್ಲಾ?" - ಎಂದು ಕೇಳುವ ಪ್ರಶ್ನೆಗಳು ಬೃಹಸ್ಪತಿಯ ಮೊಮ್ಮಗನ ಅಪರಾವತಾರವೆಂಬ ಭಾವನೆಗೆ ದಾರಿಮಾಡುತ್ತವೆ.

ಇಡೀ ನಾಟಕದಲ್ಲಿ ಇದೇ ರೀತಿಯ ಮಾತುಗಳು ಸನ್ನಿವೇಶಗಳು! ಆದರೆ ಮರಗುಳಿತನದ ಪರಿಣಾಮಗಳು ಎಷ್ಟು ಭಯಂಕರವಾಗಬಲ್ಲುದೆಂಬುದು ಮಗುವಿನ ಹುಟ್ಟು ಹಬ್ಬದ ಸಂಭ್ರಮದಲ್ಲಿದ್ದ ತಾಯಿಯ ಹೃದಯಕ್ಕೆ ಆಘಾತವಾಗುವಂತೆ ಅನಾರೋಗ್ಯದಿಂದ ಇದ್ದ ಮಗುವಿಗೆ ಔಷಧಿ ಕುಡಿಸಲು ಹೇಳಿದಾಗ ಯಾವುದೋ ಧ್ಯಾನದಲ್ಲಿದ್ದ ರಾಜಣ್ಣ ಬರೆಯಲು ಇಟ್ಟುಕೊಂಡಿದ್ದ ಇಂಕನ್ನೇ ಕುಡಿಸಿ ಬಿಡುತ್ತಾನೆ. ಆದರೆ ಅದೃಷ್ಟವಶಾತ್ ಅದೇ ಸಮಯಕ್ಕೆ ಮನೆಗೆ ಬಂದ ತಮ್ಮ ವಿದ್ಯಾರ್ಥಿ ಡಾ. ಚಂದ್ರಶೇಖರನಿಂದ ಮಗು ಬದುಕಿ ಉಳಿದು ಕತೆ ಸುಖಾಂತವಾಗುತ್ತದೆ. ಆದರೆ ಈ ನಾಟಕದಲ್ಲಿ ನಾಟಕಕಾರರು ಕ್ಲೈಮಾಕ್ಸ್ ರೀತಿಯಲ್ಲಿ ಒಂದು ತಿರುವನ್ನು ಕಲ್ಪಿಸುತ್ತಾರೆ. ಅಳಿಯನೇ ಮರವಿನ ಮೊಟ್ಟೆಯಾದರೆ, ಇಂತಹ ಅಳಿಯನ ಮಾವ ಇವನಿಗಿಂತಲೂ ದೊಡ್ಡ ಮರಗುಳಿಯಂತೆ ಕಾಣಿಸಿದ್ದಾರೆ. ಅಳಿಯನ ಮನೆಗೇ ಬಂದುದನ್ನು ಮರೆತು, ಅಳಿಯನನ್ನೇ ಗುರುತಿಸಲಾರದೆ, ತನ್ನ ಮನೆಗೆ ಯಾರೋ ಪರಕೀಯ ಬಂದಿದ್ದಾನೆಂದು ಬೈದು ಅಟ್ಟುವುದು ನಾಟಕಕ್ಕೆ ಕೊಟ್ಟ ತಿರುವಿನ ಉತ್ಕರ್ಷವೂ, ವ್ಯಂಗ್ಯವೂ ಆಗಿ, ನಾಟಕದ ಅರ್ಥ ಪೂರ್ಣತೆ, ಪರಿಣಾಮಕಾರಿತೆಗಳು ಹೆಚ್ಚಿವೆ.

ಸಾ. ಶೀ. ಮರುಳಯ್ಯನವರ ಈ ನಾಟಕ ರಂಗದ ಮೇಲೆ ಅತ್ಯಂತ ಪರಿಣಾಮಕಾರಿಯಾಗಬಲ್ಲುದು ಎಂಬುದರಲ್ಲಿ ಸಂಶಯವಿಲ್ಲ. ನಾಟಕತತ್ವ ಸಿದ್ಧಾಂತಗಳ ಗೊಡವೆ ಇಲ್ಲದೆ, ಮಾತಿನ ಜಾಣ್ಮೆ, ಚುರುಕು ಸಂಭಾಷಣೆಗಳಿಂದಲೂ ನಾಟಕ ಯಶಸ್ವಿಯಾಗಬಲ್ಲುದೆಂಬುದಕ್ಕೆ ಈ ನಾಟಕ ಸಾಕ್ಷಿಯಾಗಿದೆ. ಒಂದು ಕಾಲಕ್ಕೆ ಇಂತಹ ಪ್ರಹಸನಗಳು ಶಾಲಾ ಕಾಲೇಜುಗಳ ವಾರ್ಷಿಕೋತ್ಸವಗಳಲ್ಲಿ ಅತ್ಯಂತ ಜನಪ್ರಿಯವಾಗಿದ್ದವು.

ಸಾ. ಶೀ. ಅವರ ಮತ್ತೊಂದು ನಾಟಕ "ವಿಜಯವಾತಾಪಿ" 1966 ರಲ್ಲಿ ಪ್ರಕಟವಾಗಿ ರಂಗ ಪ್ರಯೋಗವನ್ನೂ ಕಂಡಿದೆ. ಮೂರು ಅಂಕಗಳು, 17 ದೃಶ್ಯಗಳನ್ನು ಒಳಗೊಂಡ ಈ ನಾಟಕ

ರಾಜಕೀಯ ಸಾಮಾಜಿಕ, ಧಾರ್ಮಿಕ ಅಂಶಗಳನ್ನುಳ್ಳ ಗಂಭೀರ ನಾಟಕವಾಗಿದೆ. ವಸ್ತು ಸಂಕೀರ್ಣತೆ, ಸಂವಿಧಾನಗಳ ದೃಷ್ಟಿಯಿಂದ ಇದೊಂದು ಉತ್ತಮನಾಟಕವಾಗಿದೆ. ಈ ನಾಟಕದ ಮುಖ್ಯ ಕಥಾನಕ ರಾಜಕೀಯ. ಪಲ್ಲವರಿಂದ ಪರಾಭವಗೊಂಡ ವಾತಾಪಿಯ ಚಾಲುಕ್ಯರು ಮತ್ತೆ ರಾಜಕೀಯ ಷಡ್ಯಂತ್ರದಿಂದ ಪಲ್ಲವರನ್ನು ಸೋಲಿಸಿ ವಾತಾಪಿಯನ್ನು ಮರಳಿ ಗೆದ್ದುಕೊಳ್ಳುವುದೇ ಮುಖ್ಯವಸ್ತುವಾದರೂ ಇದರ ಸಮಾಂತರದಲ್ಲಿ ಭಕ್ತಸಿರಿಯಾಳನ ಕತೆ ಉಪಕತೆಯಾಗಿ ಇದರೊಂದಿಗೆ ಹೆಣೆದುಕೊಂಡಿದೆ. ಮುಖ್ಯ ಕಥಾನಕದಷ್ಟೇ ಸಿರಿಯಾಳನ ಕತೆಯೂ ಇಲ್ಲಿ ಪ್ರಮುಖವಾಗಿದೆ. ಎರಡೂ ಭಿನ್ನ ಕಥಾನಕಗಳಾಗಿ ಸಮಾಂತರದಲ್ಲಿ ಇವೆಯಾದರೂ ರಾಜಕೀಯ ಸ್ಥಿತ್ಯಂತರಗಳೊಂದಿಗೆ ಯಾವುದೇ ಬಗೆಯ ಆಂತರಿಕ ಸಂಬಂಧವಿಲ್ಲ. ಇಪ್ಪತ್ತೈದು ಮೂವತ್ತು ಪಾತ್ರಗಳನ್ನು ಒಳಗೊಂಡ ಈ ನಾಟಕ ಮೂರು ಅಂಕಗಳಲ್ಲಿ ರಾಜಕೀಯ ಸ್ಥಿತ್ಯಂತರಗಳನ್ನು ನಾಟಕೀಯ ಪರಿಣಾಮದೊಂದಿಗೆ ದಾಖಲಿಸಿದ್ದಾರೆ. ನಾಟಕದ ನಿರೀಕ್ಷೆಗಳಿಗನುಗುಣವಾಗಿ ಕಥಾನಕದ ಬೆಳವಣಿಗೆಯಿದೆ. ರಾಜಕೀಯ ನಾಟಕವೇ ಆದರೂ ಅದರ ಹಿನ್ನೆಲೆಯಲ್ಲಿಯೇ ಸಾಮಾಜಿಕ, ಧಾರ್ಮಿಕ ಅಂಶಗಳನ್ನು ಚರ್ಚಿಸಲಾಗಿದೆ. ಅಧಿಕಾರಶಾಹಿ, ರಾಜಸತ್ತೆಗಳು ವ್ಯಕ್ತಿಯ ಮೇಲೆ ನಡೆಸುವ ದೌರ್ಜನ್ಯ ದಬ್ಬಾಳಿಕೆಗಳು ಒಂದು ಹಂತದಲ್ಲಿ ಆ ವ್ಯಕ್ತಿಯ ತೇಜೋವಧೆಯೊಂದಿಗೆ ಅಸ್ತಿತ್ವವನ್ನೇ ಅಳಿಸಿಹಾಕುವ ಪ್ರಯತ್ನ ಮಾಡುತ್ತವೆ. ರಾಜನಿಷ್ಠೆ, ದೇಶಪ್ರೇಮಗಳು ವ್ಯಕ್ತಿತ್ವವಿಲ್ಲದ ರಾಜವಂಶೀಯರ ದೃಷ್ಟಿಯಲ್ಲಿ ಮೌಲ್ಯರಹಿತವಾಗಿ ಗೋಚರಿಸುತ್ತವೆ.

ಪಲ್ಲವರ ನರಸಿಂಹವರ್ಮ ಸಿರಿಯಾಳ ದಂಡಾಧೀಶರನ್ನು ಮೌಲ್ಯಗಳ ಪ್ರತೀಕವಾಗಿ, ರಾಜನಿಷ್ಠೆ ಮತ್ತು ಅನುಭಾವಗಳ ಸಾಕಾರವಾಗಿ ಕಂಡು ಗೌರವಿಸಿದರೆ ಆತನ ಮಗ ಐಷಾರಾಮಗಳಲ್ಲಿ ಮೈ ಮರೆತು ಉದ್ಧಟತನ, ಕ್ರೌರ್ಯ, ದಬ್ಬಾಳಿಕೆಗಳೇ ರಾಜ್ಯಾಧಿಕಾರ ನಡೆಸಲು ಸಮರ್ಥ ಸಾಧನಗಳೆಂದು ಭಾವಿಸುತ್ತಾನೆ.

ಚಾಲುಕ್ಯರ ಸೋಲು ಪಲ್ಲವರ ವಿಜಯಘೋಷಗಳೊಂದಿಗೆ ಪ್ರಾರಂಭವಾಗುವ ನಾಟಕ ರಾಜಕೀಯ ಸನ್ನಿವೇಶದ ಸ್ಪಷ್ಟ ಕಲ್ಪನೆ ಮೂಡಿಸುತ್ತದೆ. ಸಿರಿಯಾಳ ದಂಡಾಧೀಶನ ಮಾನವೀಯ ಗುಣಗಳು, ಶೌರ್ಯ ಪರಾಕ್ರಮಗಳು, ಮಹೇಂದ್ರವರ್ಮನ ಕ್ರೌರ್ಯ, ಅಟ್ಟಹಾಸ, ಉದ್ಧಟತನಗಳು ಹಾಗೆಯೇ ಪರಾಜಿತ ಚಾಲುಕ್ಯ ಸಾಮ್ರಾಜ್ಯದ ಪ್ರಜೆಗಳಲ್ಲಿನ ದೇಶಭಕ್ತಿ, ರಾಜಭಕ್ತಿ, ಆತ್ಮಾಭಿಮಾನ, ಶೌರ್ಯ, ಪರಾಕ್ರಮಗಳು ವೀರನಾಯಕನ ಮಗ ಶಿವನಾಯಕನ ಮೂಲಕ ಬಿಚ್ಚಿಕೊಳ್ಳುತ್ತವೆ. ಶತ್ರುಗಳಾದವರನ್ನು ಮುಕ್ತ ಮನಸ್ಸಿನಿಂದ ಅವರ ಶೌರ್ಯ ಸಾಹಸ, ದೇಶಭಕ್ತಿಗಳಿಗಾಗಿ ಮೆಚ್ಚಿಕೊಳ್ಳುವ ದಂಡಾಧೀಶ ಸಿರಿಯಾಳ ಮಹೇಂದ್ರವರ್ಮನಂತಹವನ ಅರಸೊತ್ತಿಗೆಯಲ್ಲಿ ಇರುವುದು ಸಾಧ್ಯವೇ ಆಗುವುದಿಲ್ಲ ಎನ್ನುವ ಅನುಮಾನ, ನರಸಿಂಹವರ್ಮರು ರಾಜಕೀಯ ಸಂನ್ಯಾಸ ತೆಗೆದುಕೊಂಡು ಮಹೇಂದ್ರವರ್ಮನಿಗೆ ಕಿರೀಟಧಾರಣ ಮಾಡಿಸುವ ಸಂದರ್ಭದಲ್ಲಿ ಸ್ಪಷ್ಟವಾಗುತ್ತದೆ. ಅದರಲ್ಲಿಯೂ ಶತ್ರು ಪಕ್ಷಕ್ಕೆ ಸೇರಿದ ಶಿವನಾಯಕನ ರಕ್ಷಣೆಗೆ ನಿಂತು ಮಹೇಂದ್ರವರ್ಮನ ಆಕ್ರಮಣ, ದೌರ್ಜನ್ಯಗಳನ್ನು ಪ್ರತಿಭಟಿಸಿದ ಕ್ಷಣದಿಂದ ಮಹೇಂದ್ರವರ್ಮ ಸಿರಿಯಾಳರ ಸಂಬಂಧದಲ್ಲಿ ದೊಡ್ಡ ಬಿರುಕು ಏರ್ಪಡುತ್ತದೆ. "ಶತ್ರುವಿಗೆ ಸಹಾಯಕನಾಗುವುದೇ?" - ಎಂಬ

ಮಹೇಂದ್ರವರ್ಮನ ಆಕ್ಷೇಪಕ್ಕೆ "ಶತ್ರುವಿಗೆ ಸಹಾಯವಲ್ಲ ಇದು, ವೀರ ಪುತ್ರನ ವೀರಾಲಾಪವನ್ನು ನೋಡಿ, ಕೇಳಿ ನಲಿಯುವ ಸೌಭಾಗ್ಯ!" ಎನ್ನುವ ಸಿರಿಯಾಳನ ಮಾತುಗಳು ಆತನ ಗುಣಗ್ರಾಹಿತ್ವ ಗುಣಕ್ಕೆ ಹಿಡಿದ ಕನ್ನಡಿಯಾಗಿದೆ. ಶೌರ್ಯ, ಸಾಹಸ, ಪರಾಕ್ರಮ, ರಾಜನಿಷ್ಠೆ ದೇಶಭಕ್ತಿಗಳ ಸಾಕಾರ ಮೂರ್ತಿಯಾಗಿದ್ದ ಸಿರಿಯಾಳನೂ ರಾಜಕೀಯ ಸಂನ್ಯಾಸವನ್ನೂ ಮತ್ತು ತನ್ನುಳಿದ ದಿನಗಳನ್ನು ಶಿವನ, ಶಿವಶರಣರ ಸೇವಾಕಾರ್ಯಕ್ಕಾಗಿ ವಿನಿಯೋಗಿಸಲು ತೀರ್ಮಾನಿಸಿರುವುದನ್ನು ಘೋಷಿಸಿದಾಗ ಇಡೀ ರಾಜಸಭೆಯೇ ದಿಗ್ಭ್ರಾಂತವಾಗುತ್ತದೆ. ಸಿರಿಯಾಳನಂತಹ ಮಹಾವ್ಯಕ್ತಿಯ ಮೇಲ್ವಿಚಾರಣೆಯಲ್ಲಿ, ಮಾರ್ಗದರ್ಶನದಲ್ಲಿ ಮಗನ ರಾಜ್ಯಾಡಳಿತ ಸುಗಮವಾಗಿ ನಡೆಯುತ್ತದೆಂದು ಭಾವಿಸಿದ ನರಸಿಂಹವರ್ಮನಿಗೆ ಸಿರಿಯಾಳನ ಘೋಷಣೆ ಆಘಾತಕಾರಿಯಾಗುತ್ತದೆ. ಆದರೆ ದೇವರ ಕರೆಯ ಮುಂದೆ ರಾಜಾಧಿಕಾರ, ರಾಜಭೋಗಗಳು ಸಿರಿಯಾಳನಂತಹವರ ದೃಷ್ಟಿಯಲ್ಲಿ ತುಚ್ಛವೆನಿಸಿ ತನ್ನ ನಿರ್ಧಾರಕ್ಕೇ ನಿಂತುಕೊಳ್ಳುತ್ತಾನೆ.

ಮೊದಲ ಅಂಕದ 5ನೇ ದೃಶ್ಯದಿಂದ ಸಿರಿಯಾಳ ದಂಡಾಧೀಶರ ಧಾರ್ಮಿಕ ಮುಖ ಪರಿಚಯವಾಗುತ್ತದೆ. ಶರಣನ ಭಕ್ತಿ ನಿಷ್ಠೆಗಳು, ಕ್ರಮೇಣ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಸಿರಿಯಾಳನ ಮನೆ ಭಕ್ತಿ ಸಾಧನೆಯ ಕೇಂದ್ರದಂತೆ, ಜಂಗಮ ದಾಸೋಹದ ಮಹಾಮನೆಯಂತೆ ಕಾಣುತ್ತದೆ. ಸಿರಿಯಾಳನ ಭಕ್ತಿ, ಶರಣ ಜೀವನ ಮತ್ತು ಚಾಲುಕ್ಯರ ರಾಜಕೀಯ ಪಿತೂರಿಗಳು ದೃಶ್ಯಾಂತರಗಳಲ್ಲಿ ಕಾಣಿಸಿಕೊಳ್ಳುತ್ತವೆ. ಒಬ್ಬರಿಗೊಬ್ಬರಿಗೆ ಗೊತ್ತಿಲ್ಲದಂತೆಯೇ ಚಾಲುಕ್ಯರ ಕಡೆಯ ರಾಜನಿಷ್ಠ ಸೇವಕರು, ರಾಜ ಭಕ್ತಿಯುಳ್ಳವರೂ ಆದ ಶಿವನಾಯಕ, ಜಂಗಮ, ದಾಸಯ್ಯ, ಕಲ್ಯಾಣಿ (ಚಾಲುಕ್ಯರ ರಾಜ ನರ್ತಕಿ) ಎಲ್ಲರೂ ಗುಟ್ಟಾಗಿ, ಒಟ್ಟಾಗಿ ಸೇರಿ ಚಾಲುಕ್ಯ ಸಾಮ್ರಾಜ್ಯವನ್ನು ಮರಳಿ ಪಡೆಯುವ ಹುನ್ನಾರ ನಡೆಸುತ್ತಾರೆ. ಜಂಗಮ, ದಾಸಯ್ಯ ಪಾತ್ರಗಳ ಸೃಷ್ಟಿ ನೇರವಾಗಿ ರಾಜಕೀಯ ಸ್ಥಿತ್ಯಂತರಗಳಿಗೆ ಅನಿವಾರ್ಯವೆನಿಸದಿದ್ದರೂ ಸಮಕಾಲೀನ ವಿಚಾರಗಳ ಮಂಡನೆಗೆ ಸಮರ್ಥ ತಂತ್ರವಾಗಿದೆ. ಜಾತಿ, ಸಮಾಜ, ದೇಶ, ದೇಶಭಕ್ತಿ ಇತ್ಯಾದಿ ವಿಚಾರಗಳು ಗಂಭೀರ ಸನ್ನಿವೇಶದ ಮೂಲಕ ಹೊರಹೊಮ್ಮದೆ ಜಂಗಮ, ದಾಸಯ್ಯರ ಪರಸ್ಪರ ನಿಂದೆ, ಕೀಟಲೆ, ಲೇವಡಿ, ಆರೋಪ, ಪ್ರತ್ಯಾರೋಪಗಳ ಸಂದರ್ಭದಲ್ಲಿ ಆಕಸ್ಮಿಕಗಳಂತೆ ಹೊರ ಚೆಲ್ಲಿದರೂ ವಾಸ್ತವ ಸತ್ಯಗಳಾಗಿ ಕಾಣಿಸಿಕೊಳ್ಳುತ್ತವೆ. ತಮ್ಮ ತಮ್ಮ ಧರ್ಮ, ವೃತ್ತಿಗಳೇ ಹೆಚ್ಚೆಂದು ಕಚ್ಚಾಡುತ್ತಿದ್ದ ಜಂಗಮ ದಾಸಯ್ಯರು ಏಕಾಂಬರನ ಸಿಟ್ಟಿಗೆ ಗುರಿಯಾಗುತ್ತಾರೆ. ಚಾಲುಕ್ಯ ಸಾಮ್ರಾಜ್ಯ ಶತ್ರುಪಾಲಾಗಿದ್ದರೂ ಅದರ ಚಿಂತೆಯೇ ಇಲ್ಲದಂತೆ ಪರಸ್ಪರ ಗುದ್ದಾಡುವುದನ್ನು ಖಂಡಿಸಿ "ನಿಮ್ಮಂಥವರನ್ನೇ ನಂಬಿಕೊಂಡು ರಾಷ್ಟ್ರ ಕಟ್ಟಿದರಲ್ಲಯ್ಯಾ ಆ ಚಾಲುಕ್ಯರು... ಆ ಪುಣ್ಯಾತ್ಮ ಪುಲಿಕೇಶಿ ದೊರೆ ಇನ್ನು ಹ್ಯಾಗೆ ಜೀವನ ಮಾಡಿದನೋ? ಹ್ಯಾಗೆ ರಾಜ್ಯನಡೆಸಿದನೋ? ಆ ಮಕುಟೇಶ್ವರನಿಗೆ ಗೊತ್ತು!" - ಎಂದು ನಿಟ್ಟುಸಿರು ಬಿಡುವುದೇ ಅಲ್ಲದೆ, ಜಾತಿ, ಧರ್ಮ ಸಂಬಂಧಿ, ಕಲಹಗಳಿಂದಲೇ ರಾಷ್ಟ್ರಗಳು ಹಾಳಾಗುವ ಕಟು ಸತ್ಯವನ್ನೂ ಅವರನ್ನು ಉದ್ದೇಶಿಸಿ ಹೇಳಿದ "ಅಯ್ಯಾ ಇಡೀ ಕರ್ನಾಟಕ ಹಾಳಾದದ್ದು ನಿಮ್ಮಿಬ್ಬರಿಂದ... ಒಬ್ಬ ಜಂಗಮಯ್ಯ ಒಬ್ಬ ದಾಸಯ್ಯ. ಇವರಿಬ್ಬರನ್ನೂ ಸುಟ್ಟು ಹಾಕಿದರೇ ಕನ್ನಡ ದೇಶ ಉಳಿಯೋದು... ಶಿವ ಹೆಚ್ಚು ಅಂತ ಒಬ್ಬ,

ವಿಷ್ಣು ಹೆಚ್ಚು ಅಂತ ಒಬ್ಬ. ಹೀಗಾಗಿ ಕನ್ನಡಿ ಹಂಗಿರೋ ಕರ್ನಾಟಕಾನ ಹಾಳು ಮಾಡಿದಿರಿ... ಕನ್ನಡನಾಡಿನ ಕರ್ಮಾ...'' ಎಂಬ ಮಾತುಗಳಲ್ಲಿ ಸೂಕ್ಷ್ಮ ವ್ಯಂಗ್ಯವಾಗಿ ಕಾಣಿಸಿದ್ದಾರೆ. ಒಂದು ರಾಷ್ಟ್ರದ ಅಳಿವು ಉಳಿವು ಸಾಧ್ಯವಾಗುವುದು ಈ ಜಾತಿವಾದದ ಮೇಲೆ. ಏಕಾಂಬರ ಪಲ್ಲವರ ಮಹೇಂದ್ರವರ್ಮನ ಆಪ್ತ ಸೇವಕನಾದರೂ ರಾಷ್ಟ್ರ, ರಾಷ್ಟ್ರೀಯತೆಗಳ ಬಗೆಗೆ ಎಚ್ಚರವುಳ್ಳವನು. ಅನುಭವದ ಮೂಲಕ ಅವನು ಗ್ರಹಿಸಿದ ಸತ್ಯವೆಂದರೆ, ಜಾತಿವಾದ ಮತ್ತು ಸ್ತ್ರೀಮೋಹಗಳು ಅಳಿದಲ್ಲದೆ ಯಾವುದೇ ದೇಶದ ಉದ್ಧಾರ ಆಗಲಾರದು- ಎಂದು.

ಏಕಾಂಬರನ ನಿರೀಕ್ಷೆಯ ಈ ಮೌಲ್ಯಗಳು ಶಿವನಾಯಕ, ರಾಜನರ್ತಕಿಯಾದ ಕಲ್ಯಾಣಿಯಲ್ಲಿದೆ. ಅದಕ್ಕೆಂದೇ ಶಿವನಾಯಕ ಬ್ರಹ್ಮಗಿರಿಯ ಗುಹೆಯಲ್ಲಿ ಅಡಗಿದ್ದು ಸಿರಿಯಾಳನ ಮನೆಯ ದಾಸೋಹದಿಂದ ಜೀವಧಾರಣೆ ಮಾಡುತ್ತ, ಕಲ್ಯಾಣಿ ಪಲ್ಲವರ ರಾಜನರ್ತಕಿಯಂತೆ ಕಾಣಿಸಿಕೊಂಡರೂ ನಿಷ್ಠೆಯನ್ನು ಚಾಲುಕ್ಯ ಸಾಮ್ರಾಜ್ಯಕ್ಕೆ ಮುಡಿಪಿರಿಸುತ್ತ, ಕಡೆಗೆ ಜಂಗಮ, ದಾಸಯ್ಯರೂ ಈ ಇಬ್ಬರ ಪ್ರಭಾವಕ್ಕೆ ಒಳಗಾಗಿ, ಅವರೊಟ್ಟಿಗೆ ಸೇರಿ, ರಾಜಕೀಯ ಪಿತೂರಿ ನಡೆಸಿ, ಮಹೇಂದ್ರವರ್ಮನ ಆಪ್ತ ಸ್ನೇಹಗಳಿಸಿ ಅವಕಾಶಕ್ಕಾಗಿ ಹಾದಿ ಕಾಯುತ್ತಾರೆ.

ಕಳೆದುಹೋದ ಚಾಲುಕ್ಯ ಸಾಮ್ರಾಜ್ಯದ ವೈಭವವನ್ನು ಮರಳಿ ಪಡೆಯುವುದಕ್ಕಾಗಿ ತಮ್ಮ ತನು ಮನ ಧನವನ್ನು ಸಂಪೂರ್ಣವಾಗಿ ಮುಡಿಪಿಡುತ್ತಾರೆ. ಮಹೇಂದ್ರವರ್ಮನ ವಿಲಾಸ ಪ್ರಿಯತೆ, ಪರಸ್ತ್ರೀ ಮೋಹಗಳೇ ಅವನನ್ನು ಬಲಿತೆಗೆದುಕೊಳ್ಳುತ್ತವೆ.

ಇದು ಒಂದು ನಿಟ್ಟಿನ ಕತೆಯಾದರೆ ಸಿರಿಯಾಳನ ಭಕ್ತಿ ಪರೀಕ್ಷೆ ನಾಟಕದ ಕೇಂದ್ರ ವಸ್ತುವಿಗೆ ಸಂಬಂಧ ಪಟ್ಟಿಲ್ಲ. ಸಿರಿಯಾಳನ ಭಕ್ತಿನಿಷ್ಠೆ. ವ್ರತ ನಿಷ್ಠೆಗಳನ್ನು ಶಿವನು ಸಿರಿಯಾಳನ ಮಗನಾದ ಚೀಲಾಳನ ಮಾಂಸದಡಿಗೆಯನ್ನು ಬೇಡಿದರೂ ಸಿರಿಯಾಳ ಶಿವನ ಪರೀಕ್ಷೆಯನ್ನು ಗೆಲ್ಲುತ್ತಾನೆ. ಶಿವ ಮತ್ತು ನಾರದರ ಪಿತೂರಿ, ಸಿರಿಯಾಳನ ಮತ್ತು ಆತನ ಮಡದಿ ಚಂದಲೆ ಶಿವನ ಬೇಡಿಕೆಗಳಿಂದಾಗಿ ಎದುರಿಸುವ ಸಂದಿಗ್ಧಗಳು, ಮಗನನ್ನೇ ಉಣಬಡಿಸಬೇಕಾಗಿ ಬಂದ ಸಂದರ್ಭದಲ್ಲಿ ತಲ್ಲಣಿಸುವ, ಚಡಪಡಿಸುವ ಮಾತೃಹೃದಯ... ಇಷ್ಟೆಲ್ಲಾ ಆದರೂ ಕೊಟ್ಟಮಾತಿಗೆ, ಇಟ್ಟ ನಿಷ್ಠೆಗೆ ಧೀರರಾಗಿ ನಿಂತು ಅಗ್ನಿ ಪರೀಕ್ಷೆಯನ್ನು ಹಾದು ಬರುವ ಸನ್ನಿವೇಶಗಳು ಸಮರ್ಪಕವೆನಿಸಿದರೂ ನಾಟಕದ ಮುಖ್ಯ ಆಶಯದೊಂದಿಗೆ ಸಾವಯವ ಸಂಬಂಧವನ್ನು ಹೊಂದಿಲ್ಲ. ವಾತಾಪಿಯನ್ನು ಮತ್ತೆ ಗಳಿಸಿಕೊಳ್ಳುವುದೇ ಇಡೀ ನಾಟಕದ ಪ್ರಮುಖ ಆಶಯವಾಗಿದೆ. ರಾಜಕೀಯ ಸ್ಥಿತ್ಯಂತರಗಳನ್ನು ಸಮರ್ಪಕ ಸಂವಿಧಾನದ ಮೂಲಕ ದಾಖಲಿಸುವಲ್ಲಿ ಈ ನಾಟಕ ಅತ್ಯಂತ ಯಶಸ್ವಿಯಾಗಿದೆ.



# ವಿದೇಶಕ್ಕೆ ಬಂದವರು... ಒಂದು ಅನಿಸಿಕೆ

ಅಚ್ಚ 'ಭಾರತೀಯನೂ ಕನ್ನಡಿಗನೂ' ಆಗಿರುವ ಶ್ರೀ ಎಸ್. ಕೆ. ಹರಿಹರೇಶ್ವರ ಅವರು 'ಅವಕಾಶಗಳ ಅಮರಾವತಿ'ಯಾದ ಅಮೆರಿಕೆಯಲ್ಲಿ ನೆಲೆಸಿದ್ದಾರೆ. ನೆಲ ಬಿಟ್ಟು ಹೋದರೂ, ನಾಲಗೆಯ ಪರಿಸರ ಬೇರೆಯಾದರೂ ಹುಟ್ಟಿದ ನೆಲ, ನೀರು, ಗಾಳಿಯನ್ನು ಮರೆಯುವುದೆಂದರೆ ಅದು ಮಾತೃದ್ರೋಹ ಆತ್ಮದ್ರೋಹವಾಗುತ್ತದೆ. ಆದರೆ ಹಾಗೆಂದು ತಾಯಿ ನೆಲದಲ್ಲೇ ಬೇರು ಬಿಟ್ಟುಕೊಂಡು ಇಲ್ಲಿಯೇ ಉಳಿದು ಸ್ಥಗಿತಗೊಳ್ಳುವುದನ್ನೂ ಒಪ್ಪಿಕೊಳ್ಳುವುದಿಲ್ಲ. ವೈಯ್ಯಕ್ತಿಕವಾಗಿ, ಬೌದ್ಧಿಕ, ಭೌತಿಕಾಭಿವೃದ್ಧಿ ಮತ್ತು ಪ್ರಗತಿ ವಿಕಾಸಗಳಿಗಾಗಿ ಮುಕ್ತ ಅವಕಾಶಗಳ ಶೋಧದಲ್ಲಿ ಹೊರಟಾಗ ವಿಶ್ವದ ಅನೇಕ ಎಡೆಗಳು ಕೈ ಬೀಸಿ ಕರೆಯುತ್ತವೆ. ಅವಕಾಶಗಳ ಮಹಾಪೂರದ ವರ್ಣ ಜಾಲವನ್ನು ಎಸೆಯುತ್ತವೆ. ಮನುಷ್ಯ ಮಾತ್ರನಾದವನು ಇಂತಹ ಆಮಿಷ ಅವಕಾಶಗಳು ಎದುರಾದಾಗ ಅವುಗಳನ್ನು ಬಾಚಿ ಹಿಡಿಯುತ್ತಾನೆ. ಆದರೆ 'ಎಲ್ಲೇ ಇರು ಹೇಗೇ ಇರು ಎಂದೆಂದಿಗೂ ನೀ ಕನ್ನಡವಾಗಿರು' ಎಂದು ಬಯಸುವ ಕವಿಯಂತೆ ಹರಿಹರೇಶ್ವರ ಅವರು ದೇಶಬಿಟ್ಟರೂ ದೇಶಾಭಿಮಾನ ಬಿಡದಾದರು. ಭಾಷೆ ಬಿಟ್ಟರೂ ಭಾಷೆಯ ಮೋಹದಿಂದ ಮುಕ್ತರಾಗಲು ಸಾಧ್ಯವಾಗದೆ ಉಳಿದರು. ಈ ನೆಲದ, ಈ ಸಂಸ್ಕೃತಿಯ ಸಸಿಗಳನ್ನು ಸಮುದ್ರದಾಚೆಗೂ ಒಯ್ದು ಹೆಮ್ಮರವಾಗಿ ಬೆಳೆಸಲು ಪ್ರಯತ್ನಿಸಿದರು. ಎದೆ ತುಂಬ ಕನ್ನಡ ಸಾಹಿತ್ಯ, ಸಂಸ್ಕೃತಿಯ ಪ್ರೀತಿಯನ್ನು ತುಂಬಿಸಿ ಕೊಂಡವರಿಗೆ ಹೊರದೇಶದಲ್ಲಿದ್ದರೂ ತಾನು ಬಿಟ್ಟು ಬಂದುದರ 'ನಾಸ್ಟಾಲ್ಜಿಯಾ' ಕಾಡುತ್ತಲೇ ಇರುತ್ತದೆ. ಅಲ್ಲಿನ ಅದ್ಭುತ ಅವಕಾಶಗಳನ್ನು ಆರ್ಥಿಕ ಅನುಕೂಲಗಳನ್ನು ಸಾರಾಸಗಟಾಗಿ ತಿರಸ್ಕರಿಸಿ ಮರಳಿ ಬರಲಾಗದೆ, ಬಿಟ್ಟು, ಬಂದದ್ದನ್ನು ಮರೆಯಲಾಗದೆ ಒಂದು ಬಗೆಯ ಮಾನಸಿಕ ಹಿಂಸೆಗೆ ಒಳಗಾಗುವಂತಾಗುತ್ತದೆ. ಒಮ್ಮೊಮ್ಮೆ ಅಪರಾಧಿಭಾವದೊಂದಿಗೆ ತುಡಿಯುವ ಎಲ್ಲ ಸಾಧ್ಯತೆಗಳಿರುತ್ತವೆ. ಎಷ್ಟೇ ತನ್ನದಲ್ಲದ ಅನ್ಯ ಪರಿಸರಕ್ಕೆ ಹೊಂದಿಕೊಂಡು ಬಾಳುತ್ತಿದ್ದರೂ ಪರಕೀಯತೆ, ಅನಾಥ ಪ್ರಜ್ಞೆಗಳು ಜಾಗೃತವಾಗಿ ಮನಸ್ಸು ತಲ್ಲಣಗೊಳ್ಳುವಂತೆ ಮಾಡುತ್ತವೆ. ಅಂತಹ ಯಾತನೆಯ ಸಂದಿಗ್ಧದ ಸಮಯದಲ್ಲಿ ಒಳಗಿನದನ್ನೆಲ್ಲ ತೋಡಿಕೊಳ್ಳುವುದೊಂದೇ ದಾರಿ, ಪ್ರತಿಕ್ಷಣದ ಅನುಭವಗಳು, ಎದುರಾಗುವ ಸನ್ನಿವೇಶ, ಸಂದರ್ಭಗಳು ಸೃಜನಶೀಲ ಮನಸ್ಸನ್ನು ಅಭಿವ್ಯಕ್ತಿಗಾಗಿ ಒತ್ತಾಯಿಸುತ್ತದೆ. ಆಗ ಕವಿತೆಗಳಾಗಿಯೋ,

ಕತೆಗಳಾಗಿಯೋ ಚಿತ್ರಗಳಾಗಿಯೋ ಮೈತಳೆದು ನಿಲ್ಲುತ್ತವೆ. ಹರಿಹರೇಶ್ವರ ಅವರು ಇಂತಹ ಹಿನ್ನೆಲೆಯೊಳಗೆ ಅವತರಿಸಿದ ಕವಿಯಾಗಿದ್ದಾರೆ. ಅನಿವಾಸಿ, ಭಾರತೀಯನೊಬ್ಬನ ಆತ್ಮ ನಿವೇದನೆಯಂತೆ 'ವಿದೇಶಕ್ಕೆ ಬಂದವರು' ಕವನ ಸಂಕಲನ ಹುಟ್ಟು ಪಡೆದಿದೆ. ಸಹಜವಾಗಿ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ಮೂಡಿಸಿಕೊಂಡ, ಬೆಳೆಸಿಕೊಂಡ ಒಲವು ಕವಿತೆಗಳಾಗಿ ಅರಳಿವೆ. ಅನ್ಯದೇಶ, ಭಾಷೆ, ಸಂಸ್ಕೃತಿಯ ಪರಿಸರದಲ್ಲಿ ಅಚ್ಚ ಕನ್ನಡಿಗನ, ಕನ್ನಡಾಭಿಮಾನಿಯ ಮಾನಸಿಕ ತುಡಿತಗಳೇ ಇಲ್ಲಿನ ಕವಿತೆಗಳಾಗಿವೆ. ಭಾಷಾ ಪರಿಸರದಿಂದ ದೂರವಿದ್ದರೂ ಭಾಷೆಯ ಮೇಲಿನ ಹಿಡಿತ, ನಿರರ್ಗಳ ಪದ ಪ್ರಯೋಗ ಯಾವುದೇ ತೊಡಕು, ತಡವರಿಕೆಯಿಲ್ಲದೆ ಕಂಡು ಬಂದಿದೆ. ಕಾವ್ಯ ಭಾಷೆ, ಲಯಗಳ ಮೇಲೆ ಹಿಡಿತವಿದೆ. ನವೋದಯದ ಭಾವುಕತೆ, ಭಾವನಾತ್ಮಕತೆಗಳಿಗೆ ಬದಲಾಗಿ ವಸ್ತುನಿಷ್ಠವಾದ ಮತ್ತು ತಾರ್ಕಿಕವಾದ ಮನಸ್ಸಿನ ದರ್ಶನ ಇಲ್ಲಿ ಸಿಗುತ್ತದೆ. ಸಾಮಾಜಿಕ ವ್ಯಂಗ್ಯ, ವಿಡಂಬನೆಗಳ ಜೊತೆಗೆ ಆತ್ಮವಿಡಂಬನೆಯೂ ಸೇರಿ ಹೇಳಬೇಕಾದ್ದನ್ನು ಹೇಳುವಾಗ ಪ್ರಾಮಾಣಿಕತೆ ಎದ್ದು ಕಾಣುತ್ತದೆ. ಹರಿಹರೇಶ್ವರರು ಸಾಹಿತ್ಯ ವಿದ್ಯಾರ್ಥಿ ಅಲ್ಲದಿದ್ದರೂ ಕನ್ನಡ ಸಾಹಿತ್ಯ ಚಳುವಳಿಗಳ, ಕಾವ್ಯ ಸ್ವರೂಪದ ಪರಿಚಯವಿದೆ. ಇಲ್ಲಿನ ಕವಿತೆಗಳು ನವ್ಯದ ಧಾಟಿಯಲ್ಲಿ ಸಾಗುತ್ತ ನವ್ಯ ಕಾವ್ಯ ನಿರೀಕ್ಷಿಸುವ ಪ್ರತಿಮೆ, ಪ್ರತೀಕಗಳನ್ನೂ ಒಳಗೊಂಡಿದ್ದು ಕೆಲವು ಕವಿತೆಗಳು ಅತ್ಯಂತ ಸೂಕ್ಷ್ಮವೂ ಸಾಂಕೇತಿಕವೂ ಆಗಿ ಸಾರ್ಥಕವೆನಿಸಿವೆ. ಈ ಮೊದಲೇ ಹೇಳಿದಂತೆ ಭಾಷೆ, ಲಯಗಳ ಮೇಲೆ ಒಳ್ಳೆಯ ಹಿಡಿತವಿದೆ. ಅವರು ಬಳಸುವ ನಿಯತಲಯದ ಯಶಸ್ಸನ್ನು ಕೆಳಗಿನ ಈ ಸಾಲುಗಳಲ್ಲಿ ಗಮನಿಸಬಹುದು.

> **"ನೊಂದು ನಾ ಅತ್ತಾಗ, ಮೊರೆ ಕೇಳಿ ಬಳಿಸಾರಿ**
> **ಬಂದು ಕೈ ಹಿಡಿದಿತ್ತಿ ಸಂತೈಸಿದೆ ಪೂತಕರ ಪಲ್ಲವದಿ ಕಣ್ಣೊರೆಸೆ, ಮೈದಡವಿ**
> **ದುಃಖ ಹಿಮಗಿರಿಯೆಲ್ಲ ನೀರಾಯಿತು!"** (ಕೃತಜ್ಞತೆ)

ಈ ಸಂಕಲನದಲ್ಲಿ ವಿಷಯ ವೈವಿಧ್ಯವಿದೆ. ಅನಿವಾಸಿ ಭಾರತೀಯನ ಅನುಭವದ ಹಲವು ಮುಖಗಳು ಇಲ್ಲಿ ಕಾಣಸಿಗುತ್ತವೆ.

ವಿದೇಶಕ್ಕೆ ಹೋಗುವ ಬಯಕೆಯ ಹಿನ್ನೆಲೆಯಲ್ಲಿ ಹಲವು ಮನಃ ಸ್ಥಿತಿಗಳು ಕೆಲಸಮಾಡುತ್ತವೆ. ಹಣಕ್ಕಾಗಿ (ಸಂಪಾದನೆಗೆ) ಕೆಲವರಾದರೆ, ಪ್ರವಾಸದ ಆನಂದ, ಅದ್ಭುತ ಲೋಕದರ್ಶನಕ್ಕೆಂದು ಕೆಲವರು ಮತ್ತೆ ಕೆಲವರು ವಸ್ತುಗಳನ್ನು ಕೊಂಡುಕೊಳ್ಳುವ, ಮಾರುವ ಉದ್ದೇಶಗಳಿಂದ ವಿದೇಶಕ್ಕೆ ಬರುತ್ತಾರೆ. ಇಂತಹ ಮನೋಕಾಂಕ್ಷೆಗಳನ್ನು ಒಂದು ಪುಟ್ಟ ಖಂಡಕಾವ್ಯದಂತೆ ಮೂರು ಘಟ್ಟಗಳಲ್ಲಿ ವಿವರಿಸುತ್ತಾರೆ. ಅವರ ದೃಷ್ಟಿಯಲ್ಲಿ, ಕೆಲವರಿಗೆ ಸಂತೆ, ಕೆಲವರಿಗೆ ಜಾತ್ರೆ, ಕೆಲವರಿಗೆ ಯಾತ್ರೆ. ಸಂತೆ ಭಾವದೊಂದಿಗೆ ಬರುವವರನ್ನು ಹೀಗೆ ವಿವರಿಸುತ್ತಾರೆ, ತಮ್ಮ ''ವಿದೇಶಕ್ಕೆ ಬಂದವರು'' ಕವಿತೆಯಲ್ಲಿ:-

> **"ನಾಲ್ಕು ಘಳಿಗೆ ಇದ್ದು ಹೋದೇವು, ಈ ನೆಲಕ್ಕೆ**
> **ಅಂಟಿ ನಿಲ್ಲಲು ಮನಸ್ಸಿಲ್ಲ;**
> **ಹಾಗೆಂದು ಹೋಗಲೊಲ್ಲ, ಈ ವ್ಯಾಪಾರ**
> **ಕೊಳ್ಳುವವರೆಲ್ಲ ತಳ್ಳಿ ಹೋಗುವವರೆಗೆಂದು ಬಲ್ಲ**

ಕುಶಲಮತಿ ಇಲ್ಲಿ ಸಿಗುವುದ ಕೊಂಡು
ತುಂಬಿ ಬಂದು,
ತಿರುಗಿ ಅವರಿಗೇ ಮಾರುವನಲ್ಲ!"

- ಎಂದು ಅಚ್ಚರಿ ವ್ಯಕ್ತಪಡಿಸಿದರೆ, 'ಜಾತ್ರೆ'ಯಾಗಿ ಭಾವಿಸುವವರು ನಡೆದುಕೊಳ್ಳುವ ರೀತಿಗೆ ವ್ಯಂಗ್ಯದ ಬಾಣವೆಸೆಯುತ್ತಾರೆ.

"ಅವಕಾಶಗಳ ಅಮರಾವತಿಯಲ್ಲಿ ಆರ್ಥಿಕೋತ್ಸವ;
ಮುಂಚೆಯೇ ಕೊಂಚ ಸಿದ್ಧತೆ ಮಾಡಿಕೊಂಡವರು ಯಾರೂ ಬರಬಹುದು ಜಾತ್ರೆಗೆ
....................
ಮನೆದೇವರಿಗಿದ್ದೇ ಇದೆ ನಮಸ್ಕಾರ
ಹೊತ್ತ ಹರಕೆಯ ದೇವತೆಗೆ ಮಿಗಿಲಾದ ಪುರಸ್ಕಾರ
....................
ನೂಕು ನುಗ್ಗಲಿಗಂಜಿ
ಗುಡಿಯ ಹೊರಗೇ ಕಾಯೊಡೆದು
ಸಿಕ್ಕ ಅಷ್ಟೇ ದರ್ಶನ ಸಾಕೆಂದು ಮರಳಿದವರುಂಟು."

ಈ ಕವಿತೆಯ 'ಯಾತ್ರೆ' ಭಾಗದಲ್ಲಿ ಪುರಾಣ ಪ್ರತಿಮೆಗಳನ್ನು ಧಾರಾಳವಾಗಿ ಬಳಸಿಕೊಳ್ಳುತ್ತಾರೆ. ಎಂದಾದರೂ ಒಮ್ಮೆ ನೋಡಿ ಬರಲೇಬೇಕೆಂಬ ಅಭೀಪ್ಸೆಯೊಂದಿಗೆ, ಸುತ್ತಿಬರುವ ಹಂಬಲ ಹೊತ್ತವರಿಗೆ ಈ ವಿದೇಶವೆಂಬ ತೋಟದಲ್ಲಿ,

"ನೋಟದ ಹಸಿ ಬಿಸಿ ಹಸದೂಟ" -

ಇವರು ಮತ್ತು ಇವರ ಸ್ಥಿತಿ ಹೇಗೆಂದರೆ,

ಒಲ್ಲದ ಗಂಡನಲ್ಲಿಲ್ಲದ ಕಾವಿನ ನಲ್ಲನಿಗೆ ತಪಿಸಿ
ಬೃಂದಾವನವಲ್ಲೆಲ್ಲ ಅಲೆಯುವ ರಾಧೆಯರು
"ನೀವು ಕಾಣಿರೇ, ನೀವು ಕೇಳಿರೇ" ಚಡಪಡಿಸಿ
ನೆಮ್ಮದಿಯ ಸೌಗಂಧಿಕವು ಬೆನ್ನಟ್ಟಿ ಹೊರಟವರು

- ಹೀಗೆ ಹರಿಹರೇಶ್ವರ ಅವರು ವಿದೇಶಕ್ಕೆ ಬಂದವರನ್ನು ವರ್ಗೀಕರಿಸುತ್ತಾರೆ.

ಅವಕಾಶಗಳನ್ನು ಅರಸಿ ಬಂದವರಾದರೂ ಒಮ್ಮೊಮ್ಮೆ ಅನಾಥ ಪ್ರಜ್ಞೆ ಮನಸ್ಸನ್ನು ಕಾಡುತ್ತದೆ. ನಿಸಾರ್ ಅಹಮದ್ ಅವರು ಹೇಳುವಂತೆ 'ನಿಮ್ಮೊಳಗಿದ್ದೂ ನಿಮ್ಮಂತಾಗದೆ' ಎನ್ನುವ ಭಾವದಿಂದ ಪರಕೀಯತೆಯ ಅನುಭವದಿಂದ ತಲ್ಲಣಗೊಳ್ಳುತ್ತದೆ, ಮನಸ್ಸು ತನ್ನ ಪರಕೀಯತೆಯ ಭಾವವನ್ನು ರೂಪಕದ ಮೂಲಕವಾಗಿ ಹೀಗೆ ವಿವರಿಸುತ್ತಾರೆ:

"ತಾವು ಕಾಣದ ತಾಣ, ಸರಿಯಾಗಿ ಹುಲುಸಾಗಿ
ಕೇಳಿ ತಿಳಿಯದ ದೇಶದಲ್ಲಿಂದಲೋ ಬಂದವ,
ಮಾಗಿ ಇನ್ನೂ ಕರಗದ, ಮನೆ ತುಂಬಿದ ಕಿರಿಯ ಸೊಸೆ, ಹಸಿನಿಂಬೆ,
ಹಾಸ್ಟೆಲಿಗೆ ಈಗಷ್ಟೇ ಸೇರಿದ ಫ್ರೆಷಮನ್ ತುಂಬೆ
ಎಂಬ ಅಮೆರಿಕನ್ ಅತ್ತೆಯರ ಮೊಸಳೆಗಣ್ಣಲ್ಲಿ"          (-ನಾನು ಪರಕೀಯ!)

ಅತ್ತೆಮನೆಗೆ ಬರುವ ಸೊಸೆಗೆ ಎಲ್ಲವೂ ಅಪರಿಚಿತ ಹೊಸ ಜಾಗ, ಹೊಸ ಪರಿಸರ ಅನಿಸಿಗಿರುವುದು ತಾನು 'ಪರಕೀಯ' ಎಂಬ ಭಾವನೆಯಂತೆಯೇ ಕವಿಗೂ ಅನ್ಯ ಮತ್ತು ಅನ್ಯರ

ನಾಡಿನಲ್ಲಿ ಪರಕೀಯತೆಯ ಅನುಭವ. ಇಂತಹ ಅನುಭವದ ಹಿನ್ನೆಲೆಯಲ್ಲಿ ಧುತ್ತನೆ ತನ್ನ ತಾಯ್ನಾಡಿನ ನೆನಪು ಮೂಡಿ ಮನಸ್ಸಿಗೆ ಇನ್ನಷ್ಟು ಕಸಿವಿಸಿಯಾಗುತ್ತದೆ. ಇಲ್ಲಿನ ಸ್ನೇಹಿತರು, ಬಂಧುಗಳು, ಸಂಸ್ಕೃತಿ, ನೋವು ನಲಿವುಗಳು ಎಲ್ಲವೂ,

'ಇರುವಲ್ಲಿ ಎಲ್ಲ ಇದೆ ಎನ್ನುವ ಭ್ರಮೆ
ನಡುವೆ ಕಾಡುವ ಕೊರಗು'

ಅಷ್ಟೇ ಸಾಲದೆಂಬಂತೆ,

"ಎಲ್ಲಾ ಇದ್ದರೂ ಏನೂ ಇಲ್ಲದ ಭಾಸ, ಕೊರತೆ
ಶೂನ್ಯ ನಿರ್ವಾತ ವಿಲಾಸದಿ ಭ್ರಮೆಯ ಒರತೆ
ಕಳೆದ ಆರೋಗ್ಯದ ರೋಗಿ ನೆನೆವ ನಿಟ್ಟುಸಿರ ಚಿತೆ
ಮರೀಚಿಕೆಯ ಸುಡುಮಾಡದಲಿ ಇಲ್ಲಿ ಮರಳುಗಾಡಿನಲಿ
ನೀರು ನೆರಳಿನ ತಂಪೆಲರ ನಿಲುದಾಣ- ಸ್ನೇಹ, ಕಾಣ!" (-ಸ್ನೇಹಕ್ಕೆ ನಮಸ)

ಸ್ನೇಹವೊಂದರಲ್ಲಿ ಮಾತ್ರವೇ ಇಂತಹ ಪರಿಸ್ಥಿತಿಯಲ್ಲಿ ಪರಿಹಾರ.

ವಿದೇಶಕ್ಕೆ ಹೋಗ ಬಯಸುವವರ ಮುಂದೆ ಕಾಮನ ಬಿಲ್ಲಿನ ಜಾಲವನ್ನೇ ಹರಡುತ್ತದೆ. ತಾಯ್ನಾಡಿನಲ್ಲಿ ಸಿಗದ ಸುಖ ಸವಲತ್ತುಗಳನ್ನು, ಭೋಗ ಭಾಗ್ಯಗಳನ್ನು ಗಳಿಸಿಕೊಡುವ ಭರವಸೆಯಾಗಿ ಬಯಸುವವರನ್ನು ಬರಸೆಳೆಯುತ್ತದೆ. ಬರುವುದಾದರೂ ಇಲ್ಲಿಗೆ ಯಾಕೆ?

"ಆರಾಮವಾಗಿರಲಿಕ್ಕೆ; ರೆಕ್ಕೆ ಸುಪರ!
ಸಾಧ್ಯವಾದಷ್ಟು ಗಳಿಸಿ ಉಳಿಸಲಿಕ್ಕೆ. ಸಿಕ್ಕಿಬಿದ್ದು ಉಳಿದರೆ ಈ ಇಲ್ಲ,
ಹಿಂತಿರುಗಿದರೆ ಊರಲ್ಲಿ ಮಳೆಗಾಲಕ್ಕೆ" (- ನಾನು ಪರಕೀಯ.)

ಇಂತಹ ಅವಕಾಶಗಳ ಕನಸು ಹೊತ್ತು ಬರುವವರು; ಹಪಹಪಿಸುವವರು, ಅಲ್ಲಿಗೆ ಹೋದರೆ ಸ್ವಾಭಿಮಾನ, ನೋವುಗಳನ್ನು ಬದಿಗಿಟ್ಟು ಹೊಂದಿಕೊಳ್ಳಬೇಕಾಗುತ್ತದೆ. ಹೊಂದಿಕೊಳ್ಳುವುದರಲ್ಲಿ ನಮ್ಮವರು ನಿಸ್ಸೀಮರೆಂಬುದನ್ನು ಗಮನಿಸಿದ ಕವಿಯ ಧ್ವನಿಯಲ್ಲಿ ಮೆಚ್ಚುಗೆ, ವ್ಯಂಗ್ಯಗಳೆರಡೂ ಕಾಣುತ್ತವೆ. ಒಂದು ಪರಿಸರದಲ್ಲಿ ಹೊಂದಿಕೊಂಡು ಮೇಲೆ ಬರಬೇಕಾದರೆ, ಸ್ಪರ್ಧೆಯ ಓಟದಲ್ಲಿ ಮುಂದಾಗ ಬೇಕಾದರೆ ವೈಯಕ್ತಿಕ ಪ್ರತಿಭೆ, ಸಾಮರ್ಥ್ಯಗಳು ಅಗತ್ಯವಿದೆ ಎನ್ನುವುದು ಕವಿಗೆ ಹೊಳೆದ ಸತ್ಯ.

"ಅವಕಾಶಗಳ ಸ್ವರ್ಗ ಹೊಕ್ಕರೂ ತಲೆಯಿದ್ದರೇ ಉಳಿವು"

- ಎಂದು ಯಾರ ವಕಾಲತ್ತು, ಶಿಫಾರಸ್ಸುಗಳು ಕೆಲಸಮಾಡುವುದಿಲ್ಲ. ಪರಾಲಂಬಿತನವನ್ನು ಬಿಟ್ಟು, ಸ್ವಾವಲಂಬಿಯಾಗಬೇಕಾದ ಅಗತ್ಯವಿದೆ ಎನ್ನುವುದನ್ನು ಅವರ 'ಸೆಲ್ಫ್ ಸ್ಟಾರ್ಟರ್' ಪ್ರತಿಮೆಯಲ್ಲಿ ಬಿಂಬಿಸುತ್ತಾರೆ. ಆತ್ಮನಿಂದೆಯ ಧಾಟಿಯಲ್ಲಿನ ಈ ಕವಿತೆಯ ಸಾಲುಗಳು ಹೀಗಿವೆ-

"ನಾನು ಸೆಲ್ಫ್ ಸ್ಟಾರ್ಟರ್ ಆಗುವುದು ಯಾವಾಗ?
ಕುದುರೆಯ ಕಸಿನ್‌ಗಾದಷ್ಟು ವಯಸ್ಸು;
ಹುಟ್ಟಿಬೆಳೆದ ನಾಡಿನ ಹಂಗಿನಲ್ಲಿ
ಸಾವಿರಾರು ಡಾಲರು ಸಮಾ ಖರ್ಚಿನಲ್ಲಿ
ದಿನನಿಶೆ ಅವಿರತಶ್ರಮದ ಹಣ್ಣಾ ತಿರುಳು ಅಂಗೈನಲ್ಲಿ

ಅನುಭವದ ಸೊಂಪಾದ ಬೆಳೆ, ಕಳೆ ಇದ್ದೂ
ಹೊತ್ತ ಪರಿಮಳವ ಅರಿಯದ ಹುಂಬ
ಸ್ವಾರಂಭಿಯಾವುದು ಯಾವಾಗ?" (- ಎಂದು?)

ಸುಪ್ತ ಶಕ್ತಿ, ಪ್ರತಿಭೆಗಳಿದ್ದರೂ ಕಂಡುಕೊಳ್ಳುವ, ತನ್ನ ಒಳಗನ್ನು ಇಣುಕಿ ನೋಡುವ ಹುಮ್ಮಸ್ಸಿಲ್ಲ.

ದೇಶಾಭಿಮಾನದಂತೆ ಭಾಷಾಭಿಮಾನವೂ ಇರುವುದಾದರೂ ಕೆಲವೊಮ್ಮೆ ಹುಸಿಯೆನಿಸುತ್ತದೆ. ದೊಡ್ಡ ದೊಡ್ಡ ಮಾತುಗಳಲ್ಲಿ ಕನ್ನಡದ ಬಗ್ಗೆ ಮಾತಾಡುತ್ತೇವೆ. ಅನುಷ್ಠಾನದಲ್ಲಿ ಮಾತ್ರ ಹಿಂದೆ ಉಳಿಯುತ್ತೇವೆ. ಹಬ್ಬ, ಆಚರಣೆಗಳಲ್ಲಿ ಮಾತ್ರವೇ ಭಾಷೆಯ ಒಲವನ್ನು ಎತ್ತಿ ತೋರುತ್ತೇವೆ; ಮತ್ತೆ ಮರೆಯುತ್ತೇವೆ. ತಾವೇ ಮಾತನಾಡ ಬಯಸದ, ಮಾತನಾಡದ ಮಾತೃಭಾಷೆಯನ್ನು ನಿರೀಕ್ಷಿಸುವ ತಂದೆ ತಾಯಿಗಳ ಆತ್ಮ ಸಾಕ್ಷಿಗೇ ಸವಾಲಿನಂತೆ,

"ನಿಮಗೇ ಬಳಸಲು ಇಷ್ಟವಿಲ್ಲದ ಭಾಷೆ
ನಮಗೇಕೆ ಹೇರುತ್ತೀರಿ" (- ಮಂಗಳಾರತಿ)

- ಎನ್ನುವ ಪ್ರಶ್ನೆಗೆ ತಂದೆ ತಾಯಿಗಳಿಂದ ಬರುವ ಉತ್ತರ ಮೌನವಲ್ಲದೆ, ಬೇರೆಯೇನೂ ಅಲ್ಲ!

ಹರಿಹರೇಶ್ವರ ಅವರ ಕವಿತೆಗಳಲ್ಲಿ ಇಂತಹ ಗಂಭೀರ ಚಿಂತನೆಗಳ ಜೊತೆಗೆ ತಿಳಿಹಾಸ್ಯ, ನಾಟಕೀಯತೆಗಳು ಹೊಚ್ಚ ಹೊಸ ತಂಗಾಳಿಯ ಸ್ಪರ್ಷದ ಅನುಭವವನ್ನು ನೀಡುತ್ತವೆ. ನಾಟಕೀಯತೆ, ಮೊನಚು ವ್ಯಂಗ್ಯಗಳಿಗೆ "ಖಾಲಿ ಇದೆ: ಉಪಾಧ್ಯಕ್ಷ ಸ್ಥಾನ" ಒಂದು ಉತ್ತಮ ಉದಾಹರಣೆ. ಸಂಘ, ಸಂಘಟನೆ, ಸಾಹಿತ್ಯ ಅದೂ ಇದೂ ಅಂತ ನಿಸ್ಪೃಹತೆಯಿಂದ ಕೆಲಸಮಾಡುವ ಒಬ್ಬನನ್ನು ಹೊಗಳುತ್ತ, ಅವನ ಪ್ರಾಮಾಣಿಕತೆ, ಸಾಮರ್ಥ್ಯಗಳನ್ನು, ಆತನ ಹೆಂಡತಿ ಮಕ್ಕಳನ್ನು ಹೊಗಳುತ್ತಲೇ, ಅವನನ್ನು ಬಿಟ್ಟರೆ ಉಪಾಧ್ಯಾಕ್ಷರಾಗಲು ಬೇರೆ ಅರ್ಹ ವ್ಯಕ್ತಿ ಇಲ್ಲವೇ ಇಲ್ಲವೆಂದು ವಿಶ್ವಮಹಾ ಸಂಘಕ್ಕೇ ಉಪಾಧ್ಯಕ್ಷರಾಗಲು ಎಲ್ಲ ಕ್ಷಮತೆಗಳನ್ನುಳವರೆಂದು ಹೊಗಳಿ ಕಡೆಗೆ, ನಿರೂಪಕ ಮಹಾಶಯ

"ನನಗಂತೂ ಕೆಲಸವೇ ಮುಖ್ಯ;
ಅದೇ ಲಕ್ಷ್ಯ, ಅದೇ ಲಕ್ಷ
ಕಿಂಚಿತ್ತೂ ಇಲ್ಲ, ನನಗೆ ಪದವಿ ವ್ಯಾಮೋಹ; ಆದರೂ
ಬೇರೆಯಾರಿದ್ದಾರೆ, ಎಂದು ನಾನೇ ಅಧ್ಯಕ್ಷ!" (-ಖಾಲಿ ಇದೆ: ಉಪಾಧ್ಯಕ್ಷಸ್ಥಾನ)

- ಎಂದು ಘೋಷಿಸಿಕೊಳ್ಳುವಲ್ಲಿ ಮೊನಚಾದ ವ್ಯಂಗ್ಯವಿದೆ.

ಹರಿಹರೇಶ್ವರರಿಗೆ ವೈಯಕ್ತಿಕ ಸಾಮಾಜಿಕ, ಅನುಭವ, ಸನ್ನಿವೇಶಗಳೆಲ್ಲಕ್ಕೂ ಅಭಿವ್ಯಕ್ತಿ ಕೊಡುವ ಸಾಮರ್ಥ್ಯವಿದೆ. ಒಂದೊಂದು ಕವಿತೆಯೂ ಅವರ ಹಲವು ರೀತಿಯ ಭಾವ ಲಹರಿಗಳನ್ನು ಬಿಂಬಿಸುತ್ತವೆ. 'ವಧುವಿಗೆ ವರನ ಬೆಣ್ಣೆಮಾತು', 'ಏಕೆ', 'ವಿಜಯಕ್ಕೆ ಅಪ್ಪಂದಿರು ನೂರು; 'ಸೋಲು' ಮುಂತಾದ ಕವಿತೆಗಳನ್ನು ಅವರ ತಿಳಿಹಾಸ್ಯ ಪ್ರಜ್ಞೆಗೆ ನಿದರ್ಶನವಾಗಿ ನೋಡಬಹುದು.

ಸ್ವತಂತ್ರ ಕವಿತೆಗಳ ಜೊತೆಗೆ ಗುಜರಾತಿ, ಸಂಸ್ಕೃತ, ಇಂಗ್ಲಿಷ್ ಮೂಲದ ಅನುವಾದಗಳೂ

ಈ ಸಂಕಲನದಲ್ಲಿ ಸೇರಿವೆ. ಮೂಲದ ಕವಿತೆಗಳ ಭಾವಾನುವಾದ ಅತ್ಯಂತ ಸಮರ್ಥವಾಗಿ ಮೂಡಿ ಬಂದಿದೆ. ಮರಳ ಮೇಲಣ ಹೆಜ್ಜೆ-ಗುರುತು, ಸಪ್ತಪದಿ, ಶ್ರೀ ಸೂಕ್ತಗಳು, ದಡಕ್ಕೆ ದಾಟಿಸು ನನ್ನ ತಂದೆ, ಮುಂತಾದ ಕವಿತೆಗಳು ಅವರ ಅನುವಾದ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿಗಳಾಗಿವೆ. ಮೂಲದ ಭಾವವನ್ನು ಕನ್ನಡ ಭಾಷೆಯ ಜಾಯಮಾನಕ್ಕೆ ಹೊಂದುವಂತೆ ಛಂದೋರೂಪಗಳನ್ನು ಅಳವಡಿಸಿಕೊಂಡಿದ್ದಾರೆ. 'ದಡಕ್ಕೆ ದಾಟಿಸು ನನ್ನ ತಂದೆ', 'ನಿರ್ವಾಣ ಷಟ್ಕ', 'ಹಲವು ಹೆಸರು ದೇವನೊಬ್ಬನೆ' - ಮುಂತಾದ ಅನುವಾದ ಕವಿತೆಗಳನ್ನು ಗಮನಿಸಬಹುದು.

ಒಟ್ಟಾರೆಯಾಗಿ ಹರಿಹರೇಶ್ವರ ಅವರ ಕಾವ್ಯ ಸಂವೇದನೆಗಳ ಸಾರ್ಥಕ ಅಭಿವ್ಯಕ್ತಿ ಈ ಸಂಕಲನದಲ್ಲಿ ಕಾಣಸಿಗುತ್ತದೆ. ಇನ್ನಷ್ಟು ಪ್ರಯತ್ನಿಸಿದಲ್ಲಿ ಈ ಸಂಕಲನದಲ್ಲಿ ಅಷ್ಟಾಗಿ ಕಾಣದ ಸೂಕ್ಷ್ಮತೆ, ಧ್ವನ್ಯತೆ, ಸಾಂಕೇತಿಕತೆ, ಪ್ರತಿಮಾತ್ಮಕತೆಗಳನ್ನು ಬಳಸಿಕೊಂಡು ಉತ್ತಮವಾದ ಮತ್ತೊಂದು ಕವನಸಂಕಲನವನ್ನು ತರಬಲ್ಲರೆಂಬ ಭರವಸೆಯ ದನಿ ಇದರಲ್ಲಿದೆ.



# ಬಸವಣ್ಣನವರ ಜಾತಿ, ಕುಲಚಿಂತನೆ

12ನೇ ಶತಮಾನದ ಬಸವಣ್ಣನವರು ಜಾತ್ಯಾತೀತ ಮಾನವತಾವಾದಿಯಾಗಿ, ಅವರ ಸಾಮಾಜಿಕ, ಧಾರ್ಮಿಕ, ತಾತ್ವಿಕ ಚಿಂತನೆಗಳಿಂದಾಗಿ, ವಿಶ್ವಮಾನವ ದೃಷ್ಟಿಯಿಂದಾಗಿ ಶತ ಶತಮಾನಗಳಿಂದಲೂ ಸಾಮಾಜಿಕ, ಆಧ್ಯಾತ್ಮಿಕ, ಅನುಭಾವಿಕ ನೆಲೆಗಳಲ್ಲಿನ ಅಧ್ಯಯನಕ್ಕೆ ಗ್ರಾಸವಾಗುತ್ತಾ ಬಂದಿದ್ದಾರೆ. ಇಲ್ಲಿಯವರೆಗೆ ಇಂತಹ ಪ್ರವಾದಿ, ದ್ರಷ್ಟಾರ ಬಸವಣ್ಣನ ಜಾತಿ, ಕುಲ ಮೂಲಗಳ ಬಗ್ಗೆ ಭಿನ್ನಾಭಿಪ್ರಾಯ, ತರ್ಕ, ಚರ್ಚೆಗಳಿಗೆ ಎಡೆಯಿಲ್ಲದಂತೆ ವಚನಗಳಲ್ಲಿನ ಆಂತರಿಕ ಪ್ರಮಾಣಗಳಿಂದ, ಪುರಾಣ ಕಾವ್ಯಗಳಲ್ಲಿ ಉಲ್ಲೇಖಿತವಾದ ಆಧಾರಗಳಿಂದ 'ಕಮ್ಮೆ ಕುಲದ ಬ್ರಾಹ್ಮಣ'ನೆಂಬ ನಂಬಿಕೆಯಲ್ಲಿಯೇ ಮುಂದುವರೆಯುತ್ತಿದ್ದವರಿಗೆ ದಿನಾಂಕ 2-3-03ರ ಕ. ವೆಂ. ರಾಜಗೋಪಾಲರ "ಬಸವಣ್ಣನವರ ಮೂಲ ಕುಲ ಯಾವುದು?" ಎಂಬ ಸಾಹಿತ್ಯ ಸಂವಾದ ಅಂಕಣದ ಲೇಖನ ಸಾಕಷ್ಟು ಪ್ರತಿಕ್ರಿಯೆಗೆ, ಚರ್ಚೆಗಳಿಗೆ ಒಂದು ವೇದಿಕೆಯನ್ನು ನಿರ್ಮಾಣ ಮಾಡಿದೆ. ಇದು ನಿಜವಾಗಿಯೂ ಪ್ರಶಂಸನೀಯ ಸಂಗತಿಯಾದರೂ ಇದಕ್ಕೆ ನನ್ನದೇ ಆದ ಕೆಲವು ಅನಿಸಿಕೆಗಳನ್ನು ವ್ಯಕ್ತಪಡಿಸುವ ಉದ್ದೇಶದಿಂದ ಬಡಿಗೇರ, ಪ್ರಕಾಶ ಹಲಗೇರಿ ಅವರ ವಿಚಾರಗಳನ್ನೂ ಸಣ್ಣ ಪ್ರತಿಕ್ರಿಯೆಗೆ ಬಳಸಿಕೊಳ್ಳುತ್ತಿದ್ದೇನೆ.

ಬಸವಣ್ಣನವರ ಕ್ರಾಂತಿಯ ಮೂಲ ಆಶಯ ಸಮಾಜದ ಕೆಳವರ್ಗದ ಅದರಲ್ಲೂ ಶ್ರಮಿಕವರ್ಗದ ಜನ ಸಮಾಜಕ್ಕೆ ನ್ಯಾಯ ದೊರಕಿಸಿಕೊಡುವುದು, ಮಾಡುವ ಯಾವುದೇ ಕಾಯಕವಾದರೂ ಆ ಕಾಯಕಕ್ಕೆ ಮರ್ಯಾದೆಯ ಸ್ಥಾನವನ್ನು ಕಲ್ಪಿಸಿಕೊಡುವುದು, ಸ್ವಾವಲಂಬನೆಯ ಮೂಲಕ ಆರ್ಥಿಕ ಅಸಮಾನತೆಯನ್ನು ಹೋಗಲಾಡಿಸುವುದು ಮುಂತಾದವುಗಳೇ ಆಗಿದ್ದರೂ ಇವುಗಳ ಜೊತೆಗೆ ಜಾತಿ ತಾರತಮ್ಯ, ಲಿಂಗತಾರತಮ್ಯಗಳನ್ನೂ ಹೋಗಲಾಡಿಸಿ, ಒಂದು ಸರ್ವಸುಖೀ ಸಮಾಜ, ಸಮಾನತೆಯ ಪಾತಳಿಯ ಮೇಲೊಂದು ಆದರ್ಶ ಸಮಾಜವನ್ನು ಕಟ್ಟುವ ಕನಸು ಕಂಡವರು; ಪ್ರಯತ್ನಿಸಿದವರು. ತಾವು ನುಡಿದುದೆಲ್ಲವನ್ನೂ ತಮ್ಮ ಮೇಲೆ ಪ್ರಯೋಗಿಸಿಕೊಂಡವರು.

ಇಂತಹ ಬಸವಣ್ಣನವರ ಕುಲದ ಬಗ್ಗೆ ಇದ್ದಕ್ಕಿದ್ದಂತೆ ಜಿಜ್ಞಾಸೆ ಮೂಡಿದ್ದು ಕುಲದ ಪ್ರಶ್ನೆಯ ಬೆನ್ನಲ್ಲೇ ಬಸವಣ್ಣನವರ ಕುಲದ ಹುಡುಕಾಟ, ಚರ್ಚೆಗಳು ಅನಿವಾರ್ಯವೇ? ಅಲ್ಲವೇ? ಎಂಬ ಪ್ರಶ್ನೆಗಳೂ ಏಳುತ್ತಿರುವುದು ಒಂದು ಬಗೆಯ ರೋಚಕತೆಗೆ ದಾರಿ ಮಾಡುತ್ತಿದೆ.

ಕ. ವೆಂ. ಅವರ ಪ್ರಕಾರ ಬಸವಣ್ಣನವರು ಹುಟ್ಟಿನಿಂದ ವಿಶ್ವಕರ್ಮರಾಗಿರಬಹುದು ಎನ್ನುವ ಅನುಮಾನಕ್ಕೆ ಅವಕಾಶವಿದೆಯೇ ಹೊರತಾಗಿ, ವಿಶ್ವಕರ್ಮಕುಲಕ್ಕೆ ಸೇರಿದವರೇ ಎಂಬ ಖಚಿತವಾದ ಅಭಿಪ್ರಾಯವಂತೂ ಇಲ್ಲ. ಬಸವಣ್ಣನವರ ವಚನಗಳಲ್ಲಿ ಪಾಂಚಾಳರ ಕುಲ ದೈವವಾದ ಕಾಳಮ್ಮನನ್ನು, ಯಜ್ಞಯಾಗಾದಿಗಳನ್ನು ಕುರಿತ ಟೀಕೆ ಇರುವುದನ್ನು ಮತ್ತು ವಿಶ್ವಕರ್ಮ ಜನಾಂಗವನ್ನು ಪಾಂಚಾಳರಿಂದ ಹಿಂದಿನ ದಿನಗಳಲ್ಲಿ ಕಸಿದಿರಬಹುದು ಎಂಬ ಊಹೆಯನ್ನು ಆಧರಿಸಿ ವಿಶ್ವಕರ್ಮ ಜಾತಿಗೆ ಸೇರಿರಬಹುದೆಂಬ ಅನುಮಾನವನ್ನು ವ್ಯಕ್ತಪಡಿಸುತ್ತಾರೆಯೇ ಹೊರತಾಗಿ ಖಚಿತ ನಿಲುವನ್ನು ತಲುಪುವುದಿಲ್ಲ ಮತ್ತು ತಮ್ಮ ಊಹೆಗೆ ಚನ್ನಪಟ್ಟಣದ ಕಾಳಮ್ಮ ದೇಗುಲದಲ್ಲಿನ ಶಾಸನವನ್ನು ಉದಾಹರಿಸಿದ್ದಾರೆ. ಈಶಾಸನ ಪಾಠದ ವಿವರಗಳನ್ನೂ ಕ. ವೆಂ. ರಾಜಗೋಪಾಲ್ ಅವರು ನೀಡಿದ್ದರೆ, ಅನೇಕ ಅನುಮಾನಗಳಿಗೆ ಪರಿಹಾರ ದೊರೆತಂತೆಯೂ ಮತ್ತು ತಮ್ಮ ವಾದಕ್ಕೆ ಸಮರ್ಥನೆ ದೊರೆತಂತೆಯೂ ಆಗುತ್ತಿತ್ತು. ಮೇ 4ರ ಸಂಚಿಕೆಯಲ್ಲಿ ವಾಸುದೇವ ಬಡಿಗೇರ ಅವರು, ಮಾನವತಾವಾದಿ ಬಸವಣ್ಣನವರ ಮೂಲ ಕುಲದ ಬಗ್ಗೆ ಶೋಧಿಸುವುದು ಎಷ್ಟು ಸಮಂಜಸ? ಎನ್ನುವ ಪ್ರಶ್ನೆಯ ರೂಪದ ಪ್ರತಿಕ್ರಿಯೆಯ ಬಗ್ಗೆ ಸ್ವಲ್ಪ ಅಸಮಾಧಾನ ವ್ಯಕ್ತಪಡಿಸಿದಂತೆ ತೋರುತ್ತದೆ. ಅಧ್ಯಯನದ ದೃಷ್ಟಿಯಿಂದ ಬಸವಣ್ಣನವರ ಮೂಲ ಸ್ಥಳ, ಕುಲದ ಬಗ್ಗೆ, ಅನುಸಂಧಾನ ಅಥವಾ ಶೋಧ ನಡೆಸುವುದರಲ್ಲಿ ತಪ್ಪೇನಿದೆ? ಎಂದು ಪ್ರಶ್ನಿಸಿದ್ದಾರೆ. ಅವರು ಪ್ರಶ್ನಿಸುವುದರಲ್ಲಿ ಅರ್ಥವಿದೆ; ಮಹಾನ್ ಮಾನವತಾವಾದಿ ಮತ್ತು ತನ್ನ ಕಾಲಕ್ಕಿಂತ ಬಹಳ ಬಹಳ ಮುಂದುವರೆದ ಮತ್ತು ಅತ್ಯಂತ ಕ್ರಾಂತಿಕಾರಕವೆನಿಸಬಹುದಾದ ವಿಚಾರಗಳನ್ನು ಮುಂದಿಟ್ಟ ವ್ಯಕ್ತಿಯ ಸಂಬಂಧವಾಗಿ ಐತಿಹಾಸಿಕ ವಿವರಗಳನ್ನು ಹುಡುಕುತ್ತ ಹೊರಡುವುದು ಯಾವ ದೃಷ್ಟಿಯಿಂದಲೂ ಸಮರ್ಥನೀಯವೇ. ಆದರೆ ಇವತ್ತಿನ ಆಧುನಿಕ ವಿಚಾರ ಪರಿಸರದಲ್ಲಿ ಮತ್ತು ಪ್ರತಿಯೊಂದು ದಿಕ್ಕಿನಿಂದಲೂ ರಾಜಕೀಯ, ಸಾಮಾಜಿಕ, ಆರ್ಥಿಕ ನೆಲೆಗಳಿಂದಲೂ ಜಾತ್ಯಾತೀತ, ಜಾತಿವಿನಾಶ, ಜಾತ್ಯಾಂತರ, ಸಮಾನತೆ ಇತ್ಯಾದಿ ಪರಿಕಲ್ಪನೆಗಳ ಬಗ್ಗೆ ದೊಡ್ಡದಾಗಿ ಮಾತಾಡುತ್ತಾ, ಈಗಿರುವ ನೂರಾರು ಜಾತಿ ಉಪಜಾತಿಗಳ ಗೊಂದಲದಲ್ಲಿ ತತ್ತರಿಸುತ್ತ, ಜಾತಿ, ಧರ್ಮಗಳ ನಡುವೆ ಸೌಹಾರ್ದತೆ, ಶಾಂತಿಗಳಿಗೆ ಬದಲಾಗಿ, ಜಾತಿ, ಧರ್ಮ ಸಂಘರ್ಷಗಳನ್ನು ಹುಟ್ಟುಹಾಕುತ್ತ, ರಾಜಕೀಯ ಪ್ರಯೋಜನಗಳನ್ನು ಪಡೆಯುವ ತರಾತುರಿಯಲ್ಲಿ ಮತ್ತೆ ಬಸವಣ್ಣನ ಕುಲಮೂಲವನ್ನು ಹುಡುಕಿ ತೆಗೆದು ಸಾಬೀತು ಪಡಿಸಿದಾಗ, ಬಸವಣ್ಣನ ಕುಲದೊಂದಿಗೆ ತಳುಕು ಹಾಕಿಕೊಂಡ ಜಾತಿವರ್ಗವೊಂದು, ಇನ್ನು ಮುಂದೆ ಬಸವಣ್ಣನ ಕುಲವನ್ನು ಮುಂದು ಮಾಡಿಕೊಂಡು ಪ್ರಯೋಜನಗಳಿಗೆ ಪರಿತಪಿಸುವುದೇ ಹೊರತಾಗಿ ಬಸವಣ್ಣನ ತತ್ವಗಳ ಬಗ್ಗೆ, ಆದರ್ಶ, ಆಶಯುಗಳ ಬಗ್ಗೆ ಎಚ್ಚೆತ್ತುಕೊಂಡು ಆಚರಣೆಗೆ ಅಳವಡಿಸಿಕೊಂಡು ಸುಧಾರಣೆಗೊಳ್ಳುವರೆಂಬುದು ಕೇವಲ ಹುಸಿ ನಂಬಿಕೆಯಾಗುತ್ತದೆ.

ನಮ್ಮಲ್ಲಿ ಸಾಮಾನ್ಯವಾಗಿ ನದಿಮೂಲ, ಋಷಿಮೂಲಗಳನ್ನು ಹುಡುಕಬಾರದೆಂಬ ನಂಬಿಕೆಯಿದೆ. ಆದರೆ ಹಾಗೆಂದ ಮಾತ್ರಕ್ಕೆ ಐತಿಹಾಸಿಕ ಸತ್ಯಗಳ ಶೋಧ ನಡೆಯಬಾರದೆಂಬುದು ನನ್ನ ಅಭಿಪ್ರಾಯವಲ್ಲ. ಈಗಾಗಲೇ ನಮಗೆ ಬಸವಣ್ಣನ ಕುರಿತಾದ ಕಾವ್ಯ ಪುರಾಣಗಳಲ್ಲಿ

ಕಮ್ಮೆಕುಲದ ಶೈವ ಬ್ರಾಹ್ಮಣ ದಂಪತಿಗಳಾದ ಮಾದರಸ ಮಾದಲಾಂಬಿಕೆಯರ ಮಗನಾಗಿ ಹುಟ್ಟಿದನೆಂಬುದೇ ಸ್ಥಾಪಿತವಾದ ಸತ್ಯವಾಗಿದೆ. ಅದನ್ನೇ ಹೆಚ್ಚಾಗಿ ಸಾರ್ವತ್ರಿಕವಾಗಿ ನಂಬಿಕೊಂಡು ನಡೆಯುತ್ತಿದ್ದೇವೆ.

ಬಸವಣ್ಣನ ವಿರೋಧ, ಪ್ರತಿಭಟನೆಗಳು ಹಿಂಸಾ ಮೂಲವಾದ ಯಜ್ಞಯಾಗಗಳನ್ನು ಪುರಸ್ಕರಿಸುವ ವೈದಿಕ ಧರ್ಮಕ್ಕೆ ಸಂಬಂಧಿಸಿದಂತೆ ಬ್ರಾಹ್ಮಣ್ಯದ ಸಂಕೇತವಾದ, ಕರ್ಮಕಾಂಡದ ಪ್ರತೀಕವಾದ ಜನಿವಾರವನ್ನು ಕಿತ್ತು ಬಿಸುಟು ತನ್ನ ಪ್ರತಿರೋಧವನ್ನು ತೋರಿಸಿದ. ಬಸವಣ್ಣನನ್ನು ವೀರಶೈವ ಧರ್ಮದೊಂದಿಗೆ ಸಮೀಕರಿಸಿ ಮಾತನಾಡುತ್ತೇವೆಯಾದರೂ ಧರ್ಮ ಪ್ರತಿಷ್ಠಾಪನೆ. ಧರ್ಮ ಪ್ರಚಾರಗಳಿಗಿಂತಲೂ ಆತನು ಕೇವಲ ಕರ್ನಾಟಕಕ್ಕೆ ಮಾತ್ರವಲ್ಲ, ಇಡೀ ಜಗತ್ತಿಗೇ ಅನ್ವಯವಾಗುವಂತೆ, ಅನುಕರಣೀಯವಾಗುವಂತೆ ನೀಡಿದ ಸಂದೇಶಗಳು, ಜಾತಿ ಕುಲ ಸಂಬಂಧವಾದ ಹೊಸ ವ್ಯಾಖ್ಯಾನಗಳು, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿಂತನೆಗಳು, ಜೀವನ ಮೌಲ್ಯಗಳು, ಅನನ್ಯವಾಗಿವೆ, ಧಾರ್ಮಿಕ, ಅನುಭಾವಿಕ ಚಿಂತನೆಗಳಿಗೂ ಒಂದು ಸಾಮಾಜಿಕ, ಆರ್ಥಿಕ ನೆಲೆಗಟ್ಟನ್ನು ಕಲ್ಪಿಸಿದ ಬಸವಣ್ಣನ ಕುಲದ ಬಗ್ಗೆ ನಾವು ಭಾವುಕರಾಗಿಯೋ, ಉದ್ವಿಗ್ನರಾಗಿಯೋ, ಸ್ಥಿತ ಪ್ರಜ್ಞರಾಗಿಯೋ ಯೋಚನೆಮಾಡುತ್ತ ಚರ್ಚೆಯನ್ನು ಆಹ್ವಾನಿಸುವುದಕ್ಕೆ ಮೊದಲು ಬಸವಣ್ಣ ಕುಲ, ಜಾತಿಗಳ ಬಗ್ಗೆ ಪ್ರತಿಕ್ರಿಯಿಸಿದ. ವ್ಯಾಖ್ಯಾನಿಸಿದ ರೀತಿಯನ್ನು ಸ್ಥೂಲವಾಗಿ ಗಮನಿಸುವುದು ಸೂಕ್ತವೆನಿಸುತ್ತದೆ.

"ಮನುಜ ಕುಲಂ ಒಂದೇ ವಲಂ ' ಎಂದಂತೆ ಬಸವಣ್ಣನಿಗೆ ಶರಣ ಕುಲಂ ಒಂದೇ ವಲಂ.' ಒಮ್ಮೆ ಶರಣ ದೀಕ್ಷೆಗೆ ಒಳಗಾದಲ್ಲಿ" ಜಾತಿ ಕುಲ'ಗಳಿಂದ ಮುಕ್ತ ನಾಗುತ್ತಾನೆ. ಜಾತಿಗಳ ನಡುವಿನ ಮಡಿವಂತಿಕೆಯನ್ನು ಮತ್ತು ಪಂಚಸೂತಕಗಳನ್ನು ಎಂದಿಗೂ ಬಸವಣ್ಣ ಮನ್ನಿಸಿದವನಲ್ಲ ಅದನ್ನೇ ಅವನು ತನ್ನೊಂದು ವಚನದಲ್ಲಿ ಹೀಗೆ ಹೇಳಿದ್ದಾನೆ:-

> **ಜನನ ಸೂತಕ, ಕುಲಸೂತಕ ರಜಸೂತಕ**
> **ಎಂಜಲ ಸೂತಕ, ಪ್ರೇತ ಸೂತಕ**
> **ಎಂಬಿವಾದಿಯಾದ ಸರ್ವ ಸೂತಕಂಗಳು**
> **ಅಂಗ ಲಿಂಗ ಸಂಬಂಧಿಗಳಾದ ಲಿಂಗ ಭಕ್ತರಿಗಿಲ್ಲ ನೋಡಾ-**

-ಎನ್ನುವ ಬಸವಣ್ಣ, ಶ್ವಪಚನಾದಡೇನು? ಲಿಂಗ ಭಕ್ತನೇ ಕುಲಜ' ಎಂದು ನಂಬಿ ನಡೆದುಕೊಂಡ.

> **ಹೊಲೆಯುಂಟೇ ಲಿಂಗ ವಿದ್ದೆಡೆಯಲ್ಲಿ?**
> **ಕುಲವುಂಟೆ ಜಂಗಮ ವಿದ್ದೆಡೆಯಲ್ಲಿ?**
> **ಎಂಜಲುಂಟೆ ಪ್ರಸಾದ ವಿದ್ದೆಡೆಯಲ್ಲಿ?**

ಎಂದು ಉದಾತ್ತ ನೆಲೆಯಲ್ಲಿ ನಿಂತು ಪ್ರಶ್ನಿಸಿಕೊಳ್ಳುವ ಮನಸ್ಸಿಗೆ ಅಪವಿತ್ರದ ಮಾತನಾಡುವುದೂ ಸೂತಕ ವೆನಿಸುವುದು.

ಹುಟ್ಟಿನಿಂದ ಕುಲವಲ್ಲ. ವೃತ್ತಿ ಪ್ರವೃತ್ತಿಗಳಿಂದ ಕುಲವನ್ನು ಗುರುತಿಸಬೇಕೆನ್ನುವ ಬಸವಣ್ಣನವರ ಅಂದಿನ ಆಲೋಚನೆ ಬಹಳ ಹಿಂದೆಯೇ ಇತ್ತು. 'ಚಾತುರ್ವರ್ಣ್ಯಂ ಮಯಾ ಸೃಷ್ಟ್ಯಂ. ಗುಣ

ಕರ್ಮ ವಿಭಾಗಶಃ' ಎನ್ನುವ ಮಾತಿನ ಹಿನ್ನೆಲೆಯಲ್ಲಿ ನಮ್ಮ ಹಿಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ವಿಂಗಡಣೆ. ಜಾತಿ ವ್ಯವಸ್ಥೆಯ ಬಗ್ಗೆ ನಾವು ನೋಡಿದಾಗ ಮೊದ ಮೊದಲಿಗೆ ಕಟ್ಟು ಪಾಡುಗಳಿಲ್ಲವಾಗಿದ್ದು ಕ್ರಮೇಣ ಜಾತಿಗೋಡೆಗಳು ಬೆಳೆದು ಜಾತಿ ಸಂಘರ್ಷ, ಜಾತ್ಯಂತರಗಳಿಗೆ ದಾರಿಯಾಯಿತು. ಎಲ್ಲ ಮನುಷ್ಯರ ಆತ್ಮ ಜೀವಗಳು ಒಂದೇ. ಹುಟ್ಟಿನ ಪರಿಯೂ ಒಂದೇ. 'ಸಮಯೋನಿ ಸಮುದ್ಭವರೇ ಆಗಿರುವಾಗ ಜಾತಿ ವರ್ಣ ಭೇದಗಳು ಎಷ್ಟು ಸಮಂಜಸವೆನ್ನುವುದು ಬಸವಣ್ಣನವರ ನಿಲುವು. ಜಾತಿಗಳು ಹುಟ್ಟಿ ಕೊಳ್ಳುವುದಾದರೂ, ಗುರುತಿಸಿಕೊಳ್ಳುವುದಾದರೂ ಹೇಗೆಂಬ ಪ್ರಶ್ನೆಗೆ ಉತ್ತರ ವಾಗಿ ಕೆಳಗಿನ ವಚನವನ್ನು ನೋಡಬಹುದು.

> **"ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ**
> **ಹಾಸನಿಕ್ಕಿ ಸಾಲಿಗನಾದ, ವೇದವನೋದಿಹಾರುವನಾದ**
> **ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ'**

ಎಂದು ವ್ಯಾಖ್ಯಾನಿಸಿದ್ದೇ ಅಲ್ಲದೆ, ರೂಢ ಮೂಲವಾದ ಜಾತಿ ವ್ಯವಸ್ಥೆಯಲ್ಲಿನ 'ಜಾತಿ' ವಿವರಣೆಯನ್ನು ಒಪ್ಪದೆ ಮನುಷ್ಯ ಮಾಡುವ ಕಾಯಕ ಕ್ರಿಯೆ ಸ್ವಭಾವಗಳ ಮೂಲಕ ಜಾತಿಯನ್ನು ಗುರುತಿಸುತ್ತಾನೆ. ಹುಟ್ಟಿನಿಂದ ಬ್ರಾಹ್ಮಣನಾದರೂ ಕೊಲುವ ಕ್ರಿಯೆಯಿಂದ ಮಾದಿಗ ನಾಗಬಲ್ಲ. ಆದ್ದರಿಂದ ಕುಲ ಜಾತಿಗಳು ಹುಟ್ಟಿನಿಂದ ಸ್ಥಾಪಿತವಾಗುವುದಿಲ್ಲ.

> **ಕೊಲುವನೇ ಮಾದಿಗ, ಹೊಲಸು ತಿಂಬವನೇ ಹೊಲೆಯನಾದಂತೆ,**
> **ಸಕಲ ಜೀವಾತ್ಮರಿಗೆ ಲೇಸ ಬಯಸುವುದರ ಮೂಲಕ 'ಕುಲಜ' ನೆನಿಸಿಕೊಳ್ಳುತ್ತಾನೆ.**

-ಎಂದು ನಂಬಿ ನಡೆದವರು ಬಸವಣ್ಣ. ಆದ್ದರಿಂದ ಕುಲ ಜಾತಿಗಳನ್ನು ತೊಡೆದು ಹಾಕಬೇಕೆಂದು ಹೆಣಗಾಡಿದ್ದೇ ಅಲ್ಲದೆ ನಿಕೃಷ್ಟಾತಿ ನಿಕೃಷ್ಟ ಜಾತಿ ಜನ ವರ್ಗಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡ ಬಸವಣ್ಣನವರ ಉದಾತ್ತ ತತ್ವಗಳನ್ನು ಅಳವಡಿಸಿಕೊಳ್ಳುವ, ಮತ್ತು ಅವರ ಕನಸುಗಳನ್ನು ಸಾಕ್ಷಾತ್ಕಾರಗೊಳಿಸುವ ಪ್ರಯತ್ನಗಳಲ್ಲಿ ತೊಡಗಿಸಿಕೊಳ್ಳಬೇಕಾದ ತುರ್ತಿನ ಅಗತ್ಯವಿರುವ ಸಂದರ್ಭದಲ್ಲಿ ಬಸವಣ್ಣನವರ ಕುಲ ಮೂಲದ ಚರ್ಚೆ ಅಷ್ಟೊಂದು ಪ್ರಸ್ತುತವೇ ಎನ್ನುವುದು ನನ್ನ ವೈಯುಕ್ತಿಕ ಪ್ರಶ್ನೆಯಾಗಿದೆ!

ಬಸವಣ್ಣನವರು ಕಂಡ ಸಮಾಜವು ಗೊಂದಲಮಯವಾಗಿದ್ದಿರಬಹುದು.... ಅಂಥ ಜಾತಿಗೊಂದಲಗಳಿಂದ ಕೂಡಿದ್ದಿರಬಹುದಾದ ಸಮಾಜವೆಂದರೆ ವಿಶ್ವಕರ್ಮರದು ಎನ್ನುವುದಕ್ಕೆ ಅವಕಾಶವಿದೆ'- ಎಂದು ಕ. ವೆಂ. ಅವರು ತಮ್ಮ ಊಹೆಯನ್ನು ಮುಂದಿರಿಸಿದ್ದಾರೆ. ಬಸವಣ್ಣನವರು ಸುಧಾರಣೆ ತರಬಯಸಿದ್ದು ಕೇವಲ ವಿಶ್ವಕರ್ಮ ಜಾತಿಯಲ್ಲಿ ಮಾತ್ರವಲ್ಲ, ಇಡೀ ಮನುಷ್ಯ ಸಮಾಜದ ಸ್ವಭಾವದಲ್ಲಿ ಸುಧಾರಣೆ ತರಲು ಪ್ರಯತ್ನಿಸಿದರೆಂಬ ವಿಚಾರದಲ್ಲಿ ಎರಡು ಮಾತಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯವೇ!

ಒಟ್ಟಿನಲ್ಲಿ ಕ. ವೆಂ.ರಾಜಗೋಪಾಲ್ ಅವರ ಲೇಖನ ಅನೇಕರನ್ನು ಚಿಂತನೆಗೆ ಒಳಪಡಿಸಿದಕ್ಕೆ ಅವರಿಗೆ ಧನ್ಯವಾದಗಳು.



# ವೀರಶೈವ ಧರ್ಮ - ಗುರು ಪರಿಕಲ್ಪನೆ

ಭಾರತೀಯ ಸಾಂಸ್ಕೃತಿಕ ಇತಿಹಾಸದಲ್ಲಿ ಧಾರ್ಮಿಕ, ಸಾಮಾಜಿಕ ಪರಂಪರೆಯಲ್ಲಿ 'ಗುರು' ಪರಿ ಕಲ್ಪನೆಗೆ ಹೆಚ್ಚಿನ ಮಹತ್ವವನ್ನು ಕಲ್ಪಿಸಲಾಗಿದೆ. ಯಾವುದೇ ಜ್ಞಾನ ಶಾಸ್ತ್ರದ ಆರಂಭ ಗುರುಸ್ತುತಿ, ಗುರುವಂದನೆಯೊಂದಿಗೆ ! ಗುರುವನ್ನು ಬ್ರಹ್ಮ , ವಿಷ್ಣು, ಮಹೇಶ್ವರರೊಂದಿಗೆ ಸಮೀಕರಿಸಲಾಗಿದೆ. ಆದ್ದರಿಂದ ಗುರುವಿನ ಸ್ಥಾನ ಭಗವಂತ ನಿಗಿಂತಲೂ ಮೇಲಾದುದು. ಭಗವಂತನ, ಸಾಕ್ಷಾತ್ಕಾರಕ್ಕೆ ಮಾರ್ಗ ದರ್ಶಕ ಗುರುವಾಗಿರುವುದರಿಂದ ಮೊದಲ ಆದ್ಯತೆ ಗುರುವಿಗೇ ಸಲ್ಲಬೇಕಾಗುತ್ತದೆ. ಒಂದು ವೇಳೆ ಗುರು, ಗೋವಿಂದ (ಭಗವಂತ ) ಏಕಕಾಲಕ್ಕೆ ನಮ್ಮೆದುರು ನಿಂತಾಗ ಶಿಷ್ಯ ಅಥವಾ ಸಾಧಕನಿಗೆ ಒಂದು ಸಂದಿಗ್ಧ ಸನ್ನಿವೇಶ ಏರ್ಪಡುವುದು ಸಹಜ. ಅಂತಹ ಸಂದರ್ಭದಲ್ಲಿ ಕಬೀರದಾಸರು ಹೇಳುವಂತೆ ಗುರುವಿಗೇ ಪ್ರಥಮ ಗೌರವ, ನಮಸ್ಕಾರಗಳು ಸಲ್ಲಬೇಕು. ತನ್ನೊಂದು ದೋಹಾ (ದ್ವಿಪದಿ)ದಲ್ಲಿ ಹೀಗೆ ಹೇಳುತ್ತಾನೆ. "ಗುರು ಗೋವಿಂದರಿಬ್ಬರೂ ಎದುರು ನಿಂತಿದ್ದಾರೆ. ಯಾರ ಕಾಲಿಗೆ ಮೊದಲು ನಮಸ್ಕರಿಸಲಿ? ಕಬೀರ ಹೇಳುವುದೇನೆಂದರೆ, ಗುರುವಿಗೇ ಮೊದಲು ನಮಸ್ಕರಿಸು ಕಾರಣ ಗೋವಿಂದನನ್ನು ಕಾಣುವಂತೆ ದಾರಿ ತೋರಿದವನೆಂದರೆ, ಗುರುವೇ!' ಆದ್ದರಿಂದ ಹರಿಹರ ಬ್ರಹ್ಮರಿಗಿಂತಲೂ ಗುರುವೇ ದೊಡ್ಡವನು. ಪ್ರತಿದಿನವೂ ಭಗವಂತನನ್ನು ಪ್ರಾತಃ ಸ್ಮರಣೆಯಲ್ಲಿ ನೆನಪಿಸಿಕೊಳ್ಳುವಂತೆ ಗುರುವನ್ನೂ ನೆನಪಿಸಿಕೊಳ್ಳುವುದು ಅನಿವಾರ್ಯ.

ಪ್ರತಿಯೊಂದು ಧರ್ಮ ಗ್ರಂಥ, ಕಾವ್ಯ, ಪುರಾಣವೂ ಮೊದಲಿಗೆ ಗುರುಸ್ಮರಣೆ ಮಾಡಿಯೇ ಮುಂದೆ ಸಾಗುತ್ತದೆ. ವಿಶ್ವ ಮೌಲ್ಯದ ಭಗವತ್‌ಗೀತೆಯ ಪ್ರಾರಂಭದಲ್ಲಿ ಗುರುವಿನ ಬಗ್ಗೆ ಏನು ಹೇಳಿದೆ?

"ಗುರು ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರ:
ಗುರು ಸಾಕ್ಷಾತ್ಪರಂ ಬ್ರಹ್ಮ ತಸ್ಮೈಶ್ರೀ ಗುರುವೇ ನಮ:"

-ಎಂದು ತ್ರಿಮೂರ್ತಿ ಸ್ವರೂಪವನ್ನು ವರ್ಣಿಸಿ ನಮಸ್ಕಾರ ಸಲ್ಲಿಸ ಬೇಕೆನ್ನುತ್ತದೆ. ಅಷ್ಟೇ ಅಲ್ಲ. ಗುರುವಿನ ಮಹಿಮೆ ಇನ್ನೂ ಅಪಾರ. ಆತ ಸರ್ವವ್ಯಾಪಕ ತತ್ತ್ವ ಬೋಧಕ. ಅಂತಹ ಗುರುವಿನ ದರ್ಶನ ಸಾಮಾನ್ಯವಾದ್ದಲ್ಲ ಎನ್ನುವುದನ್ನು ಹೀಗೆ ವಿವರಿಸಲಾಗಿದೆ.

"ಅಖಂಡ ಮಂಡಲಾಕಾರಂ ವ್ಯಾಪರಿಯೇನ ಚರಾಚರಮ್
ತತ್ಪದಂದರ್ಶಿತಂಯೇನ ತಸ್ಮೈಶ್ರೀ ಗುರುವೇನಮಃ"

ನಮ್ಮ ಹಿಂದಿನವರಿಗೆ ಬಹುಶಃ ಇಷ್ಟು ವರ್ಣನೆಯೂ ಸಾಲದೆನಿಸಿರಬೇಕು. ಅದಕ್ಕೇ ಆತನ ವ್ಯಕ್ತಿತ್ವದ ಅಂತರ್ಗತ ಇನ್ನಷ್ಟು ಮುಖಗಳನ್ನು ಪರಿಚಯಿಸುವಂತೆ ಹಾಡಿ ಹೊಗಳಿದ್ದಾರೆ. ಆತನು ಪಾಠ ಹೇಳಿ ಕೊಡುವ, ಜ್ಞಾನದಾನ ಮಾಡುವಷ್ಟಕ್ಕೇ ಸೀಮಿತನಲ್ಲ. ಆತನ ವ್ಯಕ್ತಿತ್ವದ ಹರವು ಔನ್ನತ್ಯಗಳು ಊಹೆಗೂ ಮೀರಿದ ನೆಲೆಯಿಂದ ವರ್ಣಿತವಾಗಿವೆ.

**ಬ್ರಹ್ಮಾನಂದಂ ಪರಮ ಸುಖದಮ್**
**ಕೇವಲಂ ಜ್ಞಾನ ಮೂರ್ತಿಮ್**
**ದ್ವಂದ್ವಾತೀತಂ ಗಗನ ಸದೃಶಯ್**
**ತತ್ವಮಸ್ಯಾದಿ ಲಕ್ಷ್ಯಮ್!**
**ಏಕಂ ನಿತ್ಯಂ ವಿಮಲಮಚಲಮ್**
**ಸರ್ವಧೀ ಸಾಕ್ಷಿ ಭೂತಮ್**
**ಭಾವಾತೀತಂ ತ್ರಿಗುಣರಹಿತಮ್**
**ಸದ್ಗುರುಂ ತಂ ನಮಾಮಿ||**

ಇಂತಹ ಗುರುವಿಗೆ ಜಾತಿ, ಮತ, ಕುಲಗಳ ಅಂಟಿಲ್ಲ; ನಂಟಿಲ್ಲ. ತನ್ನ ಸಿದ್ಧಿ ಸಾಧನೆ, ಬುದ್ಧಿ, ಜ್ಞಾನ, ವ್ಯಕ್ತಿತ್ವದಿಂದಾಗಿ 'ಗುರು' ಸ್ಥಾನವನ್ನು ತಲುಪುತ್ತಾನೆ. ಗುರು ಅಕ್ಷಯ ಪಾತ್ರೆ. ಜೀವನದಿ. ಬಳಸಿದಷ್ಟೂ ಬೇರೆಯವರಿಗೆ ಧಾರೆ ಎರೆದಷ್ಟೂ ಆತನ ಜ್ಞಾನ ವರ್ಧಿಸುತ್ತಲೇ ಇರುತ್ತದೆ.

'ಗುರು' ಯಾರು? ಆತನ ಅರ್ಹತೆ ಏನು?- ಎನ್ನುವ ಪ್ರಶ್ನೆ ಗಳಿಗೆ ನಿಖರವಾಗಿ ವ್ಯಾಖ್ಯಾನಿಸಲು ಸಾಧ್ಯವಿಲ್ಲವಾದರೂ, ಒಂದಕ್ಷರ ಮಾತ್ರವನ್ನು ಕಲಿಸಿದರೂ 'ಗುರು' ವೆನಿಸಿಕೊಳ್ಳುತ್ತಾನೆ. 'ಕಲಿಸಿದಾತಂ ವರ್ಣ ಮಾತ್ರಂ ಗುರು'- ಎನ್ನುವ ಪ್ರಚಲಿತ ನಂಬಿಕೆಯಿದೆ. ಜೊತೆಗೆ ಜ್ಞಾನಾರ್ಥಿಯಾಗಿ ಬರುವ ಯಾವೊಬ್ಬನ ಪ್ರತಿಭೆಗೂ ಮೇಲಾದ ಪ್ರತಿಭೆ ಅವನಲ್ಲಿ ಇರಬೇಕು. ತನ್ನ ಮೂಲಕ ಕಲಿಯ ಬಂದವನನ್ನು, ಬೆಳಕು ಕಾಣಬಯಸುವವನನ್ನು ಆಪ್ತವಾಗಿ ಆತ್ಮೀಯವಾಗಿ ಪ್ರೀತಿ, ವಾತ್ಸಲ್ಯಗಳಿಂದ ಬರಮಾಡಿಕೊಂಡು ಅವನಿಗೆ ಸರಿಯಾದ ಹಾದಿ ಕಾಣಿಸಬೇಕು. ಗುರಿಯತ್ತ ಸಾಗಲು ಬೇಕಾದ ಬಲವನ್ನು ಅವನಲ್ಲಿ ತುಂಬ ಬೇಕು. ತನ್ನಲ್ಲಿ ಇರುವುದೆಲ್ಲವನ್ನೂ ನಿಸ್ವಾರ್ಥನಾಗಿ ತನ್ನೆಲ್ಲ ಉರಿಯುತ್ತಿರುವ ಅರಿವಿನ ಬೆಳಕನ್ನು ಇನ್ನೊಂದು ಹಣತೆಗೆ ರವಾನಿಸಬೇಕು. ಶಿಷ್ಯನ ಪ್ರಗತಿ ಔನ್ನತ್ಯಗಳಿಗೆ ಅಸೂಯೆ ಪಡದೆ ತನ್ನನ್ನೂ ಮೀರಿಸುವ ಹಾರೈಕೆಯನ್ನು ಹೊಂದಿರಬೇಕು ಆಗ ಮಾತ್ರವೇ ಆತನಿಗೆ ಮಹತ್ವ ಗೌರವಗಳು ಸಲ್ಲುತ್ತವೆ.

ಕಲಿಯ ಬಯಸುವವರು, ಸಾಧನೆಯ ಹಾದಿಯಲ್ಲಿ ಸಾಗಬಯಸುವವರೆಲ್ಲರೂ ಗುರು ಕರುಣೆಗೆ ಪಾತ್ರರಾಗಬೇಕು. ಶಿಷ್ಯನಿಗೆ ಗುರುವಿನಲ್ಲಿ ಸಮರ್ಪಣ ಭಾವವಿರಬೇಕು. ತಾನೆಷ್ಟೇ ಸ್ವಯಂ ಸಿದ್ಧನಾದರೂ, ಪ್ರತಿಭಾವಂತನಾದರೂ ಗುರು ಮುಖೇನ ಪಡೆಯದಿದ್ದರೆ, ಗುರುಕರುಣೆ ದಕ್ಕಿಸಿಕೊಳ್ಳದಿದ್ದರೆ ಅವನ ಕಲಿಕೆಗೆ, ಜ್ಞಾನಕ್ಕೆ ಅರ್ಥವಾಗಲಿ, ಸಾರ್ಥಕತೆಯಾಗಲೀ ಇರುವುದಿಲ್ಲ, ನಮ್ಮ ಕೀರ್ತನಕಾರರು ಅದಕ್ಕೆಂದೇ 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದು ಹಾಡಿದ್ದು; ಗುರುಸೇವೆಯಿಂದಲೇ ಮೋಕ್ಷ. ಗುರುವಿನ ಅನುಗ್ರಹಕ್ಕಾಗಿ ತಪಸ್ಸು ಮಾಡಬೇಕು. ಹಿಂದಿನ ಕಾಲದಲ್ಲಿದ್ದ ಗುರುಕುಲ ವ್ಯವಸ್ಥೆಯಲ್ಲಿ ವಿದ್ಯಾರ್ಥಿಗಳು ಅಥವಾ ಶಿಷ್ಯರು

ಗುರುವಿನ ಅನುಗ್ರಹಕ್ಕಾಗಿ ತುದಿಗಾಲ ಮೇಲೆ ನಿಂತು ನಿರೀಕ್ಷಿಸಬೇಕಾಗುತ್ತಿತ್ತು. ಶಿಷ್ಯರು ಬಯಸಿದಾಗ ಪಾಠ ಪ್ರವಚನಗಳಲ್ಲ; ಗುರುವಿಗೆ ಮನಸ್ಸು ಬಂದಾಗ ಪಾಠ! ಆದರೆ ಇಂದು ಪರಿಸ್ಥಿತಿಯೇ ವ್ಯತ್ಯಯವಾಗಿದೆ. ಕಾಲಕಾಲಕ್ಕೆ ಗುರುಶಿಷ್ಯ ಸಂಬಂಧಗಳು ಬದಲಾಗುತ್ತಿವೆ. ಗುರು ಪದಕ್ಕೆ ಉಪಾಧ್ಯಾಯ, ಟೀಚರ್ ಎನ್ನುವ ಹೆಸರುಗಳು ಇದ್ದರೂ ಹಿಂದಿನ ಕಾಲದಲ್ಲಿ ಬಳಸುತ್ತಿದ್ದ 'ಗುರು' ಪದಕ್ಕೆ ಹೆಚ್ಚಿನ ಅರ್ಥವ್ಯಾಪ್ತಿ, ಗಂಭೀರತೆಗಳು ಇದ್ದವು.

ಎಲ್ಲ ವ್ಯವಸ್ಥೆಗಳಲ್ಲಿಯೂ 'ಗುರು' ಎನ್ನುವ ಸ್ಥಾನವೊಂದಿದ್ದು ಆ 'ಗುರು'ಗಳ ಕಾರ್ಯವ್ಯಾಪ್ತಿ ಬೇರೆ ಬೇರೆಯಾಗಿರುತ್ತಿದ್ದವು. ಅಧ್ಯಾತ್ಮ, ಶಿಕ್ಷಣ, ರಾಜಕೀಯ, ರಂಗಗಳೆಲ್ಲದರಲ್ಲೂ 'ಗುರು' ಸ್ಥಾನವಿದ್ದೇ ಇದೆ. 'ಅಧ್ಯಾತ್ಮ' ಜಗತ್ತಿನಲ್ಲಿ ಅಥವಾ ಕ್ಷೇತ್ರದಲ್ಲಿ ಗುರು ಸಾಧಕನಿಗೆ, ಭಗವತ್‌ಸಾಕ್ಷಾತ್ಕಾರಕ್ಕೆ ಅಥವಾ 'ಬ್ರಹ್ಮತ್ವ'ಕ್ಕೆ ಅನುಭಾವದ ಹಾದಿ ತೋರುತ್ತಾನೆ. ಲೋಕ ಜ್ಞಾನ ಶಾಸ್ತ್ರಜ್ಞಾನಕ್ಕೂ ಗುರುವಿನ ಅಗತ್ಯವಿರುತ್ತದೆ. ನಮ್ಮ ಹಿಂದಿನ ಕಾಲದ ರಾಜ ಮಹಾರಾಜರುಗಳಿಗೂ ರಾಜ್ಯದ ರಾಜ್ಯಾಡಳಿತದ ವಿವಿಧ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಚರ್ಚೆನಡೆಸಿ ಸಲಹೆ, ಸೂಚನೆ ಮಾರ್ಗದರ್ಶನಗಳಿಗೆಂದೇ 'ರಾಜಗುರು' ಎನಿಸಿಕೊಂಡ ವ್ಯಕ್ತಿ ಇರುತ್ತಿದ್ದರು; ದೇವತೆಗಳಿಗೂ 'ಗುರು'ವಿನ ಅಗತ್ಯ ತಪ್ಪಲಿಲ್ಲ. ಹಾಗಾಗಿ ಬದುಕಿನ ಎಲ್ಲ ರಂಗಗಳಲ್ಲಿಯೂ ಗುರು ಅನಿವಾರ್ಯವಾಗಿ ಅತ್ಯಂತ ಜವಾಬ್ದಾರಿಯುತ ಸ್ಥಾನವನ್ನು ಪಡೆದಿರುತ್ತಾನೆ. ಅರಿವನ್ನು ಪಡೆಯಲು, ಶಿಸ್ತಿನ ಬದುಕನ್ನು ರೂಪಿಸಿಕೊಳ್ಳಲು, ಯಾವುದೇ ವಿಚಾರದಲ್ಲಿ ಮಾರ್ಗದರ್ಶನ ಪಡೆಯಲು 'ಗುರು' ಎನ್ನುವವನ ಅಗತ್ಯವಿದೆ. ಇಷ್ಟೊಂದು ಮಹತ್ವದ ಸ್ಥಾನದಲ್ಲಿರುವ 'ಗುರು' ಕೇವಲ ವ್ಯಕ್ತಿಯಲ್ಲ; ಅಮೂರ್ತ ತತ್ವ. 'ಏಕಲವ್ಯ' - ದ್ರೋಣ ಸಂಬಂಧ ನಮ್ಮ ಪರಂಪರೆಯಲ್ಲಿ ಒಂದು ಜ್ವಲಂತ ನಿದರ್ಶನ. ಗುರುಭಕ್ತಿಯ ಸಾಕಾರವೆಂಬಂತೆ ಏಕಲವ್ಯನನ್ನು ನಮ್ಮ ಕಾವ್ಯ ಪುರಾಣಗಳು ಹೊಗಳುತ್ತವೆ.

ಈ ಮೊದಲೇ ಪ್ರಸ್ತಾಪಿಸಿದಂತೆ 'ಗುರು' ಕಲ್ಪನೆ ಯಾವುದೇ ಒಂದು ಕುಲ, ಮತ, ಧರ್ಮಕ್ಕೆ ಸೀಮಿತವಲ್ಲ. ವೈದಿಕಧರ್ಮವೋ, ಜೈನ, ಬೌದ್ಧ ಧರ್ಮಗಳೋ - ಎಲ್ಲ ಧರ್ಮಗಳಲ್ಲಿ ಗುರುವಿಗೆ ಪ್ರಥಮ ಸ್ಥಾನ; ಮಹತ್ವದ ಸ್ಥಾನ. ಹಾಗೆಯೇ ವೀರಶೈವ ಮತವೂ ಇಂತಹ ನಂಬಿಕೆಗೆ ಹೊರತಲ್ಲ. ಆಧ್ಯಾತ್ಮ, ಅನುಭಾವಗಳು ಗುರುಮುಖೇನ ಬರಬೇಕು. ಗುರುಕರುಣೆ, ಗುರುವಿನ ಅನುಗ್ರಹ ಗಳಿಸಿಕೊಳ್ಳುವಲ್ಲಿ ಯಶಸ್ವಿಯಾದ ಸಾಧಕನಿಗೆ, ಭಗವಂತನ ಸಂಯೋಗ ಸಮಾಗಮಗಳು ಬಹಳ ಸುಲಭ. ವಚನಕಾರರು 'ಗುರು'ವಿನ ಮಹಿಮೆ, ಮೌಲ್ಯವನ್ನು ಬಲ್ಲವರು. ವೀರಶೈವ ಸಿದ್ಧಾಂತಗಳಲ್ಲಿ ಒಂದಾದ ಷಟ್ಸ್ಥಲ ಸಿದ್ಧಾಂತದ ಭಕ್ತಸ್ಥಲದಲ್ಲಿ 'ಗುರುಕರುಣೆ' ಸ್ಥಲವೊಂದು ಬರುತ್ತದೆ. ಬಸವಣ್ಣ, ಅಲ್ಲಮಪ್ರಭು, ಜೇಡರ ದಾಸಿಮಯ್ಯ ಮೊದಲಾದ ವಚನಕಾರರು ತಮ್ಮ ತಮ್ಮ ಅನುಭವಕ್ಕೆ ಬಂದಂತೆ 'ಗುರು'ವಿನ ಬಗ್ಗೆ ಬಣ್ಣಿಸುತ್ತಾರೆ. ಗುರು ಅನುಭಾವದ ಹಾದಿಗೆ ಕೊಂಡೊಯ್ಯುವುದಷ್ಟೇ ಅಲ್ಲ, ಶಿಷ್ಯನ ಅಥವಾ ಸಾಧಕನಲ್ಲಿನ ಎಲ್ಲ ಕೊಳೆ ಕಶ್ಮಲಗಳನ್ನೂ ಉರುಬಿ ಸುಟ್ಟು ಪವಿತ್ರನೂ ಪರಿಶುದ್ಧನೂ ಆಗುವಂತೆ ಮಾಡುತ್ತಾನೆ. ಒಂದು ಕಡೆ ಜೇಡರ ದಾಸಿಮಯ್ಯನೇ ಹೇಳುತ್ತಾನೆ,

ಗುರುವಿನ ಪಾದದ ಮೇಲೆ ಶಿಷ್ಯ ತನ್ನ 'ತೃಣ' ದೇಹವನ್ನು ಇರಿಸಿದ ಕೂಡಲೇ ಕೆಂಡಸುಂಗಿ ಆವನು ಗುರುವಿನಲ್ಲಿ ಒಂದಾಗುತ್ತಾನೆ.

ವೀರಶೈವ ಸಿದ್ಧಾಂತದಲ್ಲಿ ಗುರು ಲಿಂಗ, ಜಂಗಮ ಇವು ಮೂರರ ಸಮನ್ವಯ ದೃಷ್ಟಿ ಅತಿ ವಿಶಿಷ್ಟವೂ ವಿನೂತನವೂ ಆದ ಕಲ್ಪನೆಯಾಗಿದೆ. ಗುರು ಲಿಂಗ ಜಂಗಮ ತತ್ವಗಳೆಲ್ಲವೂ ಅಭಿನ್ನ. ಒಂದರೊಳಗೊಂದು ಅಡಗಿದೆ. ಈ 'ಗುರು' ತತ್ವದ ಬಗ್ಗೆ ವೀರಶೈವರಲ್ಲಿ ಅತ್ಯಂತ ಗಂಭೀರ ಚಿಂತನೆ ನಡೆದಿದೆ. ಅವರ ದೃಷ್ಟಿಯಲ್ಲಿ ಪರಮಾತ್ಮನೇ ಗುರು. ಗುರು ಸ್ವರೂಪದಲ್ಲಿ ಬಂದು ಭಕ್ತನಿಗೆ ಇಷ್ಟಲಿಂಗ ಪ್ರಧಾನ ಮಾಡುತ್ತಾನೆ. 'ಈ ಲಿಂಗ ಸ್ವರೂಪವು ಭಕ್ತನ ಹೃದಯ ಕಮಲದಲ್ಲಿ ನೆಲಸುತ್ತದೆ. ಜಂಗಮ ಮೂರ್ತಿಯಾಗಿ ಬಂದು ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರುವಾಗಿ ಶಿಷ್ಯನ ಭವವನ್ನು ಭೇದಿಸುತ್ತಾನೆ' ಎನ್ನುವುದು ದಾಸೋಹದ ಸಂಗಣ್ಣನ ಅಭಿಪ್ರಾಯ. ಶಿವಲೆಂಕ ಮಂಚಣ್ಣನೂ ಹೆಚ್ಚು ಕಡಿಮೆ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ.

ಕೋಲ ಶಾಂತಯ್ಯ, ಜೇಡರ ದಾಸಿಮಯ್ಯ, ಅಲ್ಲಮ ಪ್ರಭು, ಬಸವಣ್ಣ, ಚೆನ್ನ ಬಸವಣ್ಣ ಮುಂತಾದವರೆಲ್ಲರು 'ಗುರು' ತತ್ವದ ಬಗ್ಗೆ ವೀರಶೈವ ಪರಿಭಾಷೆಯಲ್ಲಿ ವ್ಯಾಖ್ಯಾನಿಸಿದ್ದಾರೆ. ಚೆನ್ನಬಸವಣ್ಣ ಗುರುವಿನ ಸ್ಥಾನ, ಮಹಿಮೆಗಳನ್ನು ಹಲವು ವಚನಗಳಲ್ಲಿ ವಿವರಿಸಿದ್ದಾನೆ. 'ಗುರುವೆಂಬುದು ತಾನು ಸ್ವಯಂ ಜ್ಯೋತಿ ಪ್ರಕಾಶ. ಅಂತಪ್ಪ ಸ್ವಯಂ ಜ್ಯೋತಿ ಪ್ರಕಾಶವ ತಂದು ಪರಂಜ್ಯೋತಿಯ ಹೊತ್ತಿಸಿದಡೆ ಆ ಜ್ಯೋತಿ ತನ್ನಂತೆ ಮಾಡಿತ್ತು!' - ಎಂದು ಉದ್ಗರಿಸಿದ್ದೇ ಅಲ್ಲದೆ ಮಹಾಮಹಿಮನು ಅಕಲ್ಪಿತ ನಿತ್ಯ ನಿರವಯ ನಾದ ಗುರುವಿನ ಶ್ರೀ ಚರಣವನ್ನು ಸ್ಮರಿಸಿದ ಮಾತ್ರಕ್ಕೆ ಭವ ಬಂಧನಗಳು ಕಳಚಿ ಹೋಗುತ್ತವೆ ಎನ್ನುತ್ತಾನೆ. ಗುರು ಸೋಂಕಿದ ಶಿಷ್ಯನು ಜ್ಯೋತಿಯಿಂದ ಜ್ಯೋತಿಯಾದಂತೆ ಆಗುತ್ತಾನೆ; ಗುರು ಸೇವೆಯಿಂದ ಚತುರ್ವಿಧ ಫಲ, ಅಷ್ಟಮಹದೈಶ್ವರ್ಯ ಅಷ್ಟ ಭೋಗಗಳು ಲಭಿಸುತ್ತವೆ ಎನ್ನುವುದು ಆದಯ್ಯನ ನಂಬಿಕೆ. ಆದ್ದರಿಂದ ಸಾಧಕನಿಗೆ, ಭಕ್ತನಾಗಬಯಸುವವನಿಗೆ ಗುರುಕಾರುಣ್ಯ ಅತಿ ಮುಖ್ಯ. ವೀರಶೈವರಲ್ಲಿ ಗುರು, ಲಿಂಗ ಬೇರೆ ಬೇರೆಯಲ್ಲ. ಗುರುಕರುಣೆಗೆ ಕುರುಹು ಅಂಗದ ಮೇಲೆ ಲಿಂಗವಿರಬೇಕು. ಇಲ್ಲದಿದ್ದಲ್ಲಿ ಗುರುಕಾರುಣ್ಯ ವ್ಯರ್ಥವಾಗುತ್ತದೆ. ಇದನ್ನೇ ಜೇಡರ ದಾಸಿಮಯ್ಯ ತನ್ನೊಂದು ವಚನದಲ್ಲಿ ಹೀಗೆ ವಿವರಿಸುತ್ತಾನೆ: "ಲಿಂಗವಿಲ್ಲದ ಗುರುಕಾರುಣ್ಯವು ಬತ್ತಿದ ಕೆರೆಯಲ್ಲಿ ತಾವರೆಯ ಬಿತ್ತಿದಂತೆ" ಎನ್ನುತ್ತಾನೆ. ಅಷ್ಟೇ ಅಲ್ಲದೆ ತನ್ನೊಳಗಿನ ಶಿವ ಚೈತನ್ಯದೊಂದಿಗೆ ಬೆರೆಯಬೇಕಾದಲ್ಲಿ ಗುರುವಿನ ನೆರವು ಅತ್ಯವಶ್ಯಕವೆನ್ನುತ್ತಾನೆ ದಾಸಿಮಯ್ಯ.

ಪರತತ್ವ, ಪರಬ್ರಹ್ಮ ಮೂರ್ತಿಯಾದ ಗುರುವೇ ಸಕಲಕೆಲ್ಲಕು ಮೊದಲು. ಗುರುವಿರಲು ಲಿಂಗ. ಆದ್ದರಿಂದ ಬಸವಣ್ಣ,

**ಮಡಕೆಯ ಮಾಡುವಡೆ ಮಣ್ಣೆ ಮೊದಲು**
**ತೊಡಿಗೆಯ ಮಾಡುವಡೆ ಹೊನ್ನೆ ಮೊದಲು**
**ಶಿವಪಥವನರಿವಡೆ ಗುರುಪಥವೆ ಮೊದಲು**
**ಕೂಡಲಸಂಗಮದೇವರನರಿವಡೆ**
**ಶರಣರ ಸಂಗವೇ ಮೊದಲು**

- ಎನ್ನುವ ವಚನದಲ್ಲಿ ಶಿವಪಥಕ್ಕೆ ದಾರಿ ಕಂಡುಕೊಳ್ಳಬೇಕಾದಲ್ಲಿ ಗುರುಪಥವನ್ನು ಮೊದಲು ಹಿಡಿಯಬೇಕೆನ್ನುತ್ತಾನೆ. ಆದ್ದರಿಂದ 'ಗುರುಪಥವ' ಮೀರಿ ಮಾಡುವ ನೇಮ ಸಲ್ಲದು ಎಂಬುದು ಅವನ ಅಭಿಪ್ರಾಯ. ಲಿಂಗ, ಜಂಗಮ, ನೇಮ, ನಿತ್ಯತ್ವಗಳೆಲ್ಲವೂ ಗುರುವಚನದ ಮೂಲಕವೇ. ಬಸವಣ್ಣ ಮತ್ತೊಂದು ವಚನದಲ್ಲಿ ಹೀಗೆ ವಿವರಿಸುತ್ತಾನೆ.

**ಗುರುವಚನವಲ್ಲದೆ ಲಿಂಗವೆಂದೆನಿಸದು**
**ಗುರುವಚನವಲ್ಲದೆ ಜಂಗಮವೆಂದೆನಿಸದು**
**ಗುರುವಚನವಲ್ಲದೆ ನಿತ್ಯವೆಂದನಿಸದು**
**ಗುರುವಚನವಲ್ಲದ ನೇಮವೆಂದೆನಿಸದು**
**ತಲೆಯಿಲ್ಲದ ಅಟ್ಟಗೆ ಪಟ್ಟವ ಕಟ್ಟುವ**
**ಉಭಯ ಭ್ರಷ್ಟರ ಮೆಚ್ಚುವನೆ**
**ನಮ್ಮ ಕೂಡಲ ಸಂಗಮದೇವ**

ಗುರುವಿನ ಸ್ಥಾನ ಬಲುದೊಡ್ಡದು. ಗುರುವಾದವನೂ ತನ್ನ ಸ್ಥಾನ ಮಾನಗಳನ್ನು ಕಾಯ್ದುಕೊಳ್ಳಬೇಕು. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಾದಿಗಳನ್ನು ಕಳೆದುಕೊಂಡಾಗಲೇ ಅವನು ಗುರುಪ್ರಸಾದಿಯಾಗುತ್ತಾನೆ.

ಚೆನ್ನಬಸವಣ್ಣನಂತೂ 'ಗುರು'ವನ್ನು ಮತ್ತೂ ಎತ್ತರದಲ್ಲಿರಿಸಿ ಹೊಗಳುತ್ತಾನೆ. ಅವನಿಗೆ 'ಸಾಕಾರವಿಡಿದು ಗುರುಲಿಂಗವಾದ; ನಿರಾಕಾರವಿಡಿದು ಪ್ರಾಣಲಿಂಗವಾದ; ಉಭಯ ಸ್ಥಲ ಏಕವಾದಲ್ಲಿ ಭವವಿರಹಿತ ಭಕ್ತ ಜೀವನ್ಮುಕ್ತನಾದ. ಅಂತು ಗುರು ನಿಂದ ಸ್ಥಾನ ಕಾಶಿ ಕ್ಷೇತ್ರ; ಗುರುಚರಣ ಪ್ರಕ್ಷಾಲನೋದಕವೆ ಗಂಗಾತೀರ್ಥ.... ಗುರುದರ್ಶನ ಪರಮಪೂಜೆ; ಗುರುಪಾದ ರುದ್ರ ಗಾಯತ್ರಿ: ಗುರುವಿನಿಂದ ಅತಿಶಯ ಘನವೇನೂ ಇಲ್ಲ'.

ಗುರುಪಾದೋದಕದ ಹಿರಿಮೆಯನ್ನು ಸಿದ್ಧರಾಮನೂ ಮುಕ್ತಕಂಠದಿಂದ ಹೊಗಳುತ್ತಾನೆ. ಗುರುವಿನ ಪಾದೋದಕ ಸ್ನಾನವೇ ಹೆಣ್ಣಿಗಾಗಲಿ, ಗಂಡಿಗಾಗಲಿ ಶುದ್ಧ. ಪಾದೋದಕ ಪ್ರೋಕ್ಷಣೆ, ಗುರು, ಲಿಂಗ, ಜಂಗಮ ತತ್ವಗಳು ಎಲ್ಲರೂ ಭಾವಿಸಿದಂತೆ ಒಂದೇ. ಬೇರೆ ಬೇರೆ ಕ್ರಿಯಾ ರೀತಿಗಳಿಂದ, ಹೆಸರಿನಿಂದ ಬೇರೆ, ಅಷ್ಟೇ. ಬಸವಣ್ಣನ ವಚನ ಈ ಸಂಬಂಧವನ್ನು ಸ್ಪಷ್ಟ ಪಡಿಸುತ್ತದೆ.

**'ಉಪದೇಶವ ಕೊಟ್ಟು ಗುರುವಾದ**
**ಕರಸ್ಥಲಕ್ಕೆ ಬಂದು ಲಿಂಗವಾದ;**
**ದಾಸೋಹವ ಮಾಡಿಸಿಕೊಂಡು ಜಂಗಮವಾದ**
**ಇಂತೀ ಗುರು, ಲಿಂಗ, ಜಂಗಮ**
**ಒಂದೆಯಲ್ಲದೆ ಭಿನ್ನವಿಲ್ಲೆಂದ'**

ಇದೇ ಭಾವ ಬರುವಂತೆ ಸಿದ್ಧರಾಮನೂ ಗುರುಲಿಂಗ ಜಂಗಮ ಸಂಬಂಧವನ್ನು ವಿವರಿಸುತ್ತಾನೆ. ಮೃದು ರುಚಿ ರೂಪು ಕೂಡಿ ಸಕ್ಕರೆಯಾಯಿತ್ತು. ಗುರು ಲಿಂಗ ಜಂಗಮ ಕೂಡಿ ವಸ್ತುವಾಯಿತು, ಮೃದುವಿನಂತೆ ಗುರು, ರುಚಿಯಂತೆ ಲಿಂಗ, ರೂಪಿನಂತೆ ಜಂಗಮ ಎಂದು ಅದ್ಭುತವಾದ ರೂಪಕವೊಂದನ್ನು ನೀಡಿದ್ದಾನೆ.

ಅಲ್ಲಮ ಪ್ರಭುವೂ 'ಗುರು'ವಿನ ಮಹಿಮೆಯನ್ನು ಎತ್ತಿ ಹಿಡಿಯಲು ಹಿಂದೆ ಬೀಳಲಿಲ್ಲ. ಅವನಿಗೆ ಕಂಡುದನೆ ಕಂಡು ಕಾಣಬಾರದುದ ಕಾಣಲು' ಸಾಧ್ಯವಾಗುವುದು ಗುರುಪಾದ ಹಿಡಿದಾಗ ಮಾತ್ರ'

ಎಲ್ಲ ವಚನಕಾರರೂ 'ಗುರುಕಾರುಣ್ಯ ಸ್ಥಲ'ದಲ್ಲಿ ಗುರುವಿನ ಅಂತರ್ ಬಹಿರ್ಮುಖಿಗಳೆಲ್ಲನ್ನೂ ಉಪಮೆ ರೂಪಕಗಳ ಮೂಲಕವಾಗಿ ವಿವರಿಸಿದ್ದಾರೆ. ಇಷ್ಟು ಮಹತ್ವ ಪೂರ್ಣವಾದ ಗುರುವಿಗೆ ಇರಬೇಕಾದ ಶಿಷ್ಯ ಹೇಗಿರಬೇಕು ಎನ್ನುವುದೂ ಅವರ ಚಿಂತನೆಯ ಭಾಗವಾಗಿದೆ. ಗುರು-ಶಿಷ್ಯ ಸಂಬಂಧ ಜ್ಯೋತಿಯಲ್ಲಿ ಸೇರಿದ ಜ್ಯೋತಿಯಂತಿರಬೇಕು; ದರ್ಪಣ ದೊಳಡಗಿದ ಪ್ರತಿಬಿಂಬದಂತೆ ಇರಬೇಕು; ಸ್ಫಟಿಕದ ಘುಟದೊಳಗಿರಿಸಿದ ರತ್ನದಂತಿರಬೇಕು. ರೂಪಿನ ನೆಳಲಿನ ಅಂತರಂಗದಂತಿರಬೇಕು. ದರ್ಪಣವ ದರ್ಪಣಕ್ಕೆ ತೋರಿದಂತಿರಬೇಕು'

-ಎಂದು.

ಗುರು-ಶಿಷ್ಯರ ನಡುವೆ ಯೋಗ್ಯ ಸಂಬಂಧವಿರಬೇಕು. ತಿಳಿಗೇಡಿ ಶಿಷ್ಯನಾದಲ್ಲಿ ಶಿಷ್ಯನನ್ನು ಗುರು ತ್ಯಜಿಸಬೇಕು. ಹಾಗೆಯೇ ಗುರುವಿನಲ್ಲಿ ಅನಾಚಾರ ದುರಾಚಾರಗಳು ಕಂಡು ಬಂದಲ್ಲಿ, ತಿದ್ದಿಕೊಂಡು ಬಾಳುವುದು, ಇಲ್ಲವಾದಲ್ಲಿ ಗುರುವನ್ನು ತ್ಯಜಿಸಿ ಬಂದು ಸದಾಚಾರ ತತ್ವವನ್ನು ಸಾಧಿಸಿ ಕೊಳ್ಳುವ ಪ್ರಯತ್ನ ಮಾಡಬೇಕು.

ಜ್ಞಾನದಾನ ಲಿಂಗದೀಕ್ಷೆಗಳನ್ನು ಕೊಡುವಾಗ ಗುರುವಾದವನಿಗೆ ಪಾತ್ರ ಪಾತ್ರ ವಿವೇಚನೆಯಿರಬೇಕು. ಕಂಡು ಕಂಡವರನ್ನೆಲ್ಲ ಕರೆದು ಇಷ್ಟಲಿಂಗನನೀಯುವುದಲ್ಲ. ಕಟ್ಟುವವನಿಗೂ, ಕಟ್ಟಿಸಿಕೊಳ್ಳುವವನಿಗೂ ವಿವೇಚನೆಯಿರಬೇಕು. ಅಲ್ಲಮಪ್ರಭುವು ತನ್ನ ವಚನದಲ್ಲಿ ಈ ವಿಚಾರವಾಗಿ ಹೀಗೆ ವಿವರಿಸಿದ್ದಾನೆ:

**'ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು?**
**ಹಸಿವು ಹೋಹುದೇ? ಅಂಗದ ಮೇಲೆ ಲಿಂಗ ಸ್ವಾಯತ**
**ವಾದರೇನು? ಭಕ್ತನಾಗ ಬಲ್ಲನೇ? ಇಟ್ಟ ಕಲ್ಲು ಮೆಳೆಯ**
**ಮೇಲೆ ಸಿಕ್ಕಿದರೆ, ಆ ಕಲ್ಲು ಲಿಂಗವೇ? ಆ ಮೆಳೆ ಭಕ್ತನೇ?**
**ಇಟ್ಟಾತ ಗುರುವೇ'**

- ಎಂದು ಪ್ರಶ್ನಿಸುತ್ತಾನೆ.

ಅಂಬಿಗರ ಚೌಡಯ್ಯ ಇನ್ನೂ ಮುಂದೆ ಹೋಗಿ ನಿಷ್ಠುರದ ದನಿಯಲ್ಲಿ ಮಾತಾಡುತ್ತಾನೆ. ಕಾಡಿ ಬೇಡಿ ಅಡ್ಡ ಬಿದ್ದು ಶಿಷ್ಯನನ್ನು ಮಾಡಿಕೊಳ್ಳುವ ದಡ್ಡಗುರು, ಏನೇನೂ ಅರಿಯದ ಎಡ್ಡ ಮಾನವರಿಗೆ ಉಪದೇಶ ಮಾಡುವುದನ್ನು ಹೀಗೆಳೆಯುತ್ತಾನೆ. ಸಪ್ತ ವ್ಯಸನಂಗಳನ್ನು, ಅಷ್ಟಮದಗಳನ್ನೂ ಬಿಡಿಸದ, ಸೂತಕ ಪಾತಕಗಳನ್ನು ದೂರ ಮಾಡದ, ಮೂರು ಮಲಂಗಳ ಬಿಡಿಸದ, ಮುಕ್ತಿ ಪಥವ ತೋರದ ಅಸಮರ್ಥ ಗುರುವನ್ನು ಪ್ರಮಥರು ಯಾರು ತಾನೇ ಮೆಚ್ಚುವರು?- ಎಂಬುದು ಚೌಡಯ್ಯನ ನಿಲುವು.

ಗುರುವಚನವನ್ನು ಉದಾಸೀನ ಮಾಡಿ ಗುರು ಲಿಂಗಕ್ಕೆ ವಂಚಿಸಿದ ಶಿಷ್ಯನ ಮುಖ ದರ್ಶನವೂ ಪಾಪವೆಂಬುದು ಚೆನ್ನ ಬಸವಣ್ಣನ ನಿಲುವು. ನಿಜ ಶಿಷ್ಯ ತನ್ನ ತನುಮನಗಳನ್ನು, ಧನವನ್ನು ಅರ್ಪಿಸಿದಾಗ ಅಂತರಂಗದಾತ್ಮ ಸುಖಕ್ಕೆ ಒಳಗಾಗುತ್ತಾನೆ; ಬಾಧ್ಯನಾಗುತ್ತಾನೆ.

ಹೀಗೆ ಈ 'ಗುರು' ಪರಿಕಲ್ಪನೆ ಎಲ್ಲ ವರ್ಗದ, ಎಲ್ಲ ಚಿಂತಕರನ್ನು ತಬ್ಬಿರುವುದಾದರೂ ವೀರಶೈವ ಸಂದರ್ಭದಲ್ಲಿ ಅತಿ ಹೆಚ್ಚಾಗಿ ಚರ್ಚಿತವಾಗಿದೆ.

ಗುರು ಮಹಿಮೆಯನ್ನು ಕೊಂಡಾಡದ ವಚನಕಾರರಿಲ್ಲ. ಒಬ್ಬ ವಚನಕಾರನಿಗೆ, ಶ್ರೀ ಗುರುಲಿಂಗದೇವರ ಹಸ್ತ ಸ್ಪರ್ಶ ಮಾತ್ರದಿಂದ 'ಭವಂನುಸ್ತಿ'ಯಾದರೆ ಮತ್ತೊಬ್ಬರಿಗೆ ಗುರುಕರುಣಿಸಿದ ಲಿಂಗ ಧಾರಣೆಯಿಂದ ಸರ್ವಾಂಗಲಿಂಗವಾಗುತ್ತದೆ. ಒಟ್ಟಿನಲ್ಲಿ ಎಲ್ಲ ವಚನಕಾರರಿಗೂ 'ಗುರು' ಲಿಂಗ, ಜಂಗಮಗಳನ್ನೂ ತನ್ನಲ್ಲಿ ಸ್ವಯವಾಗಿಸಿಕೊಂಡ ಜ್ಞಾನತತ್ವ. ತಮ್ಮಲ್ಲಿ ಆಧ್ಯಾತ್ಮಿಕ ಸಾಧನೆಗೆ ಅನಿವಾರ್ಯ ತತ್ವ.

"ಗುರುವೆ ಪರತತ್ವವು ತಾನೆ ನೋಡಾ. ಗುರುವೇ ಪರವಸ್ತುವು ತಾನೆ ನೋಡಾ. ಗುರುವೆ ಪರಬ್ರಹ್ಮವು ತಾನೆ ನೋಡಾ. ಗುರುವೆ ಪರಶಿವನು ತಾನೆ ನೋಡಾ."

- ಎನ್ನುವುದು ಎಲ್ಲ ಅನುಭಾವಿ ಶರಣರ ನಂಬಿಕೆ. ಅದೇ ಅವರ ಸಾಧನೆಯ ದಾರಿಗೆ ದೀವಿಗೆ.



# ಚರ್ವಿತ ಚರ್ವಣವಾಗುತ್ತಿರುವ ಸ್ತ್ರೀವಾದ

ಪ್ರಜಾವಾಣಿಯ ಭಾನುವಾರದ ಸಾಪ್ತಾಹಿಕ ಪುರವಣಿಯಲ್ಲಿ ನಾಲ್ಕೈದು ತಿಂಗಳ ಅವಧಿಯೊಳಗೆ ಸ್ತ್ರೀವಾದ ಕುರಿತಂತೆ ಐದಾರು ಲೇಖನಗಳನ್ನು ಓದಿದೆ. ಚರ್ಚೆ ಎಲ್ಲಿಂದಲೇ ಪ್ರಾರಂಭವಾದರೂ ಸ್ತ್ರೀವಾದದ ಪರವಾದ ಗಟ್ಟಿ ನಿಲುವುಗಳೇ ಎದ್ದು ಕಾಣುತ್ತಿದ್ದವು. ಮೇಲಿಂದ ಮೇಲೆ ಓದಿದ ಪರಿಣಾಮವಾಗಿ ಅದರ ಬಗ್ಗೆ ನನ್ನ ಕೆಲವು ಅನಿಸಿಕೆಗಳಿಗೆ ಅಭಿವ್ಯಕ್ತಿ ನೀಡುವ ಪ್ರಯತ್ನವಾಗಿ ಇಲ್ಲಿನ ಲೇಖನವಿದೆ. ಸ್ತ್ರೀವಾದ ಮೇಲು ನೋಟಕ್ಕೆ ಅತಿ ಸರಳವೆನಿಸಿದರೂ ಒಂದು ನಿರ್ದಿಷ್ಟವಾದ ನಿಖರವಾದ ಸಮಗ್ರತೆಯ ವ್ಯಾಖ್ಯೆಗೆ ಒಳಪಡಿಸುವುದು ಸಾಧ್ಯವಿಲ್ಲವೇನೋ ಎನಿಸುತ್ತಿದೆ. ಅದರ ಮುಂದೆ ಬೆಟ್ಟದಷ್ಟು ಸವಾಲುಗಳಿವೆ. ಸಂಕೀರ್ಣ ಸಮಸ್ಯೆಗಳಿವೆ ನಿಜ. ಆದರೆ ಯಾವ ಪ್ರಮಾಣದಲ್ಲಿ ಸ್ತ್ರೀವಾದಿ ಚಳುವಳಿಯು ವ್ಯಾಪಕತೆಯನ್ನು ಪಡೆಯಿತೋ ಆ ಪ್ರಮಾಣದಲ್ಲಿ ಪರಿಣಾಮ, ನಿರೀಕ್ಷೆಗಳ ಸಾಫಲ್ಯ ಕಂಡು ಬಂದಿಲ್ಲವೆನಿಸುತ್ತದೆ. ಸ್ತ್ರೀವಾದದ ಬಗ್ಗೆ ಮಾತನಾಡುವಾಗ ಸಹಸ್ರಾರು ವರ್ಷಗಳ ಚರಿತ್ರೆಯ ಅರಿವಿನ ಅಗತ್ಯವೆನಿಸುತ್ತದೆ. ಸುದೀರ್ಘಕಾಲದಿಂದ ನಡೆದು ಬಂದ ಮತ್ತು ನಡೆಯುತ್ತಲೇ ಇರುವ ಹೆಣ್ಣಿನ ಶೋಷಣೆ, ತುಳಿತಗಳಿಗೆ ಪುರುಷ ಸಮಾಜ, ಪುರುಷ ಪ್ರಧಾನ ವ್ಯವಸ್ಥೆ, ಯಾಜಮಾನ್ಯ ಸಂಸ್ಕೃತಿಗಳೇ ಕಾರಣವೇ ಅಥವಾ ಆಯಾ ಕಾಲದ ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳೂ ಕಾರಣವಾಗಿವೆಯೇ ಎನ್ನುವುದನ್ನು ಮತ್ತು ಹೆಂಗಸರೂ ಸ್ವತಃ ಸ್ವಯಂ ಶೋಷಣೆಗೆ ಜವಾಬ್ದಾರರಾಗಿದ್ದಾರೆಯೇ ಎನ್ನುವುದನ್ನೂ ವಸ್ತುನಿಷ್ಠವಾಗಿ ಯೋಚಿಸಬೇಕಾಗಿದೆಯೇನೋ ಎನಿಸುತ್ತದೆ.

ಡಾರ್ವಿನ್‌ನ ವಿಕಾಸ ಸಿದ್ಧಾಂತದ ಪ್ರಕಾರ ಅಸ್ತಿತ್ವಕ್ಕೆ ಹೋರಾಟ ( ಸ್ಟ್ರಗಲ್ ಫಾರ್ ಎಕ್ಸಿಸ್ಟೆನ್ಸ್) ಮತ್ತು ಬಲಿಷ್ಠನಾದವನಿಗೇ ಉಳಿಗಾಲ. (ಸರ್ವೈವಲ್ ಆಫ್ ದಿ ಫಿಟ್ಟೆಸ್ಟ್) ಅತಿ ಬುದ್ಧಿವಂತ ಪ್ರಾಣಿಗಳೆನಿಸಿಕೊಂಡ ಮಾನವರಲ್ಲಿ ಹೆಣ್ಣುಗಂಡುಗಳಲ್ಲಿ, ಸಾಮಾಜಿಕ ಹೋರಾಟದಲ್ಲಿ ಬಲಿಷ್ಠ ಗಂಡುಗಳು ಹೆಣ್ಣುಗಳನ್ನು ಹಿಂದಿರಿಸಿ ದಾಪುಗಾಲಿನಲ್ಲಿ ಮುಂದುವರೆದರು. ಜೈವಿಕ ಸಂರಚನೆಯಲ್ಲಿನ ಕೆಲವು ಮಿತಿಗಳಿಂದ (ಋತು ಚಕ್ರ, ಗರ್ಭಧಾರಣೆ, ಬಾಣಂತನ ಇತ್ಯಾದಿ) ಹಲವು ಸಂದರ್ಭ, ಅವಕಾಶಗಳಿಂದ ದೂರ ಉಳಿಯಬೇಕಾಯಿತು. ದುಡಿಮೆ ಅಥವಾ ಶ್ರಮದ ಹಂಚಿಕೆಯಲ್ಲಿ

ಮನೆಯ ಒಳ ಜಗತ್ತು ಹೆಣ್ಣಿಗೆ ಉಳಿಯಿತು. ಹೊರ ಜಗತ್ತು ಗಂಡಿನ ಆಯ್ಕೆಯಾಯಿತು. ವಾಸ್ತವವಾಗಿ ಹೆಣ್ಣಿನ ಶೋಷಣೆಯ ಮೂಲ ಲೈಂಗಿಕತೆಯಲ್ಲಿದೆ. ಅಲ್ಲಿಂದಲೇ ಹಲವು ನಿಯಮ ನಿರ್ಬಂಧಗಳ ಹುಟ್ಟು ಪ್ರಾರಂಭವಾಯಿತೆಂದರೆ ಆಶ್ಚರ್ಯದ ಸಂಗತಿಯೇನಲ್ಲ. ಅವಳ ಶೀಲ ರಕ್ಷಣೆ, ಹೊರ ಬದುಕಿನಲ್ಲಿನ ಅಭದ್ರತೆ, ಅಪಾಯಗಳಿಂದ ರಕ್ಷಿಸಲು ಮನೆಯೊಳಗೇ ಉಳಿಸುವಂತಹ ಮನೋಧರ್ಮ ಹಿನ್ನೆಲೆಗಿದ್ದು ನಂತರ ಇದೇ ಒಂದು ಚಾಳಿಯಾಗಿ, ಸಾಮಾಜಿಕ ನಿರ್ಬಂಧವಾಗಿ ಕ್ರಮೇಣ ಕ್ರೂರ ಶೋಷಣೆಯ ಮುಖಗಳನ್ನು ಪಡೆದಿರಬೇಕು. ಧರ್ಮ ಶಾಸ್ತ್ರಗಳು, ಪುರಾಣಗಳು ಪುರುಷ ಸೃಷ್ಟಿಯಾದ್ದರಿಂದ ಅವನ ದೃಷ್ಟಿಕೋನವೇ, ಸ್ತ್ರೀ ಸಂಬಂಧವಾದ ವಿಚಾರಗಳಲ್ಲಿ ಪ್ರಮುಖವಾಯಿತು. ಹೆಣ್ಣು ಕೂಡಾ ತನಗೆ ಸಮಾಜದಲ್ಲಿ ನಿರ್ಧರಿಸಿದ ಸ್ಥಾನ-ಮಾನಗಳನ್ನು. ಧರ್ಮಶಾಸ್ತ್ರಗಳು ವಿಧಿಸಿದ ನಿಯಮಗಳನ್ನು ನಿಟ್ಟುಸಿರಿನೊಂದಿಗೆ ಒಪ್ಪಿ ಕೊಂಡಳು. ಶೋಷಣೆ ದುರ್ಬಲ ಜಾತಿ, ವರ್ಗಗಳ ಶೋಷಣೆಯಂತೆ, ಲೈಂಗಿಕ ತಾರತಮ್ಯದಿಂದಾಗಿ ಹೆಣ್ಣಿನ ಜೊತೆಗೂ ಮುಂದುವರೆಯಿತು.

1975 ರಲ್ಲಿ ಸ್ತ್ರೀ ಶೋಷಣೆಯ ಅರಿವಿನ ಮಹಾಪೂರದಿಂದಾಗಿ ದೊಡ್ಡ ಪ್ರಮಾಣದಲ್ಲಿ ಜಾಗತಿಕ ನೆಲೆಯಲ್ಲಿ ಪ್ರಾರಂಭವಾದ 'ಸ್ತ್ರೀ ಚಳುವಳಿ'ಯನ್ನು ಅತ್ಯಂತ ಉತ್ಸಾಹ, ಸಂಭ್ರಮ, ಕನಸು, ಭ್ರಮೆಗಳೊಂದಿಗೆ ಸ್ವಾಗತಿಸಲಾಯಿತು. ಜಗತ್ತಿನ ಎಲ್ಲ ಭಾಗಗಳಲ್ಲಿನ ಮಹಿಳೆಯರು ಸ್ಪಂದಿಸಿದರು. ಸಾಮಾಜಿಕ ನೆಲೆಯಲ್ಲಿ ಪ್ರಾರಂಭವಾದ ಈ ಸ್ತ್ರೀವಾದಿ ಚಳುವಳಿ ಸೈದ್ಧಾಂತಿಕ, ತಾತ್ವಿಕ ಚಿಂತನೆಗಳಿಗೂ ಪ್ರಬಲ ಪ್ರೇರಣೆಯಾಯಿತು. ಪಾಶ್ಚಾತ್ಯ ಮತ್ತು ಭಾರತೀಯ ಸ್ತ್ರೀವಾದಿ ಚಿಂತನೆಗಳು ಮಹಿಳೆಯರ ಪರವಾದ ಹೋರಾಟಗಳು ಮತ್ತು ಸಮಾನತೆಯ ಹಕ್ಕಿನ ಬಗ್ಗೆ ದನಿಗಳು ಪ್ರಬಲವಾದವು. ಸಾಮಾಜಿಕ ಕಾರ್ಯಕರ್ತರು ಮತ್ತು ತಾತ್ವಿಕ ಚಿಂತಕರು ಮುಂಚೂಣಿಯಲ್ಲಿ ನಿಂತು ಹೋರಾಟ ಮುಂದುವರಿಸಿದರು. ಮಹಿಳೆಯರ ನೋವಿಗೆ ಸ್ಪಂದಿಸಿದರು. ಹೋರಾಟ ಎರಡು ನೆಲೆಗಳಲ್ಲಿ ನಡೆದು ಒಂದು ಸಾಮಾಜಿಕವಾಗಿ ಮತ್ತೊಂದು ಸೈದ್ಧಾಂತಿಕವಾಗಿ ಕವಲೊಡೆಯಿತು. ಸಾಮಾಜಿಕವಾಗಿ, ಮಹಿಳೆಯರು ಕಳೆದುಕೊಂಡಿದ್ದ ಹಕ್ಕು ಅಧಿಕಾರಗಳನ್ನು ಗಳಿಸಿ ಕೊಡುವುದು ಮತ್ತು ಅವರ ಮೇಲೆ ನಡೆಯುವ ದೌರ್ಜನ್ಯ ದಬ್ಬಾಳಿಕೆ ಮತ್ತು ಇತರೆ ರೀತಿಯ ಶೋಷಣೆ, ಅನ್ಯಾಯಗಳ ವಿರುದ್ಧ ರಕ್ಷಣೆ ಕಲ್ಪಿಸಿಕೊಡುವುದು ಸಾಮಾಜಿಕ ನೆಲೆಯ ಚಳುವಳಿಯ ಹಿಂದಿನ ಆಶಯವಾಗಿತ್ತು. ಹೆಣ್ಣಿನ ಬಗೆಗಿನ ಕಾಳಜಿಗಳನ್ನು, ಸಮಸ್ಯೆಗಳನ್ನು, ನಿರೀಕ್ಷೆಗಳನ್ನು ಬಿಂಬಿಸುವಂತಹ ಅಭಿವ್ಯಕ್ತಿಯ ಕೆಲಸವನ್ನು ಸ್ತ್ರೀವಾದಿ ತಾತ್ವಿಕ ಚಿಂತಕರು ಮಾಡಿದರು. ಏನೇ ಆದರೂ ಸಾಮಾಜಿಕ, ಸೈದ್ಧಾಂತಿಕ ನೆಲೆಯ ಚಳುವಳಿಯ ಆಶಯಗಳು ಮಾತ್ರ ಒಂದೇ ಆಗಿದ್ದವು. ಸಮಾಜದಲ್ಲಿ ಸ್ವತಂತ್ರವಾಗಿ ಪುರುಷ ಸಮಾನತೆಯೊಂದಿಗೆ. ಆತ್ಮಗೌರವದೊಂದಿಗೆ ಮುಕ್ತ ಪರಿಸರದಲ್ಲಿ ಬದುಕುವ ಮತ್ತು ಬೌದ್ಧಿಕವಾಗಿ ಬೆಳೆಯುವ, ವೈಯಕ್ತಿಕವಾಗಿ ತಮ್ಮನ್ನು ತಾವು ಗುರುತಿಸಿಕೊಳ್ಳುವ 'ಸ್ತ್ರೀ' ಸಮುದಾಯ ಅಥವಾ ಸ್ತ್ರೀ ಸಮಾಜವೊಂದರ ನಿರ್ಮಾಣದ ಕನಸು, ನಿರೀಕ್ಷೆಗಳೇ ಎರಡೂ ಚಳುವಳಿಗಳ ಗರ್ಭಕೇಂದ್ರವಾಗಿತ್ತು.

ಕನ್ನಡ ಸಾಹಿತ್ಯ ಸಂದರ್ಭಕ್ಕೆ ಬಂದಾಗ, ಸ್ತ್ರೀವಾದಿ ಸಾಹಿತ್ಯ ಚಿಂತನೆ, ದಲಿತ, ಬಂಡಾಯ ಚಳುವಳಿಗಳ ಸಹ ಉತ್ಪಾದ್ಯವಾಗಿ ಕಾಣಿಸಿಕೊಂಡಿತು. ದಲಿತರ ಹಿತರಕ್ಷಣೆಗಾಗಿ ಹುಟ್ಟಿಕೊಂಡ ಅನೇಕ ದಲಿತ ಸಂಘರ್ಷ ಸಂಘಟನೆಗಳಂತೆ ಸ್ತ್ರೀಯರ ಅಥವಾ ಮಹಿಳೆಯರ ಹಿತರಕ್ಷಣೆಗೆ, ಸಾಮಾಜಿಕವಾಗಿ, ಹಲವು ರೀತಿಯಲ್ಲಿ ಹಿಂಸೆ, ಕ್ರೌರ್ಯ, ದೌರ್ಜನ್ಯ, ಲೈಂಗಿಕ ಅತ್ಯಾಚಾರ, ವರದಕ್ಷಿಣೆ ಹೆಸರಿನಲ್ಲಿ ಹೆಣ್ಣನ್ನು ಸುಡುವ ಪದ್ಧತಿಗಳ ವಿರುದ್ಧ ಸಮರ ಸಾರಲು ಸಿದ್ಧವಾಗಿ ನಿಂತ ಸ್ತ್ರೀ ಸಂಘಟನೆಗಳನ್ನು ಹುಟ್ಟು ಹಾಕಿದರು. ಯಾವುದೇ ರೀತಿಯಿಂದ ಅನ್ಯಾಯಕ್ಕೆ ಒಳಗಾದ ಹೆಣ್ಣು ಮಕ್ಕಳ ಪರವಾಗಿ ನಿಂತು ಅವರಿಗೆ ನ್ಯಾಯದೊರಕಿಸಿ ಕೊಡುವ ಪ್ರಕ್ರಿಯೆ ಮುಂದುವರೆಯಿತು. ಸ್ತ್ರೀ ಜಾಗೃತಿಯನ್ನು ಮೂಡಿಸಲು ಅನೇಕ ಹಂತಗಳಲ್ಲಿ, ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದಲ್ಲಿ ಸಮಾವೇಶಗಳು ನಡೆದವು. ಸ್ತ್ರೀ ಸಮಸ್ಯೆಗಳ ಚರ್ಚೆ ವಿಚಾರ ವಿನಿಮಯಗಳು ನಡೆದವು.

ಸಾಹಿತ್ಯದ ನೆಲೆಯಲ್ಲಿ ಅದೂ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಹೇಳುವುದಾದರೆ, ಸುಶಿಕ್ಷಿತ ಮಹಿಳೆಯರು ಅಕಾಡೆಮಿಕ್ ವಲಯಗಳಲ್ಲಿನ ಮಹಿಳೆಯರು ಬಹು ಸಂಖ್ಯೆಯಲ್ಲಿ ಸ್ತ್ರೀವಾದಿ ಚಿಂತನೆಗಳಿಗೆ ತೆತ್ತುಕೊಂಡರು. ಕೆಲವರಂತೂ ನೇರವಾಗಿ ಸ್ತ್ರೀ ಸಂಘಟನೆಗಳೊಂದಿಗೆ ಸಂಬಂಧ ಹೊಂದಿದ್ದು ಸ್ತ್ರೀಪರ ಹೋರಾಟಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ಪತ್ರಿಕೆಗಳಲ್ಲಿ ಲೇಖನಗಳ ಮೂಲಕ, ಸೃಜನಶೀಲ ಬರವಣಿಗೆಯ ಮೂಲಕ ನಿಜವಾದ ಸ್ತ್ರೀಪರ ಕಾಳಜಿಗಳನ್ನು ಅಭಿವ್ಯಕ್ತಿಸಿದರು. ಹೀಗೆ ಸಾಮಾಜಿಕ ಚಳುವಳಿಯಾಗಿ ಬಂದ ಸ್ತ್ರೀವಾದ ಬೌದ್ಧಿಕ ಮತ್ತು ಸಾಹಿತ್ಯ ಜಗತ್ತಿನಲ್ಲಿ ಒಂದು ಸ್ಥಿತ್ಯಂತರವನ್ನು ತಂದಿತು. ಅಚ್ಚರಿ ಮೂಡಿಸುವಷ್ಟು ಸಂಖ್ಯೆಯಲ್ಲಿ ಲೇಖಕಿಯರು ಹುಟ್ಟಿಕೊಂಡರು. ಕಾವ್ಯ, ಕಥೆ ಕಾದಂಬರಿ, ವಿಮರ್ಶೆ ಮೊದಲಾದ ಪ್ರಕಾರಗಳ ಮೂಲಕ ಸ್ತ್ರೀವಾದಿ ಚಿಂತನೆಗೆ ಸ್ಪಂದಿಸಿದರು; ಅಭಿವ್ಯಕ್ತಿಸಿದರು. ಪಾಶ್ಚಾತ್ಯ ಸ್ತ್ರೀವಾದಿ ಚಿಂತಕರ ತಾತ್ವಿಕ ಸಿದ್ಧಾಂತಗಳನ್ನು ಅನ್ವಯಿಸಿ ಕಲೆ, ಸಾಹಿತ್ಯ ವಿಮರ್ಶೆಗಳು ನಡೆದವು. ಲೇಖನಗಳ ಮೂಲಕ ಸಮಾಜ, ಸಾಹಿತ್ಯಗಳ ಸಂಬಂದವಾಗಿ ಹೊಸ ದೃಷ್ಟಿಯ ಅಗತ್ಯತೆಯನ್ನು ಎತ್ತಿ ಹಿಡಿದರು. ಮಹಿಳೆಯನ್ನು ತುಳಿಯುತ್ತಲೇ ಬಂದ ಪುರುಷವರ್ಗದ ಬಗ್ಗೆ ಶತ ಶತಮಾನಗಳಿಂದ ಹೆಪ್ಪುಗಟ್ಟಿದ್ದ ಆಕ್ರೋಶ ಒಮ್ಮೆಲೇ ಸ್ಫೋಟಗೊಂಡು, ಕತೆ , ಕಾದಂಬರಿ, ಕವಿತೆಯ ಮೂಲಕ ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸಮರ್ಥವಾಗಿ ಬಳಸಿಕೊಂಡರು. ಕಲ್ಪನೆಗೂ ಮೀರಿದ ರೀತಿಯಲ್ಲಿ ಪುರುಷ ವಿರೋಧಿ ನಿಲುವನ್ನು ತಳೆದರು. ಸ್ರೀವಾದಿನೆಲೆಯಿಂದ ಮಾತನಾಡುವವರ ಬರೆಯುವವರ ನಡುವೆ ಪುರುಷ ಪರವಾದ ಮಾತನಾಡಿದರೇನೇ ಗುಮಾನಿಯಿಂದ ನೋಡುವ ವಾತಾವರಣ ಸೃಷ್ಟಿಯಾಯಿತು. ಪರಿಸ್ಥಿತಿ ಹೇಗಾಯಿತೆಂದರೆ, ಸ್ತ್ರೀವಾದಿನೆಲೆಯಿಂದ ಪುರುಷರ ಮುಖವಾಡಗಳನ್ನು ಕಳಚುವಂತಹ ಸ್ತ್ರೀ ಬಗೆಗಿನ ಅವರ ನಿಷ್ಠುರ ಮತ್ತು ಪೂರ್ವಗ್ರಹ ಪ್ರೇರಿತ ನಿಲುವುಗಳನ್ನು ಪ್ರಶ್ನಿಸುವಂತಹ ರೀತಿಯಲ್ಲಿ ಬರೆಯದಿರುವ ಲೇಖಕಿಯರು ಎರಡನೆ ದರ್ಜೆಯಲ್ಲಿ ಉಳಿದರು. ಇನ್ನೂ ಕೆಲವು ಸಲ ಲೇಖಕಿಯರು ತಮ್ಮ ಕೃತಿಗಳ ಬಗ್ಗೆ ಮಾತನಾಡುವಾಗ 'ಸ್ತ್ರೀವಾದಿ ದೃಷ್ಟಿಕೋನದಿಂದ ಇದನ್ನು ಬರೆದಿದ್ದೇನೆ ಎಂದು ಹೇಳಿಕೊಳ್ಳುವುದರ ಮೂಲಕ ಸಾಹಿತಿಯಾಗಿ ಗಮನ ಸೆಳೆಯಬಹುದೆಂಬ ಭರವಸೆಯನ್ನು

ಮನೆಯ ಒಳ ಜಗತ್ತು ಹೆಣ್ಣಿಗೆ ಉಳಿಯಿತು. ಹೊರ ಜಗತ್ತು ಗಂಡಿನ ಆಯ್ಕೆಯಾಯಿತು. ವಾಸ್ತವವಾಗಿ ಹೆಣ್ಣಿನ ಶೋಷಣೆಯ ಮೂಲ ಲೈಂಗಿಕತೆಯಲ್ಲಿದೆ. ಅಲ್ಲಿಂದಲೇ ಹಲವು ನಿಯಮ ನಿರ್ಬಂಧಗಳ ಹುಟ್ಟು ಪ್ರಾರಂಭವಾಯಿತೆಂದರೆ ಆಶ್ಚರ್ಯದ ಸಂಗತಿಯೇನಲ್ಲ. ಅವಳ ಶೀಲ ರಕ್ಷಣೆ, ಹೊರ ಬದುಕಿನಲ್ಲಿನ ಅಭದ್ರತೆ, ಅಪಾಯಗಳಿಂದ ರಕ್ಷಿಸಲು ಮನೆಯೊಳಗೇ ಉಳಿಸುವಂತಹ ಮನೋಧರ್ಮ ಹಿನ್ನೆಲೆಗಿದ್ದು ನಂತರ ಇದೇ ಒಂದು ಚಾಳಿಯಾಗಿ , ಸಾಮಾಜಿಕ ನಿರ್ಬಂಧವಾಗಿ ಕ್ರಮೇಣ ಕ್ರೂರ ಶೋಷಣೆಯ ಮುಖಗಳನ್ನು ಪಡೆದಿರಬೇಕು. ಧರ್ಮ ಶಾಸ್ತ್ರಗಳು, ಪುರಾಣಗಳು ಪುರುಷ ಸೃಷ್ಟಿಯಾದ್ದರಿಂದ ಅವನ ದೃಷ್ಟಿಕೋನವೇ, ಸ್ತ್ರೀ ಸಂಬಂಧವಾದ ವಿಚಾರಗಳಲ್ಲಿ ಪ್ರಮುಖವಾಯಿತು. ಹೆಣ್ಣು ಕೂಡಾ ತನಗೆ ಸಮಾಜದಲ್ಲಿ ನಿರ್ಧರಿಸಿದ ಸ್ಥಾನ-ಮಾನಗಳನ್ನು. ಧರ್ಮಶಾಸ್ತ್ರಗಳು ವಿಧಿಸಿದ ನಿಯಮಗಳನ್ನು ನಿಟ್ಟುಸಿರಿನೊಂದಿಗೆ ಒಪ್ಪಿ ಕೊಂಡಳು. ಶೋಷಣೆ ದುರ್ಬಲ ಜಾತಿ, ವರ್ಗಗಳ ಶೋಷಣೆಯಂತೆ, ಲೈಂಗಿಕ ತಾರತಮ್ಯದಿಂದಾಗಿ ಹೆಣ್ಣಿನ ಜೊತೆಗೂ ಮುಂದುವರೆಯಿತು.

1975 ರಲ್ಲಿ ಸ್ತ್ರೀ ಶೋಷಣೆಯ ಅರಿವಿನ ಮಹಾಪೂರದಿಂದಾಗಿ ದೊಡ್ಡ ಪ್ರಮಾಣದಲ್ಲಿ ಜಾಗತಿಕ ನೆಲೆಯಲ್ಲಿ ಪ್ರಾರಂಭವಾದ 'ಸ್ತ್ರೀ ಚಳುವಳಿ'ಯನ್ನು ಅತ್ಯಂತ ಉತ್ಸಾಹ, ಸಂಭ್ರಮ, ಕನಸು, ಭ್ರಮೆಗಳೊಂದಿಗೆ ಸ್ವಾಗತಿಸಲಾಯಿತು. ಜಗತ್ತಿನ ಎಲ್ಲ ಭಾಗಗಳಲ್ಲಿನ ಮಹಿಳೆಯರು ಸ್ಪಂದಿಸಿದರು. ಸಾಮಾಜಿಕ ನೆಲೆಯಲ್ಲಿ ಪ್ರಾರಂಭವಾದ ಈ ಸ್ತ್ರೀವಾದಿ ಚಳುವಳಿ ಸೈದ್ಧಾಂತಿಕ, ತಾತ್ವಿಕ ಚಿಂತನೆಗಳಿಗೂ ಪ್ರಬಲ ಪ್ರೇರಣೆಯಾಯಿತು. ಪಾಶ್ಚಾತ್ಯ ಮತ್ತು ಭಾರತೀಯ ಸ್ತ್ರೀವಾದಿ ಚಿಂತನೆಗಳು ಮಹಿಳೆಯರ ಪರವಾದ ಹೋರಾಟಗಳು ಮತ್ತು ಸಮಾನತೆಯ ಹಕ್ಕಿನ ಬಗ್ಗೆ ದನಿಗಳು ಪ್ರಬಲವಾದವು. ಸಾಮಾಜಿಕ ಕಾರ್ಯಕರ್ತರು ಮತ್ತು ತಾತ್ವಿಕ ಚಿಂತಕರು ಮುಂಚೂಣಿಯಲ್ಲಿ ನಿಂತು ಹೋರಾಟ ಮುಂದುವರಿಸಿದರು. ಮಹಿಳೆಯರ ನೋವಿಗೆ ಸ್ಪಂದಿಸಿದರು. ಹೋರಾಟ ಎರಡು ನೆಲೆಗಳಲ್ಲಿ ನಡೆದು ಒಂದು ಸಾಮಾಜಿಕವಾಗಿ ಮತ್ತೊಂದು ಸೈದ್ಧಾಂತಿಕವಾಗಿ ಕವಲೊಡೆಯಿತು. ಸಾಮಾಜಿಕವಾಗಿ, ಮಹಿಳೆಯರು ಕಳೆದುಕೊಂಡಿದ್ದ ಹಕ್ಕು ಅಧಿಕಾರಗಳನ್ನು ಗಳಿಸಿ ಕೊಡುವುದು ಮತ್ತು ಅವರ ಮೇಲೆ ನಡೆಯುವ ದೌರ್ಜನ್ಯ ದಬ್ಬಾಳಿಕೆ ಮತ್ತು ಇತರೆ ರೀತಿಯ ಶೋಷಣೆ, ಅನ್ಯಾಯಗಳ ವಿರುದ್ಧ ರಕ್ಷಣೆ ಕಲ್ಪಿಸಿಕೊಡುವುದು ಸಾಮಾಜಿಕ ನೆಲೆಯ ಚಳುವಳಿಯ ಹಿಂದಿನ ಆಶಯವಾಗಿತ್ತು. ಹೆಣ್ಣಿನ ಬಗೆಗಿನ ಕಾಳಜಿಗಳನ್ನು, ಸಮಸ್ಯೆಗಳನ್ನು, ನಿರೀಕ್ಷೆಗಳನ್ನು ಬಿಂಬಿಸುವಂತಹ ಅಭಿವ್ಯಕ್ತಿಯ ಕೆಲಸವನ್ನು ಸ್ತ್ರೀವಾದಿ ತಾತ್ವಿಕ ಚಿಂತಕರು ಮಾಡಿದರು. ಏನೇ ಆದರೂ ಸಾಮಾಜಿಕ, ಸೈದ್ಧಾಂತಿಕ ನೆಲೆಯ ಚಳುವಳಿಯ ಆಶಯಗಳು ಮಾತ್ರ ಒಂದೇ ಆಗಿದ್ದವು. ಸಮಾಜದಲ್ಲಿ ಸ್ವತಂತ್ರವಾಗಿ ಪುರುಷ ಸಮಾನತೆಯೊಂದಿಗೆ. ಆತ್ಮಗೌರವದೊಂದಿಗೆ ಮುಕ್ತ ಪರಿಸರದಲ್ಲಿ ಬದುಕುವ ಮತ್ತು ಬೌದ್ಧಿಕವಾಗಿ ಬೆಳೆಯುವ, ವೈಯಕ್ತಿಕವಾಗಿ ತಮ್ಮನ್ನು ತಾವು ಗುರುತಿಸಿಕೊಳ್ಳುವ 'ಸ್ತ್ರೀ' ಸಮುದಾಯ ಅಥವಾ ಸ್ತ್ರೀ ಸಮಾಜವೊಂದರ ನಿರ್ಮಾಣದ ಕನಸು, ನಿರೀಕ್ಷೆಗಳೇ ಎರಡೂ ಚಳುವಳಿಗಳ ಗರ್ಭಕೇಂದ್ರವಾಗಿತ್ತು.

ಕನ್ನಡ ಸಾಹಿತ್ಯ ಸಂದರ್ಭಕ್ಕೆ ಬಂದಾಗ, ಸ್ತ್ರೀವಾದಿ ಸಾಹಿತ್ಯ ಚಿಂತನೆ, ದಲಿತ, ಬಂಡಾಯ ಚಳುವಳಿಗಳ ಸಹ ಉತ್ಪಾದ್ಯವಾಗಿ ಕಾಣಿಸಿಕೊಂಡಿತು. ದಲಿತರ ಹಿತರಕ್ಷಣೆಗಾಗಿ ಹುಟ್ಟಿಕೊಂಡ ಅನೇಕ ದಲಿತ ಸಂಘರ್ಷ ಸಂಘಟನೆಗಳಂತೆ ಸ್ತ್ರೀಯರ ಅಥವಾ ಮಹಿಳೆಯರ ಹಿತರಕ್ಷಣೆಗೆ, ಸಾಮಾಜಿಕವಾಗಿ, ಹಲವು ರೀತಿಯಲ್ಲಿ ಹಿಂಸೆ, ಕ್ರೌರ್ಯ, ದೌರ್ಜನ್ಯ, ಲೈಂಗಿಕ ಅತ್ಯಾಚಾರ, ವರದಕ್ಷಿಣೆ ಹೆಸರಿನಲ್ಲಿ ಹೆಣ್ಣನ್ನು ಸುಡುವ ಪದ್ಧತಿಗಳ ವಿರುದ್ಧ ಸಮರ ಸಾರಲು ಸಿದ್ಧವಾಗಿ ನಿಂತ ಸ್ತ್ರೀ ಸಂಘಟನೆಗಳನ್ನು ಹುಟ್ಟು ಹಾಕಿದರು. ಯಾವುದೇ ರೀತಿಯಿಂದ ಅನ್ಯಾಯಕ್ಕೆ ಒಳಗಾದ ಹೆಣ್ಣು ಮಕ್ಕಳ ಪರವಾಗಿ ನಿಂತು ಅವರಿಗೆ ನ್ಯಾಯದೊರಕಿಸಿ ಕೊಡುವ ಪ್ರಕ್ರಿಯೆ ಮುಂದುವರೆಯಿತು. ಸ್ತ್ರೀ ಜಾಗೃತಿಯನ್ನು ಮೂಡಿಸಲು ಅನೇಕ ಹಂತಗಳಲ್ಲಿ, ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದಲ್ಲಿ ಸಮಾವೇಶಗಳು ನಡೆದವು. ಸ್ತ್ರೀ ಸಮಸ್ಯೆಗಳ ಚರ್ಚೆ ವಿಚಾರ ವಿನಿಮಯಗಳು ನಡೆದವು.

ಸಾಹಿತ್ಯದ ನೆಲೆಯಲ್ಲಿ ಅದೂ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಹೇಳುವುದಾದರೆ, ಸುಶಿಕ್ಷಿತ ಮಹಿಳೆಯುರು ಅಕಾಡೆಮಿಕ್ ವಲಯಗಳಲ್ಲಿನ ಮಹಿಳೆಯರು ಬಹು ಸಂಖ್ಯೆಯಲ್ಲಿ ಸ್ತ್ರೀವಾದಿ ಚಿಂತನೆಗಳಿಗೆ ತೆತ್ತುಕೊಂಡರು. ಕೆಲವರಂತೂ ನೇರವಾಗಿ ಸ್ತ್ರೀ ಸಂಘಟನೆಗಳೊಂದಿಗೆ ಸಂಬಂಧ ಹೊಂದಿದ್ದು ಸ್ತ್ರೀಪರ ಹೋರಾಟಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ಪತ್ರಿಕೆಗಳಲ್ಲಿ ಲೇಖನಗಳ ಮೂಲಕ, ಸೃಜನಶೀಲ ಬರವಣಿಗೆಯ ಮೂಲಕ ನಿಜವಾದ ಸ್ತ್ರೀಪರ ಕಾಳಜಿಗಳನ್ನು ಅಭಿವ್ಯಕ್ತಿಸಿದರು. ಹೀಗೆ ಸಾಮಾಜಿಕ ಚಳುವಳಿಯಾಗಿ ಬಂದ ಸ್ತ್ರೀವಾದ ಬೌದ್ಧಿಕ ಮತ್ತು ಸಾಹಿತ್ಯ ಜಗತ್ತಿನಲ್ಲಿ ಒಂದು ಸ್ಥಿತ್ಯಂತರವನ್ನು ತಂದಿತು. ಅಚ್ಚರಿ ಮೂಡಿಸುವಷ್ಟು ಸಂಖ್ಯೆಯಲ್ಲಿ ಲೇಖಕಿಯರು ಹುಟ್ಟಿಕೊಂಡರು. ಕಾವ್ಯ, ಕಥೆ ಕಾದಂಬರಿ, ವಿಮರ್ಶೆ ಮೊದಲಾದ ಪ್ರಕಾರಗಳ ಮೂಲಕ ಸ್ತ್ರೀವಾದಿ ಚಿಂತನೆಗೆ ಸ್ಪಂದಿಸಿದರು; ಅಭಿವ್ಯಕ್ತಿಸಿದರು. ಪಾಶ್ಚಾತ್ಯ ಸ್ತ್ರೀವಾದಿ ಚಿಂತಕರ ತಾತ್ವಿಕ ಸಿದ್ಧಾಂತಗಳನ್ನು ಅನ್ವಯಿಸಿ ಕಲೆ, ಸಾಹಿತ್ಯ ವಿಮರ್ಶೆಗಳು ನಡೆದವು. ಲೇಖನಗಳ ಮೂಲಕ ಸಮಾಜ, ಸಾಹಿತ್ಯಗಳ ಸಂಬಂದವಾಗಿ ಹೊಸ ದೃಷ್ಟಿಯ ಅಗತ್ಯತೆಯನ್ನು ಎತ್ತಿ ಹಿಡಿದರು. ಮಹಿಳೆಯನ್ನು ತುಳಿಯುತ್ತಲೇ ಬಂದ ಪುರುಷವರ್ಗದ ಬಗ್ಗೆ ಶತ ಶತಮಾನಗಳಿಂದ ಹೆಪ್ಪುಗಟ್ಟಿದ್ದ ಆಕ್ರೋಶ ಒಮ್ಮೆಲೇ ಸ್ಫೋಟಗೊಂಡು, ಕತೆ , ಕಾದಂಬರಿ, ಕವಿತೆಯ ಮೂಲಕ ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸಮರ್ಥವಾಗಿ ಬಳಸಿಕೊಂಡರು. ಕಲ್ಪನೆಗೂ ಮೀರಿದ ರೀತಿಯಲ್ಲಿ ಪುರುಷ ವಿರೋಧಿ ನಿಲುವನ್ನು ತಳೆದರು. ಸ್ರೀವಾದಿನೆಲೆಯಿಂದ ಮಾತನಾಡುವವರ ಬರೆಯುವವರ ನಡುವೆ ಪುರುಷ ಪರವಾದ ಮಾತನಾಡಿದರೇನೇ ಗುಮಾನಿಯಿಂದ ನೋಡುವ ವಾತಾವರಣ ಸೃಷ್ಟಿಯಾಯಿತು. ಪರಿಸ್ಥಿತಿ ಹೇಗಾಯಿತೆಂದರೆ, ಸ್ತ್ರೀವಾದಿನೆಲೆಯಿಂದ ಪುರುಷರ ಮುಖವಾಡಗಳನ್ನು ಕಳಚುವಂತಹ ಸ್ತ್ರೀ ಬಗೆಗಿನ ಅವರ ನಿಷ್ಠುರ ಮತ್ತು ಪೂರ್ವಗ್ರಹ ಪ್ರೇರಿತ ನಿಲುವುಗಳನ್ನು ಪ್ರಶ್ನಿಸುವಂತಹ ರೀತಿಯಲ್ಲಿ ಬರೆಯದಿರುವ ಲೇಖಕಿಯರು ಎರಡನೆ ದರ್ಜೆಯಲ್ಲಿ ಉಳಿದರು. ಇನ್ನೂ ಕೆಲವು ಸಲ ಲೇಖಕಿಯರು ತಮ್ಮ ಕೃತಿಗಳ ಬಗ್ಗೆ ಮಾತನಾಡುವಾಗ 'ಸ್ತ್ರೀವಾದಿ ದೃಷ್ಟಿಕೋನದಿಂದ ಇದನ್ನು ಬರೆದಿದ್ದೇನೆ ಎಂದು ಹೇಳಿಕೊಳ್ಳುವುದರ ಮೂಲಕ ಸಾಹಿತಿಯಾಗಿ ಗಮನ ಸೆಳೆಯಬಹುದೆಂಬ ಭರವಸೆಯನ್ನು

ತಳೆದಂತೆ ಕಾಣಿಸುವಂತಾಯಿತು. ಮೊದಲಿನಿಂದಲೂ ಪುರುಷ ಸಾಹಿತಿಗಳು ಮಹಿಳಾಸಾಹಿತ್ಯವನ್ನು ಗಂಭೀರವಾಗಿ ತೆಗೆದುಕೊಂಡದ್ದೇ ಇಲ್ಲ. ಸಾಹಿತ್ಯದ ಬಗ್ಗೆ ಮಾತನಾಡುವಾಗಲೆಲ್ಲ ಲೇಖಕಿಯರು ಯಾವುದೇ ರೀತಿಯಿಂದಲೂ ಉಲ್ಲೇಖಗೊಳ್ಳುತ್ತಿರಲಿಲ್ಲ. ಅಪರೂಪಕ್ಕೆ ಒಂದಿಬ್ಬರ ಹೆಸರುಗಳು ಕೇಳಿ ಬರುತ್ತಿದ್ದವು ಅಷ್ಟೆ.

ಸ್ತ್ರೀವಾದಿ ಚಳುವಳಿಯ ಪರಿಣಾಮವಾಗಿ ಕೆಲವು ವಿಮರ್ಶಕರು ಸ್ತ್ರೀವಾದಿ ಸಾಹಿತ್ಯ ಚಿಂತನೆಯ ನೆಲೆ ಬೆಲೆಗಳ ಬಗ್ಗೆ ಆಸಕ್ತಿ, ಕಾಳಜಿಗಳನ್ನು ತೋರಿದರು. ಹಿಂದಿನ ಪರಂಪರೆಯ ಲೇಖಕರಲ್ಲಿ ಸ್ತ್ರೀವಾದಿ ನಿಲುವುಗಳ ಹುಡುಕಾಟದ ಜೊತೆ ಜೊತೆಗೆ ವಿಸ್ಮೃತರಾಗಿದ್ದ ಲೇಖಕಿಯರ ಬಗ್ಗೆ ಆಸಕ್ತಿ ಮೂಡಿ ಅವರ ಸಾಹಿತ್ಯದ, ವ್ಯಕ್ತಿತ್ವದ ಅಧ್ಯಯನ, ಸಂಶೋಧನೆಗಳು ನಡೆದು ಸಮಕಾಲೀನ ಸ್ತ್ರೀವಾದಿ ಚಿಂತನೆಗಳು ಅಭಿವ್ಯಕ್ತವಾದುದನ್ನು ಗುರುತಿಸಿದರು. ಸಾಮಾಜಿಕ ಕಟ್ಟುಪಾಡುಗಳ ನಡುವಿದ್ದೂ ಸ್ತ್ರೀಪರವಾದ ದನಿ ಎತ್ತಿದ್ದು, ಚಾರಿತ್ರಿಕವಾಗಿ ಒಂದು ಮಹತ್ವದ ಸಂಗತಿಯಾಯಿತು. ಹಿಂದಿನ ಲೇಖಕಿಯರ ಸಮಗ್ರ ಸಾಹಿತ್ಯ ಶೋಧಕ್ಕೆ ಹೊರಟದ್ದರ ಪರಿಣಾಮವಾಗಿ ಲೇಖಕಿಯರ ಪರಿಚಯ ಸಾಹಿತ್ಯ ಜಗತ್ತಿಗೆ ಆಗುವುದರ ಮೂಲಕ ಅವರ ಕೃತಿಗಳ ವಿಮರ್ಶೆ ಮತ್ತು ಮೌಲ್ಯೀಕರಣದ ಅವಶ್ಯಕತೆಯಿದೆ ಎಂಬ ಅರಿವಿನೊಂದಿಗೆ ಒಂದಷ್ಟು ಮಂದಿ ಸ್ತ್ರೀವಾದಿ ಚಿಂತಕರು ಕೃತಿಗಳ ಅಧ್ಯಯನಕ್ಕೆ ತೊಡಗಿದರು.

ಸ್ತ್ರೀವಾದಿ ನೆಲೆಯಿಂದ ಬರೆಯುವ, ವಿಮರ್ಶಿಸುವ ಚರ್ಚಿಸುವ ಪ್ರಕ್ರಿಯೆ ಎಷ್ಟು ಪ್ರಬಲವಾಯಿತೆಂದರೆ ಯಾವುದೇ ವಿಚಾರಸಂಕಿರಣಗಳಲ್ಲಿ 'ಮಹಿಳಾ ಸಾಹಿತ್ಯ'ವೆಂದಾಗ, ದಟ್ಟವಾದ ಸ್ತ್ರೀ ಸಂವೇದನೆಗಳಿದ್ದು ದಿಟ್ಟ, ನಿರ್ಭಿಡೆಯ ಶೈಲಿಯಲ್ಲಿ ಪುರುಷ ಸಮಾಜದ ಸ್ತ್ರೀ ಶೋಷಣೆಯ ಮುಖಗಳನ್ನು ಬಿಂಬಿಸುವ ಸಾಹಿತ್ಯ ಮತ್ತು ಮಹಿಳಾ ಸಾಹಿತಿಗಳು ಮಾತ್ರವೇ ಚರ್ಚೆಯ ವ್ಯಾಪ್ತಿಗೆ ಬರುತ್ತಿದ್ದರು. ನಮ್ಮ ಲೇಖಕಿಯರು ಸ್ತ್ರೀವಾದಿ ಚಿಂತನೆಯ ಬೆಳಕಿನಲ್ಲಿ ನಮ್ಮ ಪರಂಪರೆ ಸೃಷ್ಟಿಸಿದ ಸ್ತ್ರೀ ಮಾದರಿಗಳನ್ನು, ಕಾವ್ಯ ಪುರಾಣಗಳಲ್ಲಿನ ಪಾತ್ರಗಳನ್ನು ಪ್ರಶ್ನಿಸಿದರು.

ಹಿಂದಿನ ಸ್ತ್ರೀ ಮಾದರಿಗಳನ್ನು ಹೊಸ ಚಿಂತನೆಯ, ಸಮಕಾಲೀನ ವಿಚಾರಗಳ ಅಚ್ಚಿನಲ್ಲಿ ಹಾಕಿ ತೆಗೆದರು. ಹೊಸ ಮಾದರಿಯ ಹೆಣ್ಣಿನ ಸೃಷ್ಟಿಯಾಯಿತು. ಇಂತಹ ಸಂದರ್ಭದಲ್ಲಿ ಹಿಂದಿನ ಪರಂಪರೆಯಲ್ಲಿನ ಪಾತ್ರಗಳಲ್ಲಿ ಕಾಣುವ ನೋವು, ಪುರುಷ ವಿಧೇಯತೆ, ಕೌಟುಂಬಿಕ ನೆಲೆಯಲ್ಲಿನ ಆತ್ಮೀಯತೆ, ಸಹನೆ, ಅತಿಯಾದ ಪ್ರೀತಿ, ವಾತ್ಸಲ್ಯಗಳು, ಆದರ್ಶಗಳು, ಮೌಲ್ಯ ನಿಷ್ಠೆಗಳಿಗೆ ಒತ್ತುಕೊಡುವ ಬರವಣಿಗೆ ಹಿಮ್ಮೆಟ್ಟಬೇಕಾಯಿತು. ಪುರುಷಸಮಾನ ಹಕ್ಕುಗಳು, ಲೈಂಗಿಕ ಸ್ವಾತಂತ್ರ್ಯ, ಮುಕ್ತ ಅವಕಾಶಗಳಿಂದ ಸನ್ನದ್ಧ ಸ್ತ್ರೀ ಪಾತ್ರಗಳ ಅಥವಾ ಸ್ತ್ರೀಮಾದರಿಗಳೇ ಇಂದಿನ ನಿರೀಕ್ಷೆಯಾಯಿತು.

ಯಾವುದೇ ಕಾಲಘಟ್ಟದಲ್ಲಿನ ಸಾಹಿತ್ಯ ಆಯಾ ಕಾಲದ ಸಾಮಾಜಿಕ ಅಂಶಗಳನ್ನು, ಆ ಕಾಲದಲ್ಲಿ ಪ್ರಚಲಿತ ರೂಢಿ, ಪರಂಪರೆಯ ನಂಬಿಕೆಗಳು ನಡವಳಿಕೆಗಳು, ವಸ್ತು ಸ್ಥಿತಿ - ಇತ್ಯಾದಿಗಳ ಒಟ್ಟು

ಸ್ವರೂಪವನ್ನು ಬಿಂಬಿಸುತ್ತದೆ; ಮತ್ತು ಬಿಂಬಿಸಬೇಕಾಗಿದೆ. ಚರಿತ್ರೆಯನ್ನು ಅರಿಯುವ, ಬರೆಯುವ ಸಂದರ್ಭದಲ್ಲಿ ವರ್ತಮಾನದ ಕಣ್ಣುಗಳಿಂದ ನೋಡುವುದಲ್ಲ; ಮತ್ತು ಅಳೆಯುವುದೂ ಅಲ್ಲ. ವಸ್ತು ನಿಷ್ಠತೆ, ಪ್ರಾಮಾಣಿಕತೆಗಳೊಂದಿಗೆ ಆ ಕಾಲದಲ್ಲಿ ಇದ್ದಂತಹ ರೀತಿಯಲ್ಲಿಯೇ ಸಂಸ್ಕೃತಿ ಸಮಾಜಗಳ ನಿಚ್ಚಳ ನಿರೂಪಣೆ ಇರಬೇಕಾದ್ದು ಅನಿವಾರ್ಯ.

ಮನುಷ್ಯ ಸಮಾಜದ ವಿಕಾಸದೊಂದಿಗೆ ಕಾಲದಿಂದ ಕಾಲಕ್ಕೆ ನಡೆದ ಸಾಮಾಜಿಕ, ರಾಜಕೀಯ, ಧಾರ್ಮಿಕ ಸ್ಥಿತ್ಯಂತರಗಳ ಜೊತೆ ಜೊತೆಗೇ ಪುರುಷ-ಸ್ತ್ರೀ ಸಂಬಂಧಗಳಲ್ಲಿಯೂ ವ್ಯತ್ಯಾಸಗಳು ಕಂಡು ಬಂದವು. ಶೋಷಣೆ ನಡೆದದ್ದು, ನಡೆಯುತ್ತಿರುವುದನ್ನು ನೋಡಿದಾಗ ಈ 'ಶೋಷಣೆ' ಎನ್ನುವುದು ಮನುಷ್ಯ ಸಮಾಜದ ಅಸ್ತಿತ್ವದ ಅವಿಚ್ಛಿನ್ನ ಭಾಗವಾಗಿ ಮುಂದುವರೆಯುವುದೇನೋ ಎನಿಸುತ್ತದೆ. ವೈಜ್ಞಾನಿಕ ಪ್ರಗತಿ, ಶೈಕ್ಷಣಿಕ ವಿಕಾಸ, ಸಾಮಾಜಿಕ ಎಚ್ಚರ, ರಾಜಕೀಯ ಪ್ರಜ್ಞೆ, ಸಂವಿಧಾನಾತ್ಮಕ ಹಕ್ಕುಗಳ ಅರಿವು - ಇವೆಲ್ಲದರ ನಡುವೆಯೂ ಸ್ತ್ರೀ ಪುರುಷರಾದಿಯಾಗಿ ವರ್ಗ, ಜಾತಿ, ಲಿಂಗ ತಾರತಮ್ಯಗಳಿಂದಾಗಿ ನಿರಂತರ ಶೋಷಣೆಗೆ, ದೌರ್ಜನ್ಯ, ದಬ್ಬಾಳಿಕೆಗಳಿಗೆ ಒಳಗಾಗುತ್ತಲೇ ಇದ್ದಾರೆ.

ಆಧುನಿಕ ಅಥವಾ ಸಮಕಾಲೀನ ಪರಿಸರದಲ್ಲಿ ಪರಿಸ್ಥಿತಿ ಸಹಜವಾಗಿಯೇ ಬದಲಾಗಿದೆ. ಮಹಿಳೆಯರು ಹೆಚ್ಚು ಹೆಚ್ಚು ಸುಶಿಕ್ಷಿತರೂ ಆರ್ಥಿಕವಾಗಿ ಸ್ವಾವಲಂಬಿಗಳೂ ಆಗಿದ್ದಾರೆ; ಆಗುತ್ತಿದ್ದಾರೆ. ಸ್ತ್ರೀ ಚಳುವಳಿಯ ಆಶಯಗಳ ಅರಿವಿನಿಂದ, ಕಾನೂನಿನ್ವಯ ದೊರೆತ ಭದ್ರತೆಯಿಂದ ಹಕ್ಕಿನ ಬಗ್ಗೆ ದನಿ ಎತ್ತುವ, ಪ್ರತಿಭಟಿಸುವ, ವರದಕ್ಷಿಣೆಯನ್ನು ವಿರೋಧಿಸುವ, ಒಲ್ಲದ ಗಂಡನಿಂದ ವಿಚ್ಛೇದನ ಪಡೆಯುವ, ಪುನರ್ವಿವಾಹವಾಗುವ, ಲೈಂಗಿಕ ಸ್ವೇಚ್ಛೆಯಿಂದ ಬದುಕುವ ಎಲ್ಲ ಅವಕಾಶಗಳಿದ್ದರೂ, ವಸ್ತುಸ್ಥಿತಿಯೇ ಬೇರೆಯಾಗಿದೆ. ಮಹಿಳೆಯರ ಮೇಲಿನ ಎಲ್ಲ ಅತ್ಯಾಚಾರ, ಅನ್ಯಾಯ, ಶೋಷಣೆಗೆ ಸಾರಾಸಗಟಾಗಿ ಪುರುಷರನ್ನೇ ಹೊಣೆ ಮಾಡುವುದು ಸರಿಯಲ್ಲ. ಒಂದು ಕಡೆ ವೇದಿಕೆಗಳ ಮೇಲಿಂದ ಸ್ತ್ರೀ ಸ್ವಾತಂತ್ರ್ಯ ಸಮಾನತೆಗಳ ಮೇಲೆ ಮಾತನಾಡುತ್ತೇವೆ. ಬರಹಗಳಲ್ಲಿ ಸ್ತ್ರೀ ಸಂವೇದನೆಯನ್ನೇ ಪ್ರಮುಖವಾಗಿಸಿಕೊಳ್ಳುತ್ತಿದ್ದೇವೆ. ಸ್ತ್ರೀ ಪುರುಷ ಸಂಬಂಧಗಳು ಪ್ರಸ್ತುತ ಪರಿಸರದಲ್ಲಿ ಬಹಳ ನಾಜೂಕಿನದಾಗುತ್ತಿದೆ. ಸ್ತ್ರೀ ಎಚ್ಚರದ ಬಗ್ಗೆ ಎಚ್ಚರಗೊಂಡಿರುವ, ಸುಶಿಕ್ಷಿತ, ನಗರ ಪ್ರದೇಶದ ಸ್ತ್ರೀ ಸಮುದಾಯಗಳಲ್ಲೇ ಪ್ರಚಾರಗಳು, ಚರ್ಚೆಗಳು ನಡೆಯುತ್ತಿವೆ. ಆದರೆ ಗ್ರಾಮಾಂತರ ಪ್ರದೇಶಗಳಲ್ಲಿ ಅಲ್ಲದೆ ನಗರಗಳಲ್ಲಿಯೂ ಅನೇಕ ಕುಟುಂಬಗಳಲ್ಲಿ ಸ್ತ್ರೀಯರ ಬಗೆಗಿನ ಧೋರಣೆಗಳಲ್ಲಿ ಅಂತಹ ವ್ಯತ್ಯಾಸವೇನೂ ಕಾಣುತ್ತಿಲ್ಲ. ಕೈ ತುಂಬ ಹಣ ತರುವ, ಪ್ರೀತಿ ವಿಶ್ವಾಸಗಳಿಂದ ಕಾಣುವ ಗಂಡಂದಿರ ಬಗ್ಗೆ ಹೆಮ್ಮೆ ಪಡುವ ಮತ್ತು ಗಂಡಂದಿರ ಏಳ್ಗೆ, ಸಾಧನೆಗಳಲ್ಲಿಯೇ ಪರಮಾರ್ಥ ಕಂಡು ಧನ್ಯತೆಯ ಭಾವ ತಳೆವ ಮಹಿಳೆಯರಿಗೂ ಕಡಿಮೆಯಿಲ್ಲ. ಸ್ತ್ರೀ ಚಳುವಳಿಯ ಬಗ್ಗೆ ಅರಿವಿಲ್ಲದೆಯೂ ಅನ್ಯಾಯಕ್ಕೆ ಪ್ರತಿಭಟಿಸುವ ಹೆಣ್ಣುಗಳೂ ಇದ್ದಾರೆ; ಗಂಡುಗಳೂ ಇದ್ದಾರೆ. ಹಾಗೆಯೇ ಸ್ತ್ರೀವಾದದ ಬಗ್ಗೆ ನಿರಾಸಕ್ತಿ ತಳೆದು, ಬದಲಾವಣೆಗೇ ತೆರೆದುಕೊಳ್ಳದ ಮತ್ತು ತೆರೆದುಕೊಳ್ಳಲಾಗದ ಮಹಿಳೆಯರೂ ಇದ್ದಾರೆ. ಆತ್ಮ ಗೌರವ, ಶೀಲ

ರಕ್ಷಣೆಯ ದೃಷ್ಟಿಯಿಂದ ಹೆಣ್ಣನ್ನು ಅಶ್ಲೀಲವಾಗಿ ಚಿತ್ರಿಸುವ, ಬಿಂಬಿಸುವ ಮಾಧ್ಯಮಗಳ ವಿರುದ್ಧ, ಜಾಹಿರಾತುಗಳ ವಿರುದ್ಧ, ಸೌಂದರ್ಯ ಸ್ಪರ್ಧೆಗಳ ಹೆಸರಿನಲ್ಲಿ ವ್ಯಾಪಾರೀಕರಣಕ್ಕೆ ಒಳಗಾಗಿಸುವ ವ್ಯವಸ್ಥೆ ಇತ್ಯಾದಿಗಳ ವಿರುದ್ಧ ಸ್ತ್ರೀ ಸಂಘಟನೆಗಳು ಎಷ್ಟೇ ಹುಯಿಲೆಬ್ಬಿಸಿದರೂ ಅಬಾಧಿತವಾಗಿ ಇವೆಲ್ಲವೂ ಮುಂದುವರೆಯುತ್ತಲೇ ಇದೆ. ಸೌಂದರ್ಯ ಸ್ಪರ್ಧೆಯಲ್ಲಿ ಸ್ಪರ್ಧಿಸಲು ಯುವ ಪೀಳಿಗೆಯ ಹುಡುಗಿಯರಲ್ಲಿ ಸ್ಪರ್ಧೆ ಹೆಚ್ಚಾಗುತ್ತಿದೆ. ಹಣ, ಕೀರ್ತಿ, ಸೌಲಭ್ಯಗಳ ಕಣ್ಣು ಕುಕ್ಕುವ ಆಕರ್ಷಣೆಗಳ ಮುಂದೆ ಶೀಲ, ಅಶ್ಲೀಲದ ಪ್ರಶ್ನೆಯೇ ಮುಖ್ಯವಾಗುತ್ತಿಲ್ಲ. ದೇಹ ಸೌಂದರ್ಯದ ಪ್ರದರ್ಶನಕ್ಕೆ, ನಗ್ನ ರೂಪದರ್ಶಿತ್ವಕ್ಕೆ ಮುಗಿಬಿದ್ದು ನುಗ್ಗುವ ಮೇಲುವರ್ಗದ, ಸುಶಿಕ್ಷಿತ ಹೆಣ್ಣುಮಕ್ಕಳು ತುದಿಗಾಲ ಮೇಲೆ ನಿಂತಿರುವಾಗ, ಯಾವ ಚಳುವಳಿಯ ಕೂಗೂ ಅವರನ್ನು ಸ್ಪರ್ಶಿಸುತ್ತಿಲ್ಲ. ಹೆಂಗಸರಿಂದಲೇ ಹೆಂಗಸರ ಶೋಷಣೆ ನಡೆಯುತ್ತಿರುವಾಗ, ಕ್ರೂರ ಹಿಂಸೆಗೆ ಒಳಗಾಗುತ್ತಿರುವಾಗ ಸಮಾಜದಲ್ಲಿ ಯಾರನ್ನು ದೂರಬೇಕಿದೆ?

ನಮ್ಮ ಸ್ತ್ರೀವಾದಿ ಚಿಂತಕರು, ಸಂಘಟಕರು, ಕಾರ್ಯಕರ್ತರು, ವಿವರಿಸಿದ್ದ ಸ್ತ್ರೀ ಶೋಷಣೆಯ ಸ್ವರೂಪ ಒಂದೇ ತೆರನಾಗಿಯೂ ಇಲ್ಲ. ನಮ್ಮ ಭಾರತೀಯ ಸಮಾಜದ ಹಿನ್ನೆಲೆಯಲ್ಲಿ ವಿವರಿಸಿದ ಮತ್ತು ಮನುಧರ್ಮಶಾಸ್ತ್ರಗಳಲ್ಲಿ ಹೇಳಿದ ಸ್ತ್ರೀ ವಿಚಾರ, ಸಂಬಂಧ ವಿಧಿ ನಿಯಮಗಳು, ನಿರ್ಬಂಧಗಳು ವೈಧಿಕ ಸಂಸ್ಕೃತಿಯ ಅಂತರ್ಗತವಾಗಿ ಬಂದಿವೆ. ಸಂಸ್ಕೃತೀಕರಣ ಪ್ರಕ್ರಿಯೆಯೊಂದಿಗೆ ಅನ್ಯ ಜಾತಿ ಸಮುದಾಯಗಳಿಗೂ ಇದು ವಿಸ್ತರಿಸಬೇಕೇ ಹೊರತು, ಭಾರತದಂತಹ ಬಹು ಸಂಸ್ಕೃತಿಯ ನಾಡಿನಲ್ಲಿ ಹಲವು ಜಾತಿ ಜನಾಂಗಗಳು, ಧರ್ಮಗಳು ಇದ್ದು, ಒಂದೊಂದು ಜಾತಿ, ಜನಾಂಗದ ಸಾಮಾಜಿಕ ಸಂರಚನೆಯ ಸ್ವರೂಪ ಬೇರೆ ಬೇರೆಯಾಗಿ ಇರುವುದರಿಂದ ಕಟ್ಟು ಪಾಡುಗಳು ಒಂದೇ ತೆರನಾಗಿಲ್ಲ. ಮಧ್ಯಮ ವರ್ಗದ ಮೇಲು ಜಾತಿ ಜನಾಂಗಗಳಲ್ಲಿ, ಕೋಮುಗಳಲ್ಲಿ ಹೆಂಗಸರಿಗಿರುವಷ್ಟು ನಿರ್ಬಂಧಗಳು ಕೆಳ ಜಾತಿವರ್ಗಗಳಲ್ಲಿ ಇಲ್ಲ. ಲೈಂಗಿಕ ಸ್ವಾತಂತ್ರ್ಯದ ಹಲವು ಮುಖಗಳಿವೆ. ವಿವಾಹ ಬಾಹಿರ ವಿವಾಹೋತ್ತರ ಸಂಬಂಧಗಳು, ವಿಧವಾ ವಿವಾಹ - ಇವೆಲ್ಲವೂ ನಿಷಿದ್ಧವೂ ಅಲ್ಲ' ಸಮಸ್ಯೆಯೂ ಅಲ್ಲ.

ಇಂತಹ ಒಂದು ಹಿನ್ನೆಲೆಯಲ್ಲಿ ಸ್ತ್ರೀವಾದದ ಬಗ್ಗೆ ಚರ್ಚೆಗಳು ನಡೆದವು; ನಡೆಯುತ್ತಿವೆಯಾದರೂ ಇವತ್ತಿನ ಸಂದರ್ಭದಲ್ಲಿ ಅದರ ಪ್ರಸ್ತುತತೆಯ ಬಗ್ಗೆ ಆಲೋಚಿಸುವಂತಾಗಿದೆ. ಸಾಹಿತ್ಯದಲ್ಲಿ ಅದರ ಚರ್ಚೆ ಅಗತ್ಯಕ್ಕಿಂತಲೂ ಹೆಚ್ಚಾಗಿ ನಡೆದಿದೆ. ಲೇಖಕಿಯರು ಸ್ತ್ರೀವಾದಿ ನೆಲೆಯಿಂದಲೇ ಸಾಹಿತ್ಯಕ್ಕೆ ಸ್ಪಂದಿಸುವುದನ್ನು ಸ್ಥಗಿತವಾಗಿಸಿ ಬದುಕಿನ ಇತರೆ ಆಯಾಮಗಳತ್ತ ಚಿಂತಿಸುವಂತಾಗಬೇಕು. ಯಾವುದೇ ಒಂದು ವಾದಕ್ಕೆ ಬದ್ಧವಾಗಿ ಬರೆಯುವುದು ಕ್ರಮೇಣ ಕ್ಲೀಷೆಗೆ ದಾರಿಯಾಗುತ್ತದೆ. ಸ್ತ್ರೀ ಸಮಸ್ಯೆಗಳೇ ಅಲ್ಲದೆ ವರ್ತಮಾನ ಜಗತ್ತಿನಲ್ಲಿ ನಮ್ಮ ಮುಂದೆ ಬಹುದೊಡ್ಡ ಸವಾಲುಗಳಿವೆ. ಜಾಗತೀಕರಣ. ಉದಾರೀಕರಣ, ಗಣಕೀಕರಣ, ಉಗ್ರವಾದ; ಮೊದಲಾದವು ಹೊಸ ಹೊಸ ಸಮಸ್ಯೆ, ಸವಾಲುಗಳನ್ನು ನಮ್ಮ ಮುಂದಿರಿಸಿವೆ. ಮಕ್ಕಳ ಮಾರಾಟ, ಹೆಣ್ಣು ಶಿಶುಗಳ ಕೊಲೆಯಷ್ಟೇ ಗಂಭೀರವಾದ ಸಮಸ್ಯೆಯಾಗಿದೆ.

ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ವಯಸ್ಸಾದವರು ಅಥವಾ ವೃದ್ಧರು ಅನಾದರ, ತಿರಸ್ಕಾರಗಳಿಗೆ ಒಳಗಾಗಿ ವೃದ್ಧಾಶ್ರಮಗಳಿಗೆಅಟ್ಟುವ ಪರಿಪಾಠ ಹೆಚ್ಚಾಗುತ್ತಿದೆ. ಹೀಗೆ ಸ್ತ್ರೀವಾದದ ಆಚೆಗೆ ಉಳಿದು ಸುಡುತ್ತಿರುವ ಸಮಸ್ಯೆಗಳಿಗೆ, ಸಂವೇದನೆಗಳಿಗೆ ಸಾಹಿತ್ಯದಲ್ಲಿ ಅಭಿವ್ಯಕ್ತಿ ದೊರೆಯಬೇಕಿದೆ. ಇವತ್ತಿನ ಸಂದರ್ಭದಲ್ಲಿ 'ಹೆಣ್ಣು - ಗಂಡು' ಹಿಂದಿನಂತೆ, ಲಿಂಗ ತಾರತಮ್ಯದ 'ಪ್ರಜ್ಞೆ' ಯೊಂದಿಗೆ ಹಿಂಜರಿಕೆ, ಸಂಕೋಚಗಳನ್ನು ದಾಟಿ ಸ್ಪರ್ಧಾತ್ಮಕ ಮನೋಧರ್ಮದೊಂದಿಗೆ ಜ್ಞಾನ ಕ್ಷೇತ್ರ, ಆಡಳಿತ ಕ್ಷೇತ್ರ, ರಾಜಕೀಯ, ಕಲಾಕ್ಷೇತ್ರ ವಾಣಿಜ್ಯೋದ್ಯಮ - ಮೊದಲಾಗಿ ಎಲ್ಲ ಕ್ಷೇತ್ರಗಳಲ್ಲೂ ಮುನ್ನುಗ್ಗಿ ಪ್ರವೇಶ ಪಡೆದು ಕೊಳ್ಳುತ್ತಿದ್ದಾರೆ. ವಿಜ್ಞಾನ, ತಂತ್ರಜ್ಞಾನಗಳ ಅನೂಹ್ಯ ಸಾಧನೆಗಳಿಂದಾಗಿ, ಎಲ್ಲರಿಗೂ ಮುಕ್ತ ಅವಕಾಶಗಳು ತೆರೆದು ಕೊಂಡಿವೆ. ಇಂತಹ ಪರಿಸ್ಥಿತಿಯಲ್ಲಿ 'ಹೆಣ್ಣು - ಗಂಡೆಂಬ' ಮೀಸಲು ಭಾವಗಳು ಮುಖ್ಯವಾಗದೆ ಹಣ ಸಂಪಾದನೆಯೇ ಬದುಕಿನ ಗುರಿಯಾಗಿ ಪರಿವರ್ತಿತವಾಗಿರುವುದರಿಂದ ಮನುಷ್ಯ ಸಂಬಂಧಗಳು, ಮಾನವೀಯ ಮೌಲ್ಯಗಳು, ಕುಟುಂಬ ವ್ಯವಸ್ಥೆ - ಮುಂತಾದವುಗಳಲ್ಲಿ ನಂಬಿಕೆಯೇ ಕುಸಿದು ಹೋಗಿದೆ. ಆದ್ದರಿಂದ 'ಸ್ತ್ರೀವಾದಿ' ಬರಹಗಾರ್ತಿಯರು ಇಂತಹ ಸಮಸ್ಯೆಗಳ ಸಂಕೀರ್ಣತೆಯ ಬಗ್ಗೆ ಗಂಭೀರವಾಗಿ ಚಿಂತಿಸಬೇಕಾಗಿದೆ.





ಡಾ. ವಿಜಯಾ ಸುಬ್ಬರಾಜ್ ಅವರ ಸಂಶೋಧನಾ ಕೃತಿ ನೃತ್ಯ - ಗೀತ - ನಾಟಕ ಗ್ರಂಥರಲ್ಲಿ ಪ್ರಕಟವಾಗಿ ಕನ್ನಡ ವಿದ್ವತ್ವಲಯದಲ್ಲಿ ಅವರಿಗೊಂದು ಗಮನೀಯ ಸ್ಥಾನವನ್ನು ಕಲ್ಪಿಸಿಕೊಟ್ಟಿತು. ಅನಂತರ, ಅವರ ಪತ್ರಿಕಾ ಲೇಖನಗಳು ಮತ್ತು ಸಭೆ- ಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳು ಅವರು ಕನ್ನಡದ ಪ್ರಮುಖ ವಿಮರ್ಶಕಿಯರಲ್ಲೊಬ್ಬರು ಎಂಬುದನ್ನು ದೃಢ ಪಡಿಸಿದುವು. ಪ್ರಸ್ತುತ ಸಂಕನದ ವಿಮರ್ಶಾ ಲೇಖನಗಳು ಅವರ ಪಾಂಡಿತ್ಯದ ಹರಹು, ಸಾಹಿತ್ಯಕ ಸ್ಪಂದನ ಶಕ್ತಿ, ಮತ್ತು ವಿಶ್ಲೇಷಣಾ ಸಮರ್ಥ್ಯ ಇವುಗಳನ್ನು ಮತ್ತೊಮ್ಮೆ ಸಮರ್ಥವಾಗಿ ದಾಖಲಿಸುತ್ತವೆ.

ಪ್ರಸ್ತುತ ಸಂಕಲನದಲ್ಲಿರುವ ಹದಿಮೂರು ಲೇಖನಗಳು ಗೀತ ನಾಟಕಗಳು, ಕಾದಂಬರಿಗಳು, ಕಾವ್ಯ, ಇತ್ಯಾದಿ ಕನ್ನಡ ವಾಙ್ಮಯದ ಸರಿ ಸುಮಾರು ಎಲ್ಲಾ ಪ್ರಭೇದಗಳಿಗೂ ಸ್ಪಂದಿಸುತ್ತವೆ. ಹೆಚ್ಚಿನ ಓದುಗರು ವಿಮರ್ಶಕರು ಅಷ್ಟಾಗಿ ಗಮನಿಸದ ಗೌರೀಶ ಕಾಯ್ಕಿಣಿ ಅವರ ಗೀತ ನಾಟಕಗಳು, ಹರಿಹರೇಶ್ವರರ ಕಾವ್ಯ ಇತ್ಯಾದಿಗಳ ಬಗ್ಗೆ ಲೇಖನಗಳಿರುವುದು ಈ ಸಂಕಲನದ ಒಂದು ಹೆಗ್ಗಳಿಕೆ. ಪ್ರತಿಯೊಂದು ಲೇಖನವೂ ಪ್ರಾರಂಭದಲ್ಲಿ ಕೃತಿಯನ್ನು ಆಳವಾಗಿ ಅಭ್ಯಸಿಸಿ, ವಿಸ್ತೃತವಾಗಿ ವ್ಯಾಖ್ಯಾನಿಸಿ, ಅನಂತರ ಆ ವ್ಯಾಖ್ಯಾನವನ್ನಾಧರಿಸಿ ಕೆಲವು ಮೌಲ್ಯಾತ್ಮಕ ತೀರ್ಮಾನಗಳನ್ನು ತಲಪುತ್ತದೆ. ವಿಜಯಾ ಅವರ ವಿಮರ್ಶೆ ಮೂಲತಃ' ಸಹೃದಯ ವಿಮರ್ಶೆ': ಕೃತಿಯೊಂದನ್ನು ಅರ್ಥಮಾಡಿಕೊಳ್ಳಲು ಮತ್ತು ಅದರ ಗುಣ - ಸಾಧನೆಗಳನ್ನು ಗುರುತಿಸಲು ಇವರು ಒತ್ತು ಕೊಡುತ್ತಾರೆ. ಆದರೆ, ಅವಶ್ಯಕವೆನಿಸಿದಾಗ, (ತುಂಬಾ ಮೆಚ್ಚುಗೆಯಿದ್ದರೂ) ಕೆಲವೊಂದು ಕೃತಿಗಳ ಮಿತಿಗಳನ್ನು ದಾಖಲಿಸಲೂ ಇವರು ಹಿಂಜರಿಯುವುದಿಲ್ಲ. (ಉದಾ: ಭವ ಮತ್ತು ದಿವ್ಯ ಕಾದಂಬರಿಗಳ ಮತ್ತು ಚಾರು ವಸಂತ ಕಾವ್ಯದ ವಿಮರ್ಶೆ) ಯಾವುದೇ ಕೃತಿಯನ್ನು ಕೈಗೆತ್ತಿಕೊಂಡರೂ ಮೊದಲು ಅದನ್ನು ಇತರ ಸಮಾನ ಕೃತಿಗಳ ನಡುವೆ ಇಟ್ಟು ನೋಡುವುದು ಇವರಿಗೆ ಇಷ್ಟವಾದ ವಿಮರ್ಶಾ ಮಾರ್ಗ (ಉದಾ: ಲ. ನಾ. ಭಟ್ಟರ ಊರ್ವಶಿ ಮತ್ತು ಪುತಿನ ಅವರ ಗೀತ ನಾಟಕಗಳು, ಇತ್ಯಾದಿ) ಈ ಬಗೆಯ ತೌಲನಿಕ ಚೌಕಟ್ಟು ಅವರ ವಿಮರ್ಶೆಯನ್ನು ಹೆಚ್ಚು ವಿಶ್ವಸನೀಯವಾಗಿಸುತ್ತದೆ. ಮುಖ್ಯವಾಗಿ, ಸ್ತ್ರೀಪರ ಚಿಂತನೆಯ ಬಗ್ಗೆ ಇವರಿಗೆ ಒಲವಿದ್ದರೂ ಯಾವುದೇ ಒಂದು ಸಿದ್ಧಾಂತಕ್ಕೆ ಬದ್ಧರಾಗದೆ ಸಾಹಿತ್ಯವನ್ನು ಅರ್ಥೈಸಲು ಇವರು ಪ್ರಯತ್ನಿಸುತ್ತಾರೆ. "ಯಾವುದೇ ಒಂದು ವಾದಕ್ಕೆ ಬದ್ಧವಾಗಿ ಬರೆಯುವುದು ಕ್ರಮೇಣ ಕ್ಲೀಷೆಗೆ ದಾರಿಯಾಗುತ್ತದೆ" ಎಂಬ ಆರೋಗ್ಯಕರ ನಿಲುವು ಇವರದು.

ಸ್ಪಂದನ ವಿಜಯಾ ಅವರ ಪ್ರಥಮ ವಿಮರ್ಶಾ ಸಂಕಲನವೆಂದು ಎನಿಸದಷ್ಟು ಪ್ರಬುದ್ಧವಾಗಿದೆ. ಇವರ ವಿಮರ್ಶಾ ಕಾರ್ಯ ಹೀಗೇ ಮುಂದುವರೆದು ಇನ್ನೂ ಸಮೃದ್ಧವಾಗಲಿ ಎಂದು ಹಾರೈಸುತ್ತೇನೆ.

ಡಾ. ಸಿ. ಎನ್. ರಾಮಚಂದ್ರನ್






ISBN 81-8380-034-3

ಸಿವಿಜಿ ಪಬ್ಲಿಕೇಷನ್ಸ್
ಬೆಂಗಳೂರು

Rs.140-00